# ಗೀತಾ ಸಾರೋದ್ಧಾರ



ಶ್ರೀಶ್ರೀ ವಿಶ್ವೇಶ ತೀರ್ಥ ಶ್ರೀಪಾದರು
ಪೇಜಾವರ ಅಧೋಕ್ಷಜ ಮಠ
ಉಡುಪಿ

# ಗೀತಾ ಸಾರೋದ್ಧಾರ

(ಭಗವದ್ಗೀತಾಪ್ರವಚನಗಳ ಸಂಗ್ರಹ)

ಉಡುಪಿ ಶ್ರೀ ಪಲಿಮಾರು-ಭಂಡಾರಕೇರಿ ಮಠಾಧೀಶ

**ಶ್ರೀ ವಿದ್ಯಾಮಾನ್ಯತೀರ್ಥ ಶ್ರೀಪಾದರ**

ಮುನ್ನುಡಿ ಸಹಿತ

ಲೇಖಕರು

ಉಡುಪಿ ಶ್ರೀಪೇಜಾವರ ಅಧೋಕ್ಷಜಮಠಾಧೀಶ

**ಶ್ರೀ ವಿಶ್ವೇಶತೀರ್ಥ ಶ್ರೀಪಾದರು**

ಪ್ರಕಾಶನ

**ಪೇಜಾವರ ಅಧೋಕ್ಷಜ ಮಠ**

ಉಡುಪಿ

# ಗೀತಾಸಾರೋದ್ಧಾರ

ಶ್ರೀವಿದ್ಯಾಮಾನ್ಯತೀರ್ಥಶ್ರೀಪಾದರು ಬೆಂಗಳೂರಿನಲ್ಲಿ ನಡೆದ ಶ್ರೀ ವಿಶ್ವೇಶತೀರ್ಥ ಶ್ರೀಪಾದರ ಪೀಠಾರೋಹಣದ ೬೦ನೇ ವರ್ಷದ ರಾಷ್ಟ್ರೀಯ ಅಭಿವಂದನ ಸಮಾರಂಭದಲ್ಲಿ ದಿ. ೨೮-೧೧-೧೯೯೯ರಂದು ಬಿಡುಗಡೆಗೊಳಿಸಿದರು.

ಆರನೆಯ ಆವೃತ್ತಿ - ೧೯೯೯



ಪ್ರತಿಗಳು : 2000

ಪ್ರಕಾಶನ : **ಪೇಜಾವರ ಅಧೋಕ್ಷಜಮಠ**
ಉಡುಪಿ - ೫೭೬೧೦೧

ಅಕ್ಷರ ಜೋಡಣೆ: ಪೂರ್ಣಪ್ರಜ್ಞ ಸಂಶೋಧನ ಮಂದಿರ
ಪೂರ್ಣಪ್ರಜ್ಞ ವಿದ್ಯಾಪೀಠ, ಕತ್ತರಿಗುಪ್ಪ ಮುಖ್ಯರಸ್ತೆ.

ಮುದ್ರಣ : ಬೃಂದಾವನ್ ಪ್ರಿಂಟರ್ಸ್ ಮತ್ತು ಪಬ್ಲಿಷರ್ಸ್, ಬೆಂಗಳೂರು.

## ಆರನೆಯ ಆವೃತ್ತಿಯ ಬಗ್ಗೆ

'ಗೀತಾಸಾರೋದ್ಧಾರ'ವು ಆರನೆಯ ಮುದ್ರಣವನ್ನು ಹೊಂದುತ್ತಿರುವುದು ಸಂತೋಷದ ಸಂಗತಿಯಾಗಿದೆ. ಜಿಜ್ಞಾಸುಗಳಾದ ಅನೇಕ ಜನರು, ಅದರಲ್ಲೂ ಯುವಕರು ಇದನ್ನು ಪಡೆದು ಓದಲು ಉತ್ಸಾಹವನ್ನು ವ್ಯಕ್ತಪಡಿಸುತ್ತಿರುವುದು ನಿಜವಾಗಿಯೂ ಉತ್ತೇಜನಕರವಾದ ಸಂಗತಿಯಾಗಿದೆ. ಕನ್ನಡಿಗರು ಹೆಚ್ಚು ಸಂಖ್ಯೆಯಲ್ಲಿ ಈ ಆರನೆಯ ಮುದ್ರಣದ ಪ್ರಯೋಜನವನ್ನು ಪಡೆಯಲೆಂದು ನಾವು ಆಶಿಸುವೆವು. ಇಂಗ್ಲೀಷ್ ಮತ್ತು ಹಿಂದಿಯಲ್ಲಿಯೂ ಇದರ ಭಾಷಾಂತರವನ್ನು ಪ್ರಕಟಿಸುವ ಯೋಜನೆ ರೂಪುಗೊಳ್ಳುತ್ತಲಿದೆ. 'ಗೀತಾಸಾರೋದ್ಧಾರ'ವನ್ನು ಓದುವವರು ತಮ್ಮ ಸಂದೇಹ ಹಾಗೂ ಜಿಜ್ಞಾಸೆಗಳಿಗಾಗಿ ನಮ್ಮ ಜೊತೆಗೆ ಪತ್ರವ್ಯವಹಾರವನ್ನು ನಡೆಸುವುದಾದರೆ ನಾವದನ್ನು ಸಂತೋಷದಿಂದ ಸ್ವಾಗತಿಸುವೆವು. ಮತ್ತು ನಮಗೆ ಶಕ್ಯವಿದ್ದ ರೀತಿಯಲ್ಲಿ ಅವರ ಜಿಜ್ಞಾಸೆಯನ್ನು ಪರಿಹರಿಸಲು ಪ್ರಯತ್ನಿಸುವೆವು. ಶ್ರೀಕೃಷ್ಣನ ಮತ್ತು ಶ್ರೀಮದಾಚಾರ್ಯರ ಅನುಗ್ರಹದಿಂದ ಈ ಗೀತೆಯ ಸಂದೇಶವು ಮನೆ- ಮನೆಗಳಲ್ಲಿಯೂ ಪ್ರತಿಧ್ವನಿಸಲಿ ಎಂಬುದೇ ನಮ್ಮ ಹಿರಿಯ ಹಾರೈಕೆಯಾಗಿದೆ.

ಶ್ರೀ ವಿಶ್ವೇಶತೀರ್ಥ ಶ್ರೀಪಾದರು
ಶ್ರೀ ಪೇಜಾವರ ಅಧೋಕ್ಷಜಮಠ,
ಉಡುಪಿ

# ಮೊದಲ ಮಾತು

ಧರ್ಮ, ವೇದಾಂತ ತತ್ತ್ವಗಳನ್ನು ಸಂಕ್ಷಿಪ್ತವಾಗಿ ಸರಳ ಸುಂದರ ರೀತಿಯಲ್ಲಿ ನಮ್ಮ ಮುಂದೆ ಇಡುವ ಏಕೈಕ ಧರ್ಮಗ್ರಂಥವೆಂದರೆ ಭಗವದ್ಗೀತೆಯಾಗಿದೆ. ಈ ಪುಟ್ಟ ಗ್ರಂಥದಿಂದ ಪರಿಹರಿಸಿಕೊಳ್ಳಲಾಗದ ಜೀವನ ಸಮಸ್ಯೆಗಳೇ ಇಲ್ಲವೆನ್ನಬಹುದು. ನಮ್ಮ ಜೀವನವು ಸರ್ವಾಂಗಸುಂದರವಾಗಲು ಅವಶ್ಯವಾದ ಎಲ್ಲ ಸಾಮಗ್ರಿಗಳ ಸರಿಯಾದ ಪರಿಚಯವನ್ನು ಇದು ಮಾಡಿಕೊಡುತ್ತದೆ.

ಎಂತಹ ಸಂದಿಗ್ಧ ಪರಿಸ್ಥಿತಿಯಲ್ಲಿಯೂ ಮಾನವನು ಯಾವ ರೀತಿ ನಡೆಯಬೇಕೆನ್ನುವ ಬಗ್ಗೆ ಅಸಂದಿಗ್ಧ ಮಾರ್ಗದರ್ಶನವನ್ನು ಗೀತೆಯಿಂದ ಪಡೆಯಬಹುದು. ಜೀವನದ ರೂಪರೇಷೆಗಳನ್ನು ನಿರ್ಧರಿಸಬಲ್ಲ ತಾತ್ತ್ವಿಕ ಸಂಗತಿಗಳನ್ನೆಲ್ಲ ಕಾಠಿಣ್ಯ, ಜಟಿಲತೆಗಳಿಲ್ಲದೆ ವಿವೇಚಿಸುವ ಇಂತಹ ಸ್ಪಷ್ಟ ಹಾಗೂ ಸರಳ ಧರ್ಮಗ್ರಂಥವು ಬೇರೊಂದಿರಲಾರದು.

ಗೀತೆಯನ್ನು ಉಪದೇಶಿಸಿರುವದು ಶ್ರೀಕೃಷ್ಣನಾದರೆ ಆ ಉಪದೇಶವನ್ನು ಗ್ರಂಥರೂಪಕ್ಕೆ ಇಳಿಸಿದವರು ಶ್ರೀವೇದವ್ಯಾಸರು. ಪರಮಾತ್ಮನ ಈ ಎರಡು ರೂಪಗಳಿಂದ ಹೊರಬಂದಿರುವ ಗೀತೆಯ ಪವಿತ್ರತೆ ಹಾಗೂ ಮಹತ್ತ್ವವನ್ನು ನಾವು ಎಷ್ಟೆಂದು ಬಣ್ಣಿಸಲಿ? ಭಗವಂತನೇ ಸಾಕ್ಷಾತ್ತಾಗಿ ಮಾನವಸಮಾಜಕ್ಕೆ ನೀಡಿದ ಅಮೃತಮಯ ಸಂದೇಶವಿದು.

**ಯಾ ಸ್ವಯಂ ಪದ್ಮನಾಭಸ್ಯ ಮುಖಪದ್ಮಾದ್ವಿನಿಃಸೃತಾ ।**

ಇದು ತತ್ತ್ವಶಾಸ್ತ್ರವೂ ಅಹುದು; ಜೀವನ ಶಾಸ್ತ್ರವೂ ಅಹುದು. ಆಧ್ಯಾತ್ಮಿಕ ತತ್ತ್ವ ಹಾಗೂ ಲೌಕಿಕ ಜೀವನ ಇವೆರಡನ್ನೂ ಇಷ್ಟು ಪರಿಷ್ಕೃತ ರೀತಿಯಿಂದ ಸಮನ್ವಯಗೊಳಿಸುವ ವಿಧಾನವನ್ನು ಬೇರೆ ಯಾವ ಗ್ರಂಥಗಳಲ್ಲಿಯೂ ಕಾಣಲಾರೆವು.

ಹುಬ್ಬಳ್ಳಿಯಲ್ಲಿ ಚಾತುರ್ಮಾಸ್ಯದ ಅವಸರದಲ್ಲಿ ಭಗವದ್ಗೀತೆಯ ಬಗ್ಗೆ ಉಪನ್ಯಾಸಗಳನ್ನು ನೀಡುವ ಸದವಕಾಶವು ನಮಗೆ ದೊರೆಯಿತು. ಅದರ ಫಲಿತಾಂಶವೇ ಈ ಕೃತಿಯಾಗಿದೆ. ಅಲ್ಲಿ ನೀಡಿದ ಉಪನ್ಯಾಸಗಳನ್ನೇ ಸಂಗ್ರಹಿಸಿ ಒಂದು ಹೊತ್ತಿಗೆಯನ್ನು ಪ್ರಕಟಿಸಬೇಕೆಂಬ ಅನೇಕ ಜನರ ಅಪೇಕ್ಷೆಯ ಫಲವಾಗಿ ಈ ಕೃತಿಯು ಬೆಳಕಿಗೆ ಬರಲು ಅವಕಾಶವಾಯಿತು.

300 ಪುಟಗಳ ಈ ಉಪನ್ಯಾಸಮಾಲೆಯಲ್ಲಿ ಗೀತೆಯ ಅಲ್ಪಾಂಶದ ಪರಿಚಯವನ್ನು ಮಾತ್ರ ಮಾಡಿಸಲು ನಾವು ಪ್ರಯತ್ನಿಸಿರುವೆವು. ಗೀತೆಯು ಪುಟ್ಟ ಗ್ರಂಥವೇ ಆಗಿದ್ದರೂ ಪರಿಶೀಲನೆ ಮಾಡಿದಷ್ಟು, ವಿಷಯದ ವಿಶ್ವರೂಪ ದರ್ಶನವು ಅಲ್ಲಿ ಆಗುತ್ತದೆ. ಈ ಅಲ್ಪ ಕೃತಿಯಲ್ಲಿ ಗೀತೆಯ ವಿರಾಡ್ರೂಪದ ಅಲ್ಪಭಾಗದ ದರ್ಶನವನ್ನು ಮಾತ್ರ ಮಾಡಿಸಲು ಸಮರ್ಥರಾಗಿರುವೆವು. ಗೀತೆಯ ಹೆಚ್ಚಿನ ಅಭ್ಯಾಸ, ಪರಿಶೀಲನೆಗಳನ್ನು ಮಾಡುವವರಿಗೆ ಇದು ಬರೇ ದಿಗ್ದರ್ಶನ ಮಾತ್ರವಾಗಿದೆ. ಜನರಲ್ಲಿ, ಗೀತೆಯ ಅರ್ಥವಿವೇಚನೆಯ ಬಗ್ಗೆ ಆಸಕ್ತಿಯನ್ನು ಕೆರಳಿಸುವದು ಮಾತ್ರ ಈ ಕೃತಿಯ ಉದ್ದೇಶವಾಗಿದೆ. ಗೀತೆಯ ಅರ್ಥದ ಪೂರ್ಣ ನಿರೂಪಣೆಯು ಈ ಗ್ರಂಥದಲ್ಲಿ ಇದೆಯೆಂದು ಯಾರೂ ಭಾವಿಸಬಾರದು.

ಸಾಮಾನ್ಯ ಜನರ ನಿತ್ಯಜೀವನದ ಸಮಸ್ಯೆಗಳು, ಆಧುನಿಕ ಪರಿಸ್ಥಿತಿ ಇವುಗಳನ್ನೆಲ್ಲ ಗಮನದಲ್ಲಿಟ್ಟುಕೊಂಡು ಇವುಗಳ ಬಗ್ಗೆ ಗೀತೆಯು ನೀಡುವ ವಿಧಾಯಕ ಸಂದೇಶವನ್ನು ಅರ್ಥಮಾಡಿಕೊಡುವದೇ ಗೀತೆಯ ಉಪನ್ಯಾಸ ಸಂದರ್ಭದ ನಮ್ಮ ಮುಖ್ಯ ಉದ್ದೇಶವಾಗಿತ್ತು. ಆದುದರಿಂದ ಹೆಚ್ಚಿನ ಶಾಸ್ತ್ರೀಯ ವಿವೇಚನೆಗೆ ಇಳಿಯದೆ ಸರಳ ರೀತಿಯಲ್ಲಿ ಗೀತೆಯ ತತ್ತ್ವಗಳನ್ನು, ಆಧುನಿಕ ಜೀವನಕ್ಕೂ ಅವುಗಳಿಗೂ ಇರಬೇಕಾದ ಸಂಬಂಧವನ್ನು ವಿವರಿಸಲು ಪ್ರಯತ್ನಿಸಿರುವೆವು. ಗೀತೆಯಲ್ಲಿರುವ ತಾತ್ತ್ವಿಕ ವಿಷಯಗಳ ವಿಸ್ತೃತ ವಿವೇಚನೆ ಹಾಗೂ ಗೀತೆಯ ಬಗ್ಗೆ ಬೇರೆ ಬೇರೆ ವ್ಯಕ್ತಿಗಳು ಮಾಡಿರುವ ವ್ಯಾಖ್ಯಾನ ಸಮಾಲೋಚನೆಗಳ ಶಾಸ್ತ್ರೀಯ ವಿಮರ್ಶೆ ಇವುಗಳಿಗಾಗಿಯೇ ಬೇರೊಂದು ಗ್ರಂಥವನ್ನು ಸಾವಕಾಶವಾಗಿ ಬರೆಯಬೇಕೆಂದು ನಮಗೆ ಅಪೇಕ್ಷೆಯಿದೆ.

ಈ ಪುಸ್ತಕದಲ್ಲಿ ಕೆಲವೆಡೆ ಗೀತೆಯ ತಾತ್ಪರ್ಯವನ್ನು ವಿವರಿಸುವಲ್ಲಿ ಬೇರೆ ಬೇರೆ ವ್ಯಾಖ್ಯಾನಕಾರರಿಗೆ ಉಂಟಾಗಿರುವ ಭಿನ್ನಾಭಿಪ್ರಾಯಗಳನ್ನು ಸ್ವಲ್ಪಮಟ್ಟಿಗೆ ವಿವೇಚಿಸಲಾಗಿದೆ. ತುಲನಾತ್ಮಕ ದೃಷ್ಟಿಯ ಅಭ್ಯಾಸದಿಂದ ಗೀತೆಯ ಹೃದಯವನ್ನು ಅರಿಯಲು ಹೆಚ್ಚು ಅನುಕೂಲವಾಗುವದೆಂಬ ದೃಷ್ಟಿಯಿಂದ ಇಂತಹ ವಿಮರ್ಶೆಯನ್ನು ಮಾಡಲಾಗಿದೆಯಲ್ಲದೆ, ಖಂಡನ - ಮಂಡನಗಳ ಕಸರತ್ತನ್ನು ತೋರಿಸುವ ಉದ್ದೇಶದಿಂದಲ್ಲ. ಪೂರ್ವಗ್ರಹದೂಷಿತವಾಗದ ಮನಸ್ಸಿನಿಂದ ಬೇರೆ ಬೇರೆ ವಾದಗಳ ಗುಣ - ದೋಷಗಳನ್ನು ವಿಮರ್ಶೆ ಮಾಡುವದರಿಂದ ಯಾವ ಮಾನಸಿಕ ಉದ್ರೇಕಗಳಿಗೂ ಅವಕಾಶವಿಲ್ಲವೆಂದೂ

ತತ್ತ್ವಜ್ಞಾನದ ಹಿತಕರವಾದ ಬೆಳವಣಿಗೆಗೆ ಇದು ಅತ್ಯಂತ ಆವಶ್ಯಕವೆಂದೂ ನಮ್ಮ ವೈಯಕ್ತಿಕ ಅಭಿಪ್ರಾಯವಾಗಿದೆ. ಈ ಉಪನ್ಯಾಸಗಳಿಗೆ ಹಿನ್ನೆಲೆಯಾಗಿ ಶ್ರೀಮಧ್ವಾಚಾರ್ಯರ ಭಾಷ್ಯವನ್ನೇ ನಾವು ಅನುಸರಿಸಿದ್ದರೆ ಅದು ಮತೀಯ ಅಭಿಮಾನದಿಂದಲ್ಲ. ಯಾವುದೇ ಆಗ್ರಹ, ದುರಭಿಮಾನಗಳಿಲ್ಲದೆ ಮುಕ್ತ ಮನಸ್ಸಿನಿಂದ ವಿಮರ್ಶಿಸಿದಾಗ ಗೀತೆಯ ಹೃದಯವು ಶ್ರೀಮಧ್ವಾಚಾರ್ಯರ ಭಾಷ್ಯದಲ್ಲಿ ಪ್ರತಿಬಿಂಬಿತವಾಗಿರುವುದನ್ನು ಮನಗಂಡೇ ಅವರು ತೋರಿದ ಬೆಳಕಿನಲ್ಲಿ ಈ ಗೀತೆಯ ರತ್ನಗಳನ್ನು ಜನರ ಮುಂದಿಡಲು ಇಲ್ಲಿ ಪ್ರಯತ್ನಿಸಿರುವೆವು. ಸದುದ್ದೇಶಪೂರಿತವಾದ ಈ ಚಿಕ್ಕ ಪ್ರಯತ್ನವನ್ನು ಜನತೆಯು ಪ್ರೇಮ, ಸಹಾನುಭೂತಿಗಳಿಂದ ವೀಕ್ಷಿಸಿ ನಮಗೆ ಹೆಚ್ಚಿನ ಉತ್ಸಾಹ, ಉತ್ತೇಜನಗಳನ್ನು ನೀಡುವರಾಗಿ ಆಶಿಸುವೆವು.

ನಮ್ಮ ಪೂಜ್ಯ ಗುರುಗಳಾದ ಶ್ರೀ ಪಲಿಮಾರು-ಭಂಡಾರಕೇರಿ ಶ್ರೀಗಳವರು ಮುನ್ನುಡಿಯನ್ನು ಬರೆದು ಈ ಕೃತಿಯನ್ನು ಅನುಗ್ರಹಿಸಿದ ಬಗ್ಗೆ ಅವರ ಚರಣಗಳಿಗೆ ಅನಂತ ಪ್ರಣಾಮಗಳನ್ನು ಅರ್ಪಿಸುತ್ತೇವೆ.

ಹುಬ್ಬಳ್ಳಿಯ ಅಶೋಕ ಹೋಟೆಲಿನ ಮಾಲಿಕರಾದ ಶ್ರೀಯುತ ದಿವಂಗತ ರಾಮಚಂದ್ರಭಟ್ಟರು ಅವಿರತವಾಗಿ ನಮ್ಮ ಬೆನ್ನುಹಿಡಿದು ಹುಬ್ಬಳ್ಳಿಯ ಗೀತೋಪನ್ಯಾಸಗಳು ನಮ್ಮಿಂದ ಲಿಪಿಬದ್ಧಗೊಳ್ಳುವಂತಾಗಲು ಮುಖ್ಯ ಪ್ರೇರಕರಾಗಿರುವರು. ಅವರ ಅವಿರತ ಶ್ರಮ, ಸಾಹಸ ಹಾಗೂ ಉದಾರತೆಯ ಫಲವಾಗಿಯೇ ಈ ಕೃತಿಯು ಬೆಳಕಿಗೆ ಬರುವಂತಾಗಿದೆ. ಈ ಜ್ಞಾನಕಾರ್ಯಕ್ಕೆ ಸರ್ವರೀತಿಯಿಂದಲೂ ಸಹಾಯ ನೀಡಿ ಹರಿ - ಗುರುಗಳ ಪೂರ್ಣಾನುಗ್ರಹಕ್ಕೆ ಪಾತ್ರರಾದ ದಿವಂಗತ ಶ್ರೀರಾಮಚಂದ್ರ ಭಟ್ಟರಿಗೆ ಸರ್ವವಿಧ ಶ್ರೇಯಸ್ಸನ್ನು ದಯಪಾಲಿಸುವಂತೆ ಭಗವಂತನನ್ನು ಪ್ರಾರ್ಥಿಸುವೆವು.

ಈ ಕೃತಿಯ ಆರನೆಯ ಆವೃತ್ತಿಯ ಪ್ರಕಾಶನದ ಬಗ್ಗೆ ಅನೇಕ ರೀತಿಯ ಸೇವೆಯನ್ನು ಸಲ್ಲಿಸಿ ಭಕ್ತಿ, ಉತ್ಸಾಹಗಳಿಂದ ದುಡಿದ ಕಾಪು ಹಯವದನ ಪುರಾಣಿಕರಿಗೆ ಮತ್ತು ಶಿಷ್ಯರೆಲ್ಲರಿಗೂ ಹರಿ - ವಾಯುಗಳ ವಿಶೇಷಾನುಗ್ರಹವನ್ನು ಪ್ರಾರ್ಥಿಸುವೆವು.

ಶ್ರೀ ವಿಶ್ವೇಶತೀರ್ಥ ಶ್ರೀಪಾದರು
ಶ್ರೀ ಪೇಜಾವರ ಅಧೋಕ್ಷಜಮಠ, ಉಡುಪಿ

# ಮುನ್ನುಡಿ

ಶ್ರೀಕೃಷ್ಣಪರಮಾತ್ಮನೆಂಬ ಉದಯಾದ್ರಿಯಿಂದ ಉದಿಸಿದ ಶ್ರೀಮದ್ ಭಗವದ್‌ಗೀತೆಯೆಂಬ ಸೂರ್ಯನು, ಸಜ್ಜನರ ಹೃದಯಕಮಲಗಳನ್ನು ಅರಳಿಸುತ್ತ ಬೆಳಗುತ್ತಿದ್ದರೂ ಗೀತೆಯ ವ್ಯಾಖ್ಯಾನವೆಂಬ ಹೆಸರಿನಿಂದ ಕೆಲವರು ರಚಿಸಿದ ಅಪ್ರಗಲ್ಭ ಗ್ರಂಥಗಳೆಂಬ ಮೋಡಗಳು ಈ ಗೀತಾಸೂರ್ಯನನ್ನು ಆಗಾಗ ಮುಚ್ಚುತ್ತ ಬಂದವು. ಕೊನೆಗೆ ಮುಖ್ಯವಾಯುದೇವರ ಅವತಾರರಾದ ಶ್ರೀಮದಾನಂದತೀರ್ಥರು ಆ ಮೋಡಗಳನ್ನು ದೂರ ಓಡಿಸುವ ಜಂಝಾವಾತಗಳಂತಿರುವ 'ಗೀತಾಭಾಷ್ಯ' ಮತ್ತು 'ಗೀತಾತಾತ್ಪರ್ಯ' ಗಳನ್ನು ರಚಿಸಿದರು. ಶ್ರೀಜಯತೀರ್ಥರು ಇವುಗಳಿಗೆ ಅನುಕ್ರಮವಾಗಿ 'ಪ್ರಮೇಯದೀಪಿಕೆ' ಮತ್ತು 'ನ್ಯಾಯದೀಪಿಕೆ' ಗಳೆಂಬ ಟೀಕೆಗಳನ್ನು ಬರೆದು ಆ ಮೋಡಗಳನ್ನು ಇನ್ನೂ ಚದುರಿಸಿ ನೀರಸ, ನಿಸ್ತೇಜಗಳನ್ನಾಗಿ ಮಾಡಿದರು.

ಆದರೂ ಆ ಗೀತಾಸೂರ್ಯನ ಪ್ರಖರ ಕಿರಣಗಳನ್ನು ಸಹಿಸಲಾರದ ಸಾಮಾನ್ಯ ಜನರ ದೃಷ್ಟಿಗೆ ಗೀತೆಯ ಸಂದೇಶದ ಬೆಳದಿಂಗಳು ಆವಶ್ಯಕವಾಗಿತ್ತು. ಈ ಕೊರತೆಯನ್ನು ನೀಗಿಸಿದವರು ಪ್ರಾತಃಸ್ಮರಣೀಯರಾದ ಶ್ರೀಸತ್ಯಧ್ಯಾನತೀರ್ಥರೆಂಬ ಚಂದ್ರಮರು. ಅವರು, ಪಂಡಿತರು ಮಾತ್ರ ನೋಡಬಹುದಾದ ಗೀತಾಸೂರ್ಯನ ಆ ಪ್ರಖರ ಕಿರಣಗಳನ್ನು ತಾವು ಧರಿಸಿ 'ಗೀತಾ ಪ್ರತಿಪದಾರ್ಥ ಚಂದ್ರಿಕೆ' ಯ ರೂಪದಿಂದ ಪ್ರತಿಫಲನೆ ಮಾಡಿ ಜನರಿಗೆ ಸನ್ಮಾರ್ಗ ತೋರಿಸಿಕೊಟ್ಟರು.

ಈ ಗೀತಾಸೂರ್ಯನ ಕ್ಷ-ಕಿರಣಗಳಿಂದ ವೇದೋಪನಿಷತ್ತುಗಳೆಂಬ ಸಾಗರದ ತಲದಲ್ಲಿರುವ ತತ್ತ್ವರತ್ನಗಳು ಎಲ್ಲರಿಗೂ ಕಾಣುವಂತಾದರೂ ಈಗ ಅವನ್ನು ಮುಳುಗಿ ಮೇಲೆ ತರುವ ಸಾಹಸವನ್ನು ಮಾಡಿದವರು ಶ್ರೀವಿಶ್ವೇಶತೀರ್ಥರು. ಆ ತತ್ತ್ವರತ್ನಗಳ ರಾಶಿಯೇ ಈ 'ಗೀತಾಸಾರೋದ್ಧಾರ' ಎಂಬ ಗ್ರಂಥವು. ಈ ಅಮೂಲ್ಯ ರತ್ನರಾಶಿಯನ್ನು ಸಜ್ಜನರು ಅವಶ್ಯವಾಗಿ ಪಡೆದು ಧನ್ಯರಾಗುವರೆಂದು ಬೇರೆ ಹೇಳಬೇಕಾಗಿಲ್ಲ.

ಈ ಗ್ರಂಥದಲ್ಲಿ ವಿಷಯನಿರೂಪಣೆ ನೇರವಾಗಿದೆ ಮತ್ತು ಮನದಟ್ಟಾಗುವಂತಿದೆ. ಲೌಕಿಕ ದೃಷ್ಟಾಂತಗಳನ್ನು ಹೇರಳವಾಗಿ ಕೊಟ್ಟು ಅತ್ಯಂತ ಪ್ರಾಮಾಣಿಕವಾದ ಭಾಗವತ, ಭಾರತಾದಿಗಳ ಕಥೆಗಳನ್ನು ಬೇಕಾದಂತೆ ಉದಾಹರಿಸಿದ್ದರಿಂದ ಹೆಚ್ಚು ಪರಿಣಾಮಕಾರಿಯಾಗಿದೆ. ಹೃದಯಕ್ಕೆ ಮುಟ್ಟುವ ಯುಕ್ತಿಗಳನ್ನೇ ಅಲ್ಲಲ್ಲಿ ಕೊಟ್ಟಿರುವುದರಿಂದ ಎಂಥವನೂ ಇಲ್ಲಿಯ ಸಮರ್ಥನೆಯನ್ನು ಒಪ್ಪದಿರಲಾರ.

ಹಳೇ ರೋಗಿಯು ಬಹಳ ದಿವಸದಿಂದ ಕಹಿ ಔಷಧ ಸೇವಿಸಿ ಬೇಸತ್ತು ತಾಳ್ಮೆಗೆಟ್ಟು ತನಗೆ ಔಷಧವೇ ಬೇಡವೆಂದು ಹಟಮಾಡಿದಾಗ ಅದೇ ಸಿದ್ಧೌಷಧವನ್ನು ಚಾಣಾಕ್ಷ ವೈದ್ಯನು ಹೊಸ ಸೀಸೆಯಲ್ಲಿ ಹಾಕಿ ಸಿಹಿಯಾಗುವಂತೆ ರೂಪಾಂತರವನ್ನು ಮಾಡಿಕೊಟ್ಟು ರೋಗಿಯ ರೋಗವನ್ನು ಕಳೆಯುವಂತೆ ಅನಾದಿ ಭವರೋಗದಿಂದ ತೊಳಲುವ ಸಜ್ಜನರಿಗೆ ಸಿದ್ಧೌಷಧದಂತಿರುವ ವೇದಾದಿಗ್ರಂಥಗಳ ರಹಸ್ಯವನ್ನು ಹೊಸ ರೀತಿಯಲ್ಲಿ, ಹೃದಯಸ್ಪರ್ಶಿಯಾಗಿ ನಿರೂಪಿಸುವ ಈ 'ಗೀತಾಸಾರೋದ್ಧಾರ'ವು ಸಜ್ಜನರಿಗೆ ಪರಮೋಪಕಾರಿಯಾಗಿದೆ; ಪ್ರಾಚೀನ ಗ್ರಂಥಗಳಲ್ಲಿ ನಿರೂಪಿತವಾದ ತತ್ತ್ವಗಳಲ್ಲಿ ಜನಸಾಮಾನ್ಯರಿಗೆ ಶ್ರದ್ಧೆ ಹುಟ್ಟಿಸುವಂತಹುದಾಗಿದೆ. ಇದಕ್ಕೆ ಉದಾಹರಣವಾಗಿ ಈ ಗ್ರಂಥದಲ್ಲಿಯ ಚಾತುರ್ವರ್ಣ್ಯವಿಚಾರ ಮತ್ತು ಸ್ವಧರ್ಮಾನುಷ್ಠಾನದ ಆವಶ್ಯಕತೆಯೇ ಮೊದಲಾದ ನಿರೂಪಣೆಗಳನ್ನು ನೋಡಬಹುದು.

ಕೆಲವರು ಗೀತೆಗೆ ವ್ಯಾಖ್ಯಾನ ಮಾಡುತ್ತ, ಗೀತಾಚಾರ್ಯನಾದ ಶ್ರೀಕೃಷ್ಣನು ಅದ್ವೈತವನ್ನೇ ಪ್ರತಿಪಾದಿಸಿದ್ದಾನೆಂದು ನಿರೂಪಿಸಿದ್ದಾರೆ. ಆದರೆ ಅವರ ವಿಚಾರಧಾರೆಯಲ್ಲಿ ಶ್ರೀಕೃಷ್ಣನು ದ್ವೈತಭ್ರಾಂತಿ ಉಳ್ಳ ಪರಮೇಶ್ವರನು.

**ಮಾಯಾಖ್ಯಾಯಾಃ ಕಾಮಧೇನೋಃ ವತ್ಸೌ ಜೀವೇಶ್ವರಾವುಭೌ ।**

ಎಂದು ಪಂಚದಶೀ ವಾಕ್ಯದಲ್ಲಿ ಈಶ್ವರನು ದ್ವೈತಭ್ರಾಂತಿ ಉಳ್ಳವನೆಂದಿದೆ. ಅದೂ ಅಲ್ಲದೆ ಶ್ರೀಕೃಷ್ಣನು ಅದ್ವೈತಸಾಕ್ಷಾತ್ಕಾರ ಪಡೆದವನೇ ಆಗಿದ್ದ ಪಕ್ಷದಲ್ಲಿ ಅವನು ಇಡೀ ಜಗತ್ತೇ ಸುಳ್ಳು, ತನ್ನಲ್ಲಿ ಈಶ್ವರತ್ವವಿರುವುದೂ ಸುಳ್ಳೆಂದು

ತಿಳಿಯಬೇಕಾಗುತ್ತದೆ. ಆಗ ಅವನು 'ಭೂತಾನಾಂ ಈಶ್ವರೋಽಪಿ ಸನ್' ಇತ್ಯಾದಿ ವಾಕ್ಯಗಳಿಂದ ತಾನು ಈಶ್ವರನೆಂದು ಹೇಳಿಕೊಳ್ಳುವುದು ವಂಚಕತನ ಆಗುತ್ತದೆ. ಆದುದರಿಂದ ಶ್ರೀಕೃಷ್ಣನು ದ್ವೈತಭ್ರಾಂತಿ ಉಳ್ಳವನೆಂದೇ ಹೇಳಬೇಕಾಗುತ್ತದೆ. ಅಂಥ ಕೃಷ್ಣನು ಅದ್ವೈತವನ್ನು ಗೀತೆಯಲ್ಲಿ ಹೇಗೆ ಉಪದೇಶಿಸುತ್ತಾನೆ?

ಗೀತೆಯಲ್ಲಿ ಜ್ಞಾನಿಯಾದ ಅರ್ಜುನನನ್ನು ಕುರಿತು, ಯುದ್ಧರೂಪವಾದ ಕರ್ಮವನ್ನು ಮಾಡು; ನನ್ನಲ್ಲಿ ಭಕ್ತಿಯನ್ನೂ ಇಡು ಎಂದು ವಿಧಿಸಿದ್ದುದು ಸ್ಪಷ್ಟವಾಗಿ ಕಾಣುತ್ತಿದ್ದರೂ ಅದ್ವೈತಸಂಪ್ರದಾಯದ ವ್ಯಾಖ್ಯಾನಗಳು ಜ್ಞಾನಿಗೆ ಕರ್ಮವಿಲ್ಲ, ಭಕ್ತಿಯೂ ಇಲ್ಲ ಎಂಬುದು ಗೀತೆಯ ಆಶಯ ಎಂದು ಹೇಳುತ್ತಿರುವುದು ಆಶ್ಚರ್ಯಕರವಾಗಿದೆ.

ಹೀಗೆ ಪ್ರಾಚೀನ ಮತಗಳಲ್ಲಿ ಅಭಿಪ್ರಾಯಭೇದಗಳಿದ್ದರೂ ಎಲ್ಲ ಮತಗಳು ಮೋಕ್ಷಕ್ಕೇನೇ ಬೇರೆ ಬೇರೆ ಮಾರ್ಗಗಳೆಂದು ಒಂದು ವಾದವು ಪ್ರಚಲಿತವಾಗಿದೆ.

**ವ್ಯವಸಾಯಾತ್ಮಿಕಾ ಬುದ್ಧಿಃ**
**ಏಕೇಹ ಕುರುನಂದನ ।**

ಎಂದು ಗೀತೆಯಲ್ಲಿ ಸ್ಪಷ್ಟವಾಗಿ ಈ ವಾದವನ್ನು ನಿರಾಕರಿಸಲಾಗಿದೆ. ಈ ವಿಷಯದ ಬಗ್ಗೆ 'ಗೀತಾಸಾರೋದ್ಧಾರ'ದಲ್ಲಿ ಕೂಲಂಕಷ ವಿಚಾರ ಮಾಡಿ, ಎಲ್ಲ ಪ್ರಶ್ನೆಗಳಿಗೆ ಸಮರ್ಪಕ ಉತ್ತರ ಕೊಟ್ಟು, ಗೀತೆಯ ಸಾರವನ್ನೇ ಉದ್ಧರಿಸಿದೆ. ಆದುದರಿಂದ ಈ ಗ್ರಂಥವು ಉತ್ತಮ ತತ್ತ್ವವಿಮರ್ಶಾತ್ಮಕ ಗ್ರಂಥವಾಗಿದೆ ಎಂದು ನಮ್ಮ ಅಭಿಪ್ರಾಯ.

ಇಂತಹ ಅಮೂಲ್ಯ ಗ್ರಂಥವನ್ನು ಶ್ರೀವಿಶ್ವೇಶತೀರ್ಥರು ತಮ್ಮ ಮಿಂಚಿನ ಪರ್ಯಾಯಸಂಚಾರ, ಎಡೆಬಿಡದ ಕಾರ್ಯಕ್ರಮ, ಜಪ-ತಪ, ಪೂಜಾಪಾಠಪ್ರವಚನಾದಿಗಳ ಮಧ್ಯದಲ್ಲಿಯೇ ಅಲ್ಪ ಸಮಯದಲ್ಲಿ ಅನಾಯಾಸವಾಗಿ ರಚಿಸಿದ್ದು ಶ್ರೀಗಳವರಲ್ಲಿರುವ ಅಪ್ರತಿಮ ಪ್ರತಿಭಾಶಕ್ತಿಯ ಪ್ರತೀಕವಾಗಿದೆ.

ನಾವು ಶ್ರೀಗಳವರನ್ನು ಚಿಕ್ಕಂದಿನಿಂದ ನೋಡಿದ್ದೇವೆ. ಹತ್ತು ವರ್ಷದ

ಬಾಲಕನಾಗಿರುವಾಗಲೇ ಇವರು ಸಂಸ್ಕೃತ ಸಾಹಿತ್ಯದಲ್ಲಿ ಒಳ್ಳೇ ಮೇಧಾವಿಗಳಾಗಿದ್ದರು. ಅರ್ಧ ಗಂಟೆಯೊಳಗೆ ಹತ್ತೆಂಟು ರಮ್ಯ ಶ್ಲೋಕಗಳನ್ನು ಪ್ರೌಢ ಸಂಸ್ಕೃತದಲ್ಲಿ ಅನಾಯಾಸವಾಗಿ ರಚಿಸುತ್ತಿದ್ದರು. ಇವರು ಸುಮಾರು 18 ವರ್ಷದವರಾಗಿದ್ದಾಗ ಪ್ರಸಿದ್ಧ ಅದ್ವೈತ ಪಂಡಿತರಾದ ಮಹಾ ಮಹೋಪಾಧ್ಯಾಯ ಅನಂತಕೃಷ್ಣಶಾಸ್ತ್ರಿಗಳು ಉಡುಪಿಗೆ ಬಂದಿದ್ದರು. ಶ್ರೀಪಾದರಿಗೂ ಶಾಸ್ತ್ರಿಗಳಿಗೂ ಶಾಸ್ತ್ರಾರ್ಥ ವಿಚಾರ ನಡೆಯಿತು. ಆದರೆ ಅಲ್ಪಕಾಲದಲ್ಲಿಯೇ ಶಾಸ್ತ್ರಿಗಳು ಶ್ರೀಗಳವರ ತರ್ಕದ ಮುಂದೆ ನಿರುತ್ತರರಾದರು ಮತ್ತು ಶ್ರೀಗಳವರ ಅದ್ಭುತ ಪ್ರತಿಭೆಗೆ ತಲೆದೂಗಿದರು. ಹೀಗೇ ಪಂಡಿತ ರಾಜೇಶ್ವರಶಾಸ್ತ್ರಿ, ಷಡಂಗ ರಾಮಚಂದ್ರಶಾಸ್ತ್ರಿ ಮುಂತಾದ ಉತ್ತರದೇಶದ ದಿಗ್ದಂತಿ ಪಂಡಿತರೂ ಶ್ರೀಗಳವರ ಪ್ರತಿಭೆಗೆ ಮಾರು ಹೋಗಿದ್ದಾರೆ. ಅವರ ವ್ಯಾಖ್ಯಾನ ಉಪನ್ಯಾಸ ಕೌಶಲವಂತೂ ಸಹಸ್ರಾರು ಮಂದಿಗಳ ಸಮೂಹವನ್ನು ಮಂತ್ರಮುಗ್ಧವನ್ನಾಗಿ ಮಾಡುವುದನ್ನು ನಾವೆಲ್ಲ ಕಂಡಿದ್ದೇವೆ. ಈ ವಾದಕೌಶಲ, ವಾಕ್‌ಚಾತುರ್ಯಗಳ ಜೊತೆಗೆ ಇವರ ಸ್ವಕಾರ್ಯನಿಷ್ಠೆ, ಭಗವದ್ಭಕ್ತಿ, ಗುರುಭಕ್ತಿ ಮೊದಲಾದ ಗುಣಗಳೂ ಯಾರನ್ನಾದರೂ ವಶೀಕರಿಸುತ್ತವೆ. ಇವರ ಬಗ್ಗೆ ನಾವು ಸಂಪೂರ್ಣ ಸಂತುಷ್ಟರಾಗಿದ್ದೇವೆ. ಇವರಿಗೆ ಶ್ರೀಹರಿ-ವಾಯುಗಳು ಪೂರ್ಣಾಯುರಾರೋಗ್ಯಾದಿ ಸಕಲ ಸಂಪತ್ತನ್ನು ದಯಪಾಲಿಸಿ, ಇವರಿಂದ ಸಜ್ಜನ ವರ್ಗಕ್ಕೂ ಚಿರಂತನ ಉಪಕಾರಕ ಕಾರ್ಯಗಳು ಅನವರತ ನಡೆಯಲೆಂದು ನಮ್ಮ ಉಪಾಸ್ಯಮೂರ್ತಿಯಾದ ಶ್ರೀ ಸೀತಾರಾಮಚಂದ್ರನನ್ನು ವಿಶೇಷವಾಗಿ ಈ ಸಂದರ್ಭದಲ್ಲಿ ಪ್ರಾರ್ಥಿಸುತ್ತೇವೆ.

ಶ್ರೀ ಶ್ರೀ ವಿದ್ಯಾಮಾನ್ಯತೀರ್ಥರು
ಶ್ರೀಪಲಿಮಾರು-ಭಂಡಾರಕೇರಿ ಮಠ,
ಉಡುಪಿ.

# ವಿಷಯ ಸೂಚಿ


ಗೀತಾಧ್ಯಾಯ 1 — 1-9

ಪ್ರಸ್ತಾವನೆ 1, ಧರ್ಮಕ್ಷೇತ್ರೇ ಕುರುಕ್ಷೇತ್ರೇ 3, ಸೇನಯೋರುಭಯೋರ್ಮಧ್ಯೇ 6

ಗೀತಾಧ್ಯಾಯ 2 — 9-46

ಕೃಷ್ಣನ ಉಪದೇಶದ ಹಿನ್ನೆಲೆ 9, ಅಶೋಚ್ಯಾನನ್ವಶೋಚಸ್ತ್ವಂ 11, ಅಭಿಮಾನವೇ ದುಃಖದ ಮೂಲ 15, ಜೀವನು ಈಶ್ವರನ ಪ್ರತಿಬಿಂಬ 17; ಧರ್ಮಯುದ್ಧದಿಂದ ಹಾನಿ ಇಲ್ಲ 19; ಆಸಕ್ತಿಯೇ ಪಾಪದ ಮೂಲ 21; ಸತ್ಯದ ದಾರಿ ಒಂದೇ 24; ವೇದ ಮತ್ತು ಕಾಮ್ಯಕರ್ಮ 27; ಕರ್ಮವೂ ಫಲಾಶೆಯೂ 30; ಯೋಗಃ ಕರ್ಮಸು ಕೌಶಲಂ 34; ನಿಷ್ಕಾಮಕರ್ಮದ ಫಲ 35; ಸ್ಥಿತಪ್ರಜ್ಞನೂ ಇಂದ್ರಿಯನಿಗ್ರಹವೂ 38; ಸ್ಥಿತಪ್ರಜ್ಞನ ಲೋಕವ್ಯವಹಾರ 43.

ಗೀತಾಧ್ಯಾಯ 3 — 46-81

ಮತ್ತೇಕೆ ಕರ್ಮದ ಜಂಜಾಟ 46; ಕರ್ಮತ್ಯಾಗವು ಅವ್ಯವಹಾರ್ಯ 48; ಕರ್ಮವು ಯಜ್ಞ ರೂಪವಾಗಿರಲಿ 51; ಪರಸ್ಪರಂ ಭಾವಯಂತಃ 53; ಯಜ್ಞ ಮತ್ತು ಜಗಚ್ಚಕ್ರ 56; ದುಷ್ಕರ್ಮವು ಯಜ್ಞವಾಗದು 58; ಕರ್ಮದ ವಿನಾಯತಿ 59; ಜ್ಞಾನಿಗೂ ಕರ್ಮದ ನಿರ್ಬಂಧ 60; ಜ್ಞಾನಿ-ಅಜ್ಞಾನಿಗಳ ಅಂತರ 62; ಜ್ಞಾನ-ಕರ್ಮಗಳ ಸಮನ್ವಯ 64; ಸ್ವಧರ್ಮೇ ನಿಧನಂ ಶ್ರೇಯಃ 65; ವರ್ಣ ವಿಭಾಗದ ವೈಶಿಷ್ಟ್ಯ 69; ಕಾಮ, ಆತ್ಮದ ಪ್ರಬಲ ವೈರಿ 73; ಕಾಮದ ಆಕ್ರಮಣ ವಿಧಾನ 76; ಜ್ಞಾನವು ಕಾಮನಿಗ್ರಹದ ಸಾಧನ 78.

ಗೀತಾಧ್ಯಾಯ 4 — 81-121

ಗೀತಾಧರ್ಮದ ಪ್ರಾಚೀನತೆ 81; ಭಗವಂತನ ಅವತಾರ ಮತ್ತು ಅದರ ಉದ್ದೇಶ 82; ಜೀವ ಮತ್ತು ಪರಮಾತ್ಮರಲ್ಲಿಯ ಅಂತರ 88; ಜ್ಞಾನಿಗಳು ಮತ್ತು ತ್ರೈವಿದ್ಯರು 89; ಗೀತೆಯು ನಿರೂಪಿಸಿದ ಚಾತುರ್ವರ್ಣ್ಯ 95; ಕರ್ಮದಲ್ಲಿ ಅಕರ್ಮ; ಅಕರ್ಮದಲ್ಲಿ ಕರ್ಮ 102; ಯಜ್ಞದ ವಿವಿಧ ಪ್ರಕಾರಗಳು 109; ಜ್ಞಾನವೇ ಯಜ್ಞದ ಫಲ 114; ಸಂಶಯಾತ್ಮಾ ವಿನಶ್ಯತಿ 117.

**ಗೀತಾಧ್ಯಾಯ 5** **121-139**

ಸಂನ್ಯಾಸ ಮತ್ತು ಕರ್ಮಯೋಗ 121; ಜ್ಞಾನ-ಕರ್ಮಗಳಲ್ಲಿ ಅವಿರೋಧ 126; ಕರ್ಮಯೋಗಿಯ ನಿರ್ಲಿಪ್ತತೆ 128; ಜ್ಞಾನಿಯು ಲೋಕವಿಮುಖನಲ್ಲ 130; ಜ್ಞಾನಿಯ ಸಮದೃಷ್ಟಿ 133; ಆಧ್ಯಾತ್ಮಿಕ ಸುಖದ ವೈಶಿಷ್ಟ್ಯ 137.

**ಗೀತಾಧ್ಯಾಯ 6** **139-153**

ಕರ್ಮಯೋಗದಿಂದ ಧ್ಯಾನಯೋಗಕ್ಕೆ 139; ಕರ್ಮಯೋಗಿಗೆ ಲೋಕಸೇವೆ ಅನಿವಾರ್ಯ 140; ಧ್ಯಾನಯೋಗದ ಸ್ವರೂಪ ಮತ್ತು ವಿಧಾನ 146; ಧ್ಯಾನಮಾರ್ಗವು ಕಠಿಣ, ಆದರೆ ನಿರಪಾಯ 150.

**ಗೀತಾಧ್ಯಾಯ 7** **153-170**

ಭಕ್ತಿಯೂ ಮಾಹಾತ್ಮ್ಯಜ್ಞಾನವೂ 153; ಭಕ್ತಿಯ ಪ್ರಕಾರಗಳು 156; ಅದ್ವೈತಜ್ಞಾನವೂ ಭಕ್ತಿಯೂ 157; ಸಮಸ್ತಾರ್ಥಫಾಪವು ಭಕ್ತಿಯ ಅಭೇದ್ಯ ಅಂಗ 160; ಭಕ್ತಿಯೂ ಆತ್ಮವಿಕಾಸವೂ 162; ಹಿಂದೂಧರ್ಮದಲ್ಲಿ ಪರದೇವತೆಯೊಂದೇ 166; ಶ್ರೀಕೃಷ್ಣನೇ ಪರದೇವತೆ 169.

**ಗೀತಾಧ್ಯಾಯ 8** **170-178**

ಸಾಧಕನು ತಿಳಿಯಬೇಕಾದ ತತ್ತ್ವಗಳು 170; ಧರ್ಮಾಚರಣೆಯಲ್ಲಿ ವಿಲಂಬ ಸಲ್ಲದು 172; ಅಂತ್ಯಕಾಲದಲ್ಲಿ ಹರಿಸ್ಮರಣೆ 174; ಶುಕ್ಲ-ಕೃಷ್ಣ ಗತಿಗಳು 177.

**ಗೀತಾಧ್ಯಾಯ 9** **178-191**

ಪ್ರಪಂಚ-ಪರಮಾತ್ಮರ ಸಂಬಂಧ 178; ಪರಮಾತ್ಮ ದ್ವೇಷವು ಮುಕ್ತಿಸಾಧನವೆ? 181; ಯೋಗಕ್ಷೇಮಂ ವಹಾಮ್ಯಹಂ 183; ಕ್ರಿಯಾ ಸಮರ್ಪಣೆ 185; ಹರಿಪೂಜೆ ಬಹು ಸುಲಭ 186; ಆಚಾರವೂ ಭಕ್ತಿಯೂ 189.

**ಗೀತಾಧ್ಯಾಯ 10** **191-194**

ಭಗವಂತನ ವಿಭೂತಿಗಳು 191; ವಿಭೂತಿಯೋಗದ ಸಂದೇಶ 193.

**ಗೀತಾಧ್ಯಾಯ 11** **195-201**

ವಿಶ್ವರೂಪದರ್ಶನ 195; ಭಗವಂತನು ನಿರಾಕಾರನೆ? 196; ನಿತ್ಯ ಜೀವನದಲ್ಲಿ ವಿಶ್ವರೂಪಪ್ರಜ್ಞೆ 200.

**ಗೀತಾಧ್ಯಾಯ 12** **201-212**

ಶ್ರೀತತ್ತ್ವದ ಉಪಾಸನೆ 201; ಅವ್ಯಕ್ತವು ನಿರ್ಗುಣ ಬ್ರಹ್ಮವೆ? 203; ಸಗುಣೋಪಾಸನೆಯು ಸರ್ವಸಮ್ಮತ 205; ಧ್ಯಾನಮಾರ್ಗದ ಮೆಟ್ಟಿಲುಗಳು 206; ನಿಷ್ಕಾಮಧ್ಯಾನ 207; ಸಾಧಕನಲ್ಲಿ ಶೀಲ ಸಂವರ್ಧನೆ 209.

**ಗೀತಾಧ್ಯಾಯ 13** **212-221**

ಕ್ಷೇತ್ರಜ್ಞನು ಯಾರು? 212; ಜ್ಞೇಯ ಮತ್ತು ಜಿಜ್ಞಾಸು ಗುಣ ಧರ್ಮಗಳು 213; ಅನಾದಿತತ್ತ್ವಗಳ ವಿವೇಚನೆ 217; ಸಂಸಾರ ಬಂಧನದ ಮೂಲ 219.

**ಗೀತಾಧ್ಯಾಯ 14** **221-223**

ಜೀವನದಲ್ಲಿ ಗುಣತ್ರಯದ ಪ್ರಭಾವ 221.

**ಗೀತಾಧ್ಯಾಯ 15** **223-230**

ಜಗದ್ವೃಕ್ಷದ ಸ್ವರೂಪ 223; ಮಮೈವಾಂಶೋ ಜೀವಲೋಕೇ 226; ಪುರುಷೋತ್ತಮಯೋಗ 228.

**ಗೀತಾಧ್ಯಾಯ 16** **230-244**

ದೈವ ಮತ್ತು ಆಸುರ ಸಂಪತ್ತುಗಳು 230; ನಾಸ್ತಿಕ್ಯವಾದದ ದುಷ್ಪರಿಣಾಮಗಳು 232; ಈಶ್ವರನಿಷ್ಠೆಯ ಆವಶ್ಯಕತೆ 236; ತಸ್ಮಾಚ್ಛಾಸ್ತ್ರಂ ಪ್ರಮಾಣಂ ತೇ 239.

**ಗೀತಾಧ್ಯಾಯ 17** **245-252**

ಧರ್ಮ ಮತ್ತು ನಿತ್ಯವ್ಯವಹಾರ 245; ಆಹಾರ 246; ದಾನ 248; ತಪಸ್ಸು 251.

**ಗೀತಾಧ್ಯಾಯ 18** **252-272**

ಜ್ಞಾನ 252; ಸುಖ 254; ತ್ಯಾಗ ಮತ್ತು ಸಂನ್ಯಾಸ 256; ನಿಷ್ಕಾಮ-ಸಕಾಮ ಕರ್ಮಗಳಲ್ಲಿರುವ ಅಂತರ 258; ಜೀವನು ಕರ್ತನೆ? 262; ಶರಣಾಗತಿ 266; ಉಪಸಂಹಾರ 270.

|| ಶ್ರೀಃ ||

# ಗೀತಾಸಾರೋದ್ಧಾರ

ಭಗವದ್ಗೀತೆಯು ಭಾರತೀಯರ ಶ್ರೇಷ್ಠವಾದ ಧಾರ್ಮಿಕ ಹಾಗೂ ಆಧ್ಯಾತ್ಮಿಕ ಗ್ರಂಥವಾಗಿದೆ. ಎಲ್ಲ ಜನರಿಗೂ ತಮ್ಮ ತಮ್ಮ ಅಂತಸ್ತಿಗೆ ಅನುಕೂಲವಾಗುವಂತಹ ಉಪದೇಶಗಳು ಗೀತೆಯಲ್ಲಿ ಕಾಣಿಸಬಹುದು. ಜೀವನದ ಎಲ್ಲ ತರಹದ ಸಮಸ್ಯೆಗಳಿಗೂ ಸಮರ್ಥ ಪರಿಹಾರವನ್ನು ಗೀತೆಯ ಅಧ್ಯಯನದಿಂದ ಕಂಡುಕೊಳ್ಳಬಹುದು. ಇಂತಹ ಸರ್ವಗ್ರಾಹಿ ಹಾಗೂ ಸರ್ವಜನೋಪಯೋಗಿ ಪಾವನ ಉಪದೇಶಧಾರೆಯನ್ನು ಗೀತೆಯ ದ್ವಾರದಿಂದ ಪರಮಾತ್ಮನು ಹರಿಸಿರುವನು. ಭಗವಂತನ ಮಹಿಮೆಯು ಅಪಾರವಾಗಿದೆ. ಯಶೋದೆಗೆ ತನ್ನ ಪುಟ್ಟ ಬಾಯಲ್ಲಿ ಬ್ರಹ್ಮಾಂಡವನ್ನು ತೋರಿಸಿದಂತೆ ಈ ಚಿಕ್ಕ ಗ್ರಂಥದಲ್ಲಿ ಸಕಲ ತತ್ತ್ವಗಳನ್ನು ತುಂಬಿರುವನು. ಪರಿಮಿತ ಪ್ರದೇಶದಲ್ಲಿ ಇಡೀ ವಿಶ್ವವನ್ನೇ ತೋರಿಸಿದಂತೆ, ಪರಿಮಿತ ಕಾಲದಲ್ಲಿ, ಪರಿಮಿತ ಶಬ್ದಗಳಲ್ಲಿ ಇಡೀ ಜೀವನಶಾಸ್ತ್ರವನ್ನೇ ಶ್ರೀ ಕೃಷ್ಣನು ವಿವರಿಸಿರುವುದು ಅವನ ಮಹಾಮಹಿಮೆಯ ದ್ಯೋತಕವಾಗಿದೆ.

ಕುರುಕ್ಷೇತ್ರದ ಯುದ್ಧವು ಮುಗಿದು ಪಾಂಡವರು ಪಟ್ಟಾಭಿಷಿಕ್ತರಾಗಿ ರಾಜ್ಯಪರಿಪಾಲನೆಯನ್ನು ಮಾಡುತ್ತಿರುವಾಗ ಒಮ್ಮೆ ಅರ್ಜುನನು ಶ್ರೀಕೃಷ್ಣನಲ್ಲಿ ''ಅಂದಿನ ಗೊಂದಲದ ವೇಳೆಯಲ್ಲಿ ನೀನು ಗೀತೆಯ ಉಪದೇಶ ಮಾಡಿರುವೆ; ಇಂದಿನ ಈ ಶಾಂತ ಪ್ರಸಂಗದಲ್ಲಿ ಮಗದೊಮ್ಮೆ ನಿನ್ನ ಅದೇ ಉಪದೇಶವನ್ನು ಕೇಳಬಯಸುವೆ'' ಎಂದಾಗ, ಯೋಗೇಶ್ವರನೂ ನಿತ್ಯಸರ್ವಜ್ಞನೂ ಆದ ಶ್ರೀಕೃಷ್ಣನು ''ಅಂದಿನ ಸ್ಫೂರ್ತಿಯು ಇಂದು ಇಲ್ಲ; ಮತ್ತೊಮ್ಮೆ ಅದೇ ಉಪದೇಶವನ್ನು ಹೊರಡಿಸಲಾರೆ'' ಎಂದು ಹೇಳಿ ಗೀತೆಯ ಮಹತ್ತ್ವವನ್ನು ಹೆಚ್ಚಿಸಿದ್ದಾನೆ. ಶ್ರೀಕೃಷ್ಣನು ಗೀತೆಯ ಉಪದೇಶಕ್ಕೆ ಆಯ್ಕೆ ಮಾಡಿರುವ ಸಮಯ-ಸನ್ನಿವೇಶವೂ ಸ್ವಾರಸ್ಯಕರವಾಗಿದೆ. ಎರಡೂ ಸೈನ್ಯಗಳು ಎದುರುಬದುರು ನಿಂತಿರುವ ಸಮರವಿಸ್ಫೋಟದ ವಿಷಮ ಕ್ಷಣಗಳಲ್ಲಿ, ಯಾರಿಗೂ ಮಾನಸಿಕ ಸಮತೋಲನವಿರಲು ಶಕ್ಯವೇ ಇಲ್ಲದ ಸಮಯದಲ್ಲಿ

ಶ್ರೀಕೃಷ್ಣನನ್ನು ಹೊರತು ಯಾರು ಇಂತಹ ಸರಳ ಗಂಭೀರ ಉಪದೇಶವನ್ನು ನೀಡಬಲ್ಲರು? ಜೀವನದಲ್ಲಿ ಅತ್ಯಂತ ಮಹತ್ವದ ಸಂದರ್ಭಗಳಲ್ಲಿಯೇ ವಿಶೇಷವಾದ ಹೊಣೆಗಾರಿಕೆಯ ಪ್ರಸಂಗದಲ್ಲಿಯೇ ಮಾನವನು ವ್ಯಾಮೋಹ ಪರವಶನಾಗುತ್ತಾನೆ. ಅಂತಹ ಸಂದಿಗ್ಧ ಪರಿಸ್ಥಿತಿಯಲ್ಲಿಯೇ ಗೀತೆಯ ಆವಶ್ಯಕತೆಯು ಪ್ರಾಪ್ತವಾಗಿರುತ್ತದೆ. ಧರ್ಮಕ್ಷೇತ್ರವಾದ ನಮ್ಮ ಜೀವನವೂ ಒಂದು ಕುರುಕ್ಷೇತ್ರವೇ. ದೈವೀಶಕ್ತಿಗಳೂ ಆಸುರೀಶಕ್ತಿಗಳೂ ಪರಸ್ಪರ ವಿರುದ್ಧವಾಗಿ ಹೋರಾಡಲು ಇಲ್ಲಿ ಅಣಿಯಾಗಿವೆ. ಈ ಸತ್, ಅಸತ್ ಶಕ್ತಿಗಳ, ಈ ಸದ್ಗುಣ, ದುರ್ಗುಣಗಳ ಹೋರಾಟದ ಪ್ರಸಂಗದಲ್ಲಿ ಕರ್ತವ್ಯ ವಿಮುಖರಾಗಿ ನಾವು ಮೋಹಪರವಶರಾಗಿ ಹಿಂಜರಿಯುವುದುಂಟು; ಜೀವನದ ಈ ಆಂತರಿಕ ಯುದ್ಧವನ್ನು ಎದುರಿಸಲಾರದೇ ದೂರ ಓಡಿಹೋಗುವ ಜೀವನ ಪರಾಙ್ಮುಖ ಧೋರಣೆಯನ್ನು ನಾವು ವಹಿಸುವುದುಂಟು. ಅಂಥವರಿಗೆಲ್ಲ ಗೀತೆಯು ನಿಜದರ್ಶನವನ್ನು, ನಮ್ಮ ಕರ್ತವ್ಯದ ಬಗ್ಗೆ ಜಾಗೃತಿಯನ್ನು ನೀಡುವುದು. ಗೀತೆಯು ಪಾಂಡವರ ಹಾಗೂ ಕೌರವರ ಐತಿಹಾಸಿಕ ಯುದ್ಧಕ್ಕೆ ಮಾತ್ರ ಸಂಬಂಧಿಸಿರದೆ ನಮ್ಮಲ್ಲಿ ಪ್ರತಿಯೊಬ್ಬನ ನಿತ್ಯ ಜೀವನದಲ್ಲಿ ಸಂಭವಿಸಬಹುದಾದ ಸದ್ಗುಣ, ದುರ್ಗುಣಗಳ ಆಂತರಿಕ ಸಮರಕ್ಕೂ ಸಂಬಂಧಿಸಿದ್ದಾಗಿದೆ. ಮಹಾಭಾರತಕ್ಕೆ ಐತಿಹಾಸಿಕ ಅರ್ಥದಂತೆ ಆಧ್ಯಾತ್ಮಿಕ ಅರ್ಥವೂ ಇದೆ ಎಂದು ಶ್ರೀಮದಾಚಾರ್ಯರು ಅಪ್ಪಣೆ ಕೊಡಿಸಿದ್ದಾರೆ. ಹೀಗೆ ಈ ಗೀತೋಪದೇಶವು ಅರ್ಜುನನಿಗೆ ಮಾತ್ರ ಸಂಬಂಧಿಸಿರದೆ ಮಾನವಕುಲದ ಸಕಲ ಸಜ್ಜನರಿಗೂ ಇದು ಅನ್ವಯವಾಗುವುದು. ಆದ್ದರಿಂದ ದ್ವಾಪರಯುಗದಲ್ಲಿ ಅರ್ಜುನನಿಗೆ ನೀಡಿದ ಈ ಉಪದೇಶವು, ಇಂದಿನ ಅಣುಯುಗದ ನಮಗೆ ಏಕೆಂದು ನಾವು ಇದರ ಬಗ್ಗೆ ಉದಾಸೀನರಾಗಬಾರದು. ನಮ್ಮ ಈ ಜೀವನಸಮರದಲ್ಲಿ ಎಂದೆಂದಿಗೂ ಉಪಯುಕ್ತವಾಗುವ ಶಾಶ್ವತ ಸಂದೇಶವು ಗೀತೆಯಲ್ಲಿ ಅಡಕವಾಗಿದೆ.

ಸರ್ವೋಪನಿಷದೋ ಗಾವೋ
ದೋಗ್ಧಾ ಗೋಪಾಲನಂದನಃ ।
ಪಾರ್ಥೋ ವತ್ಸಃ ಸುಧೀರ್ಭೋಕ್ತಾ
ದುಗ್ಧಂ ಗೀತಾಮೃತಂ ಮಹತ್ ॥

ಉಪನಿಷತ್ತುಗಳೇ ಗೋವುಗಳು. ಗೋಪಾಲಕೃಷ್ಣನೇ ಹಾಲು ಕರೆಯುವವನು. ಗೀತೆಯೇ ಹಾಲು. ಅರ್ಥಾತ್ ಉಪನಿಷತ್ತಿನ ಸಾರವಾಗಿ ಶ್ರೀಕೃಷ್ಣನು ಗೀತಾಮೃತವನ್ನು ನೀಡಿರುವನು. ಹಾಲು ಕರೆಯುವಾಗ ಕರು ಬೇಕಾಗುವಂತೆ ಅರ್ಜುನನು ವತ್ಸನಾಗಿ ಈ ದೋಹನದಲ್ಲಿ ನಿಮಿತ್ತನಾಗಿರುವನು. ಆದರೆ ಕರೆಯುವ ಹಾಲನ್ನು ಕರುವು ಮಾತ್ರ ಕುಡಿಯದೆ, ಉಳಿದವರೂ ಕುಡಿಯುವಂತೆ ಅರ್ಜುನನಿಗಾಗಿ ಹರಿದ ಈ ಹಾಲಿನ ಧಾರೆಯನ್ನು ಪ್ರಪಂಚದ ಸಜ್ಜನರೆಲ್ಲ ಕುಡಿದು ತೃಪ್ತಿಯನ್ನೂ ಸ್ಫೂರ್ತಿಯನ್ನೂ ಪಡೆಯಬಹುದು. ಆದ್ದರಿಂದಲೇ ''ಜ್ಞಾನಮುದ್ರಾಯ ಕೃಷ್ಣಾಯ ಗೀತಾಮೃತದುಹೇ ನಮಃ'' ಎಂದಿದ್ದಾರೆ. ಜ್ಞಾನಮುದ್ರೆ ಎಂಬುದು ದೋಹನದ ಸಂಕೇತವೂ ಆಗಿದೆ. ಹಾಲು ಕರೆಯುವಾಗಲೂ ಕೈಯಲ್ಲಿ ಜ್ಞಾನಮುದ್ರೆಯ ಆಕಾರವೇ ಇರುವುದು. ಅಂತೂ ಪ್ರಪಂಚದ ಸಕಲ ಸಜ್ಜನರಿಗಾಗಿ ಶ್ರೀಕೃಷ್ಣನು ಈ ಅಮೃತಧಾರೆಯನ್ನು ಹರಿಸಿರುವನು.

## ಧರ್ಮಕ್ಷೇತ್ರೇ ಕುರುಕ್ಷೇತ್ರೇ

ಧೃತರಾಷ್ಟ್ರ-ಸಂಜಯರ ಸಂವಾದದಿಂದ ಈ ಗೀತೆಯು ಆರಂಭವಾಗುವುದು. ಧೃತರಾಷ್ಟ್ರನಿಗೆ ಯುದ್ಧದ ವಿಚಾರವನ್ನೆಲ್ಲ ಅರುಹಲು ವೇದವ್ಯಾಸರು ಸಂಜಯನನ್ನು ನೇಮಿಸಿದ್ದಾರೆ. ಅವನು ಅಲ್ಲಿಯ ಸಕಲ ಘಟನೆಗಳನ್ನು ಧೃತರಾಷ್ಟ್ರನಿಗೆ ತಿಳಿಸುತ್ತಿರುವನು. ''ಧರ್ಮಕ್ಷೇತ್ರವಾದ ಕುರುಕ್ಷೇತ್ರದಲ್ಲಿ ಸೇರಿದ ಪಾಂಡವರು ಹಾಗೂ ನನ್ನವರು ಅಲ್ಲಿ ಏನು ನಡೆಸಿದರು?'' ಎಂದು ಧೃತರಾಷ್ಟ್ರ ಪ್ರಶ್ನಿಸುತ್ತಾನೆ. ಇನ್ನೂ ದುರ್ಯೋಧನಾದಿಗಳನ್ನು ''ಮಾಮಕಾಃ'' ತನ್ನವರು ಎಂಬ ವ್ಯಾಮೋಹದಿಂದಲೇ ಕರೆಯುತ್ತಾನೆ, ಧೃತರಾಷ್ಟ್ರನ ಹೊರಗಿನ ಕಣ್ಣುಗಳಂತೆ ಒಳಗಿನ ಕಣ್ಣು ಇನ್ನೂ ಕುರುಡೇ ಆಗಿದೆ. ಸಮರವನ್ನು ಹೇಗೆ ಮಾಡಿದರೆಂದು ಕೇಳದೆ ಏನು ಮಾಡಿದರೆಂದು ಕೇಳುವನು. ''ಧರ್ಮಕ್ಷೇತ್ರವಾದ ಕುರುಕ್ಷೇತ್ರಕ್ಕೆ ತಲುಪಿದ ಕೂಡಲೇ ಧಾರ್ಮಿಕರಾದ ಪಾಂಡವರಲ್ಲಿ ಧರ್ಮಪ್ರವೃತ್ತಿಯು ಜಾಗೃತವಾಗಿ ಯುದ್ಧವು ಬೇಡವೆಂದು ರಾಜ್ಯವನ್ನೆಲ್ಲ ನಮ್ಮವರಿಗೆ ನೀಡಿದರೆ?'' ಎಂಬ ಸ್ವಾರ್ಥಪೂರ್ಣ ಆತಂಕೆಯಿಂದ ಧೃತರಾಷ್ಟ್ರನು

ಅಲ್ಲಿ ಏನು ಮಾಡಿದರೆಂದು ಪ್ರಶ್ನಿಸುವನು. ಹಿಂದೆ ಸಂಜಯನ ಮೂಲಕ ಪಾಂಡವರಿಗೆ, ''ನಮ್ಮ ಮಕ್ಕಳು ದುಷ್ಟರು, ಕಲಹಪ್ರಿಯರು, ನೀವಾದರೋ ಧಾರ್ಮಿಕರು, ಶಾಂತಿಪ್ರಿಯರು. ಯುದ್ಧದಿಂದ ಬಹಳ ಅನರ್ಥವಿದೆ. ಆದ್ದರಿಂದ ನೀವಾಗಿಯೇ ಶಾಂತಿದೃಷ್ಟಿಯಿಂದ ರಾಜ್ಯವನ್ನು ದುರ್ಯೋಧನಾದಿಗಳಿಗೆ ಬಿಟ್ಟುಕೊಟ್ಟು ಅರಣ್ಯದಲ್ಲಿ ಶಾಂತಿ ಜೀವನವನ್ನು ನಡೆಸುವುದು ಒಳ್ಳೆಯದು'' ಎಂಬ ಕುಹಕದೃಷ್ಟಿಯ ಸಂದೇಶವನ್ನು ಕಳುಹಿಸಿದ್ದನು. ಈ ಕುರುಕ್ಷೇತ್ರದಲ್ಲಾದರೂ ಪಾಂಡವರಿಗೆ ಅಥವಾ ಅವರಲ್ಲಿ ಒಬ್ಬರಿಗಾಗಲಿ ಈ ಸಂದೇಶದ ಪರಿಣಾಮವೇನಾದರೂ ಆಗಿರಬಹುದೆಂಬ ನಿರೀಕ್ಷೆಯಿಂದ ಧೃತರಾಷ್ಟ್ರನು ಅಂತು ಪ್ರಶ್ನಿಸುತ್ತಾನೆ. ನಿಜವಾಗಿಯೂ ಅವನ ನಿರೀಕ್ಷೆಯಂತೆಯೇ ಮುಂದೆ ನಡೆಯುತ್ತದೆ. ಧೃತರಾಷ್ಟ್ರನ ಸಂದೇಶದಿಂದ ಪ್ರಭಾವಿತನಾದಂತೆ ಅದೇ ಮಾತುಗಳನ್ನೇ ಪುನರುಚ್ಚರಿಸಿ ಅರ್ಜುನನು ಯುದ್ಧ ನಿವೃತ್ತನಾಗುವನು. ಧೃತರಾಷ್ಟ್ರನ ಕಪಟನೀತಿಯು ಫಲಕಾರಿಯಾಗದಿರಲಿಲ್ಲ.

ಧೃತರಾಷ್ಟ್ರನ ಪ್ರಶ್ನೆಗೆ ಸಂಜಯನು ಹೀಗೆ ಉತ್ತರಿಸುತ್ತಾನೆ: ಹದಿಮೂರು ವರುಷ ವನವಾಸ, ಅಜ್ಞಾತವಾಸಗಳನ್ನು ನಡೆಸಿದ ಪಾಂಡವರಿಗೆ ಸೈನ್ಯವನ್ನು ಸಂಗ್ರಹಿಸಲು ಸಾಧ್ಯವಾಗದೆ ತನ್ನ ಮಹಾಸೈನ್ಯದ ಮುಂದೆ ಅವರು ತತ್ತರಿಸಿಹೋಗುವರೆಂದು ಭಾವಿಸಿದ್ದ ದುರ್ಯೋಧನನಿಗೆ ಪಾಂಡವರ ಈ ಮಹಾಸೈನ್ಯವನ್ನು ಕಂಡು ಭಯವೇ ಆಗುವುದು. ಸಭಾಪರ್ವದಲ್ಲಿ ತಮ್ಮೆಲ್ಲರನ್ನೂ ಸಂಹರಿಸುವುದಾಗಿ ಭೀಮಸೇನನು ಮಾಡಿದ ಭೀಕರ ಪ್ರತಿಜ್ಞೆಯ ಅವಸರದಲ್ಲಿ ದುರ್ಯೋಧನಾದಿಗಳು ದ್ರೋಣಾಚಾರ್ಯರಲ್ಲಿ ಶರಣಾಗತರಾದಾಗ ಅವರೇ ಪ್ರಾಣರಕ್ಷಣೆಯ ಆಶ್ವಾಸನವನ್ನು ನೀಡಿದ್ದರು. ಈಗ ಸಂಭ್ರಾಂತನಾದ ದುರ್ಯೋಧನನು ದ್ರೋಣಾಚಾರ್ಯರ ಸಮೀಪಕ್ಕೆ ಆಗಮಿಸಿ, ಉಭಯ ಸೈನ್ಯಗಳ ವೀರರ ವಿವರಗಳನ್ನು ತಿಳಿಸಿ, ಭೀಷ್ಮರಿಂದ ರಕ್ಷಿತವಾದ ನಮ್ಮ ಸೈನ್ಯವು ಭೀಮಸೇನನ ಸಂರಕ್ಷಣೆಯನ್ನು ಹೊಂದಿದ ಪಾಂಡವ ಸೈನ್ಯವನ್ನು ಎದುರಿಸಲು ಅಸಮರ್ಥವಾಗಿದೆಯೆಂದು ತನ್ನ ಭಯ, ಆಶಂಕೆಗಳನ್ನು ವ್ಯಕ್ತಪಡಿಸಿದ್ದಾನೆ.

ಪಾಂಡವ ಸೈನ್ಯದಲ್ಲಿ ಸೇರಿದವರೆಲ್ಲ ದುಷ್ಟಶಕ್ತಿಯ ನಿಗ್ರಹದ ಸದುದ್ದೇಶದಿಂದ ಪ್ರೇರಿತರಾಗಿ ನಿಂತಿದ್ದಾರೆ. ತತ ನಿಷ್ಠೆಯ ದಿವ್ಯವಾದ ನೈತಿಕ

ಬಲದ ಹಿನ್ನೆಲೆ ಅವರಿಗಿದೆ. ವಿಶಿಷ್ಟವೂ ಸತ್ತ್ವಪೂರ್ಣವೂ ಆದ ಧ್ಯೇಯದಿಂದ ಹೋರಾಟಕ್ಕೆ ಪ್ರವೃತ್ತರಾದ ಈ ಕ್ರಾಂತಿಕಾರಿ ಮನೋವೃತ್ತಿಯ ವೀರ ಸೈನಿಕರು ಶುದ್ಧ ಭಾಗವತೋತ್ತಮನೂ ತತ್ತ್ವನಿಷ್ಠೆಯಲ್ಲಿ ಅದ್ವಿತೀಯನೂ ಆದ ಭೀಮಸೇನನಂತಹ ಮಹಾ ನೇತಾರನನ್ನು ಪಡೆದಿರುವಾಗ ಇಂತಹ ಹಿನ್ನೆಲೆಯಿಲ್ಲದ ದುರ್ಯೋಧನನ ಸೈನ್ಯವು ಇವರನ್ನು ಹೇಗೆ ಎದುರಿಸೀತು ? ಭೀಷ್ಮರೇನೋ ಮಹಾ ವೀರರೇ! ಆದರೆ ಅವರು ತತ್ತ್ವಕ್ಕಾಗಿ ಹೋರಾಡದೆ ತಮ್ಮ ಮನಸ್ಸಿಗೆ ವಿರುದ್ಧವಾಗಿ ದುರ್ಯೋಧನನ ಹಂಗಿಗಾಗಿ ಹೋರಾಡುತ್ತಿದ್ದಾರೆ. ಇವರನ್ನೆಲ್ಲ ಪ್ರಭಾವಿತಗೊಳಿಸಬೇಕಾದ ವಿಶಿಷ್ಟ ಧ್ಯೇಯವೇ ಅಲ್ಲಿಲ್ಲ. ತಾವೆಲ್ಲ ದುಷ್ಟಕೃತ್ಯವನ್ನು ಮಾಡುತ್ತಿರುವೆವೆಂದು ತಿಳಿದಿದ್ದರೂ ಆರ್ಥಿಕ ಬಂಧನಕ್ಕೂ ದ್ವೇಷ ದುರುದ್ದೇಶಗಳಿಗೂ ಒಳಗಾಗಿ ಹೋರಾಟಕ್ಕೆ ಪ್ರವೃತ್ತರಾದವರೇ ಹೆಚ್ಚು ಮಂದಿ. ಹೀಗಾಗಿ ತನ್ನ ಸೈನ್ಯದಲ್ಲಿ ಆಂತರಿಕ ಸತ್ತ್ವವೂ ನೈತಿಕಬಲವೂ ಇಲ್ಲವೆಂದು ಅರಿತು, ಭೀಷ್ಮ-ಭೀಮರ ನೇತೃತ್ವವನ್ನು ಈ ದೃಷ್ಟಿಯಿಂದ ತುಲನೆಮಾಡಿ ತನ್ನ ಕಳವಳವನ್ನು ದ್ರೋಣಾಚಾರ್ಯರಲ್ಲಿ ವ್ಯಕ್ತಪಡಿಸುತ್ತಾನೆ. ದುರ್ಯೋಧನನ ಈ ಸಂಕೋಚವನ್ನು ಊಹಿಸಿ ಭೀಷ್ಮರೂ ಅದನ್ನನುಸರಿಸಿ ಉಳಿದ ಸೈನಿಕರೂ ಉತ್ತೇಜಕವಾಗಿ ಶಂಖಘೋಷವನ್ನು ಮಾಡುವರು. ಪಾಂಡವರೂ ಇದಕ್ಕೆ ಪ್ರತಿಯಾಗಿ ಶಂಖಘೋಷದ ಉತ್ತರವನ್ನು ನೀಡುವರು.

**ತತಃ ಶ್ವೇತೈರ್ಹಯೈರ್ಯುಕ್ತೇ**
**ಮಹತಿ ಸ್ಯಂದನೇ ಸ್ಥಿತೌ ।**
**ಮಾಧವಃ ಪಾಂಡವಶ್ಚೈವ**
**ದಿವ್ಯೌ ಶಂಖೌ ಪ್ರದಧ್ಮತುಃ ॥**

''ಬಿಳಿಯ ಕುದುರೆಗಳನ್ನು ಜೋಡಿಸಿದ ದಿವ್ಯರಥದಲ್ಲಿ ಕುಳಿತ ಕೃಷ್ಣಾರ್ಜುನರು ದಿವ್ಯಶಂಖಗಳನ್ನು ಊದಿದರು.'' ಈ ಪದ್ಯವು ಮುಂದಿನ ಘಟನೆಯನ್ನು ಸೂಚ್ಯವಾಗಿ ತಿಳಿಸುತ್ತದೆ. ನಾಲ್ಕು ವೇದಗಳಿಂದ ಕೂಡಿದ ಮಹಾಶಾಸ್ತ್ರದಲ್ಲಿ ಸಮಾವಿಷ್ಟರಾಗಿ ಕೃಷ್ಣಾರ್ಜುನರು ಓಂಕಾರ ನಾದವನ್ನು

ಅರ್ಥಾತ್ ಶಾಂತಿಮಂತ್ರವನ್ನು ಹಾಡಿದರು-ಎಂದು ಮುಂದೆ ಅರ್ಜುನನಿಗೆ ಭಗವಂತನು ನೀಡಿರುವ ಉಪದೇಶದ ಸೂಚನೆಯನ್ನು ಇಲ್ಲಿ ಮಾಡಿದ್ದಾರೆ.

## ಸೇನಯೋರುಭಯೋರ್ಮಧ್ಯೇ

ಹೀಗೆ ಎರಡು ಸೇನೆಗಳೂ ಯುದ್ಧ ಸನ್ನದ್ಧವಾಗಿರುವುದನ್ನು ಕಂಡು ಅರ್ಜುನನು ಸಮರೋತ್ಸುಕನಾಗಿ ಎರಡೂ ಸೇನೆಗಳ ಮಧ್ಯದಲ್ಲಿ ತನ್ನ ರಥವನ್ನು ನಿಲ್ಲಿಸಬೇಕೆಂದೂ ತಾನು ಯಾರ ಜೊತೆಗೆ ಯುದ್ಧ ಮಾಡಬೇಕಾಗಿದೆಯೋ ಅವರನ್ನೆಲ್ಲಾ ವಿಹಂಗಮ ದೃಷ್ಟಿಯಿಂದ ನೋಡಬೇಕೆಂದಿರುವೆನೆಂದೂ ತನ್ನ ಸಾರಥಿಯಾದ ಶ್ರೀಕೃಷ್ಣ ಪರಮಾತ್ಮನನ್ನು ಕೇಳುತ್ತಾನೆ. ಅದರಂತೆ ಶ್ರೀಕೃಷ್ಣನು ಎರಡೂ ಸೇನೆಗಳ ಮಧ್ಯದಲ್ಲಿ ರಥವನ್ನು ನಿಲ್ಲಿಸಿದಾಗ ಅರ್ಜುನನು ಸೈನ್ಯವನ್ನು ವೀಕ್ಷಿಸುವನು. ಒಮ್ಮೆಲೇ ಅವನ ಹೃದಯಕ್ಕೆ ಆಘಾತವಾದಂತಾಗುತ್ತದೆ. ತಮ್ಮ ಎದುರಿನ ಸೈನ್ಯದಲ್ಲಿರುವ ಎಲ್ಲ ಮುಖಗಳೂ ಚಿರಪರಿಚಿತಗಳೇ. ಆಚಾರ್ಯರು, ಬಂಧುಗಳು, ಸ್ನೇಹಿತರು ಇಂತಹವರೇ ಯುದ್ಧಕ್ಕಾಗಿ ಎದುರು ಬಂದು ನಿಂತಿದ್ದಾರೆ. ತಾನು ಈವರೆಗೆ ಪ್ರೀತಿಸುತ್ತಿದ್ದ ವ್ಯಕ್ತಿಗಳ ಜೊತೆಯಲ್ಲಿ ನಿಷ್ಠುರವಾದ ಯುದ್ಧವನ್ನು ನಡೆಸಬೇಕಾದ ಸನ್ನಿವೇಶವನ್ನು ನೆನೆದು ಅರ್ಜುನನ ಹೃದಯವು ಉದ್ವಿಗ್ನವಾಗುತ್ತದೆ. ಅರ್ಜುನನು ಮೋಹಪರವಶನಾಗುತ್ತಾನೆ. ಬಂಧು ವ್ಯಾಮೋಹದಿಂದ ಅವನ ಸರ್ವಶಕ್ತಿಯೂ ಕುಂಠಿತವಾದಂತೆನಿಸುತ್ತದೆ. ತಾನು ಈ ಸ್ವಜನರ ಜೊತೆಗೆ ಯುದ್ಧವನ್ನು ನಡೆಸುವುದಿಲ್ಲವೆಂದು ಕೃಷ್ಣನಲ್ಲಿ ನಿವೇದಿಸಿ ತನ್ನ ಈ ನಿರ್ಧಾರಕ್ಕೆ ಬಲವಾದ ಕಾರಣಗಳನ್ನು ನಿರೂಪಿಸುತ್ತಾನೆ. ಅರ್ಜುನನ ನಿರೂಪಣೆಯು ಸಂಕ್ಷೇಪವಾಗಿ ಈ ರೀತಿ ಇದೆ.

‘‘ನಾನು ಮಾಡಬೇಕೆಂದಿರುವ ಈ ಯುದ್ಧದಿಂದ ಐಹಿಕ ಪ್ರಯೋಜನವೂ ಇಲ್ಲ; ಪಾರತ್ರಿಕ ಲಾಭವೂ ಇಲ್ಲ. ಯುದ್ಧದಲ್ಲಿ ಗೆದ್ದರೆ ರಾಜ್ಯ ಸುಖಭೋಗಗಳು ದೊರೆಯಬಹುದು. ಆದರೆ ನಾವು, ದೊರೆಯುವುದಕ್ಕಿಂತ ಹೆಚ್ಚಿನದನ್ನು ಕಳೆದುಕೊಳ್ಳುತ್ತೇವೆ. ನಮ್ಮ ಎಲ್ಲ ಗುರು, ಬಂಧು, ಸ್ನೇಹಿತರ ಪರಿವಾರವನ್ನು ಕಳೆದುಕೊಂಡು ಅವರ ಸಮಾಧಿಯ ಮೇಲೆ ಕಟ್ಟುವ ಸುಖಭೋಗದ ಸೌಧವು ನಮಗೆ ಏನು ಆನಂದವನ್ನು ನೀಡಬಲ್ಲದು? ನಾವು ವಿಜಯಿಗಳಾಗಿ

ರಾಜ್ಯಾಧಿಕಾರಿಗಳಾದ ನಂತರ ಭೋಗ ಪದಾರ್ಥಗಳಿಗೂ ನಮ್ಮ ಶರೀರ ಮನಸ್ಸುಗಳಿಗೂ ಸಂಬಂಧವೇನೋ ಆಗಬಹುದು. ಆದರೆ ಅದರಿಂದ ಆನಂದವು ಮಾತ್ರ ದೊರೆಯಲಾರದು. ಹುರಿದ ಬೀಜಗಳನ್ನು ನೆಲದಲ್ಲಿ ಹಾಕಿದರೂ ಅದರಿಂದ ಮೊಳಕೆ ಬರಲಾರದು. ಅದರಂತೆ ನಮ್ಮ ಪ್ರೀತಿಪಾತ್ರ ಪರಿವಾರದ ನಿಧನದ ಶೋಕದಿಂದ ಹುರಿದ, ಬೆಂದ, ಈ ಹೃದಯವು ಯಾವ ಆನಂದದ ಝುರಿಯನ್ನೂ ಆಸ್ವಾದಿಸಲಾರದು. ಬಂಧು ಜನರ ರಕ್ತಸಿಕ್ತವಾದ ಈ ರಾಜ್ಯವನ್ನಾಗಲಿ, ಭೋಗಜೀವಿತಗಳನ್ನಾಗಲಿ ನಾನು ಬಯಸಲಾರೆ.

''ಇನ್ನು ಪಾರತ್ರಿಕ ಸುಖ, ಅದಾದರೂ ಈ ನಿರ್ದಯ ಕಾರ್ಯದಿಂದ ನಮಗೆ ಹೇಗೆ ದೊರೆಯುವುದು? ಧೃತರಾಷ್ಟ್ರನ ಮಕ್ಕಳೇನೋ ನಮಗೆ ಆತತಾಯಿಗಳು.★ ಆದರೆ ನಾವು ಅವರ ಜೊತೆಗೆ ಮಾತ್ರ ಯುದ್ಧಮಾಡುತ್ತಿರುವುದಲ್ಲ. ಶತ್ರುಗಳ ಜೊತೆ ಅನೇಕ ಬಂಧು, ಮಿತ್ರ, ಗುರುಗಳನ್ನು ನಾವು ಯುದ್ಧದಲ್ಲಿ ಎದುರಿಸಿ ಕೊಲ್ಲಬೇಕಾಗುವುದು. ಹೀಗೆ ಗುರುಗಳನ್ನು, ಬಂಧು-ಮಿತ್ರರನ್ನು ಕೊಲ್ಲುವುದರಿಂದ ನಾವೇ ಆತತಾಯಿಗಳಾಗಿ ಸ್ವರ್ಗದಿಂದಲೂ ಪಾರತ್ರಿಕ ಸುಖದಿಂದಲೂ ವಂಚಿತರಾಗುವೆವು. ದುರ್ಯೋಧನಾದಿಗಳು ಆತತಾಯಿಗಳೂ ದುಷ್ಟರೂ ಎಂದು ಭಾವಿಸಿ ಅವರನ್ನು ನಾಶಪಡಿಸಲು ಹೋಗಿ ನಾವು ಅದೇ ದೌಷ್ಟ್ಯವನ್ನೂ ಅಕೃತ್ಯವನ್ನೂ ಎಸಗುವುದೇ? ಪರಲೋಕದಲ್ಲಿ ಇಬ್ಬರೂ ಕೂಡಿ ನರಕವನ್ನು ಅನುಭವಿಸಬೇಕಾಗುವುದು.''

ಹೀಗೆ ಯುದ್ಧದಿಂದ ಐಹಿಕ ಹಾಗೂ ಪಾರತ್ರಿಕ ಇವೆರಡೂ ಸುಖ ಇಲ್ಲವೆಂದು ಅರ್ಜುನನು ಪ್ರತಿಪಾದಿಸುತ್ತಿದ್ದಾನೆ. ಇಷ್ಟೇ ಅಲ್ಲದೆ, ಯುದ್ಧದಿಂದ ಲೋಕವ್ಯವಸ್ಥೆಯು ಬುಡಮೇಲಾಗಿ ಅದರಿಂದ ಆಗಬಹುದಾದ ಅನರ್ಥಗಳಿಗೆ ತಾನು ಹೊಣೆಗಾರನಾಗುವೆನೆಂಬ ಆಶಂಕೆಯನ್ನೂ ಅರ್ಜುನನು ವ್ಯಕ್ತಪಡಿಸುತ್ತಾನೆ. ''ಯುದ್ಧದಿಂದ ದೊಡ್ಡ ಪ್ರಮಾಣದಲ್ಲಿ ಕುಲನಾಶವಾಗುತ್ತದೆ. ಕುರುಕ್ಷೇತ್ರದಲ್ಲಿ ಪ್ರತಿ ಮನೆಯಿಂದ ಎಂಬಂತೆ ವಿಶೇಷ ಪ್ರಮಾಣದಲ್ಲಿ

---

★ ಆತತಾಯಿ : ವಿಷ, ಬೆಂಕಿ ಮುಂತಾದ ಮಾರ್ಗಗಳಿಂದ ಕೊಲ್ಲಲು ಪ್ರಯತ್ನಿಸುವವನು ಆತತಾಯಿ. ಆತ್ಮರಕ್ಷಣೆಗಾಗಿ ಇಂತಹವನನ್ನು ಕೊಲ್ಲಬೇಕೆಂದು ಶಾಸ್ತ್ರವಚನವಿದೆ.

ಸೈನಿಕರ ಜಮಾವಣೆಯಾಗಿದೆ. ಇವರೆಲ್ಲರ ನಾಶದಿಂದ ಪುರುಷಸಂಖ್ಯೆಯ ಹಾನಿ ಅಪಾರವಾಗುವುದು. ನಿರುಪಾಯರಾಗಿ ಸ್ತ್ರೀಯರು ತಪ್ಪುದಾರಿ ತುಳಿಯಲು ಅವಕಾಶವಾಗುವುದು. ವರ್ಣಸಂಕರವಾಗಬಹುದು. ಲೋಕವ್ಯವಸ್ಥೆಯು ಅಸ್ತವ್ಯಸ್ತವಾಗಬಹುದು. ಅನೀತಿ ಅನಾಚಾರಗಳ ತಾಂಡವವಾಗಬಹುದು'' -ಎಂಬುದೇ ಅರ್ಜುನನ ಆಶಂಕೆ. ದ್ವಿತೀಯ ಮಹಾಯುದ್ಧದ ನಂತರದ ಕೆಲವು ಸಂಗತಿಗಳನ್ನು ನೋಡಿದರೆ ಅರ್ಜುನನ ಈ ಆಶಂಕೆಗೂ ಆಧಾರವಿದೆ ಎಂದು ನಮಗೆ ಅನಿಸಬಹುದು.

ಹೀಗೆ ವೈಯಕ್ತಿಕವಾಗಿ ಐಹಿಕ ಪಾರತ್ರಿಕ ಸುಖಗಳಿಗೆ ವಿಘಾತಕವೂ ಹಾನಿಕಾರಕವೂ ವ್ಯವಸ್ಥಾಹಾನಿಯಿಂದ ಸಮಾಜಘಾತಕವೂ ಆದ ಈ ಯುದ್ಧದಲ್ಲಿ ತಾನು ತೊಡಗುವುದಿಲ್ಲವೆಂದು ಅರ್ಜುನನು ಪಟ್ಟುಹಿಡಿಯುತ್ತಾನೆ. ತಾನು ಭಿಕ್ಷೆಬೇಡಿಯಾದರೂ ಜೀವಿಸಬಲ್ಲೆ; ಅಥವಾ ವಾನಪ್ರಸ್ಥನಾಗಿ ಅರಣ್ಯಕ್ಕೂ ಹೋಗಬಲ್ಲೆ, ಬಂಧುಹತ್ಯೆಯಂತಹ ನಿರ್ದಯ ಕಾರ್ಯವನ್ನು ರಾಜ್ಯದ ಆಶೆಗಾಗಿ ಮಾಡಲಾರೆನೆಂದು ತೀವ್ರ ಮಾನಸಿಕ ಉದ್ವೇಗಕ್ಕೆ ಒಳಗಾದ ಅರ್ಜುನನು ಬಲವಾಗಿ ಪ್ರತಿಪಾದಿಸಿ ಶಸ್ತ್ರವನ್ನು ಕೆಳಗಿಡುವನು. ಶ್ರೀಕೃಷ್ಣನು ''ಕ್ಲೀಬವೃತ್ತಿಯನ್ನು ಅನುಸರಿಸದಿರು. ಹೃದಯದೌರ್ಬಲ್ಯವನ್ನು ಕಿತ್ತೊಗೆದು ವೀರನಾಗಿ ಎದ್ದೇಳು.'' ಎಂದು ಬೋಧಿಸಿದರೂ ಅರ್ಜುನನ ಚಿತ್ತವೃತ್ತಿಯಲ್ಲಿ ಏನೂ ಬದಲಾವಣೆ ಆಗುವುದಿಲ್ಲ. ಬಂಧುಹತ್ಯೆಯಿಂದ ದೊರಕಬಹುದಾದ ಇಡೀ ಭೂಲೋಕದ ಆಧಿಪತ್ಯವನ್ನಾಗಲಿ ಸ್ವರ್ಗರಾಜ್ಯವನ್ನಾಗಲಿ ತಾನು ಬಯಸಲಾರೆನೆಂದು ವ್ಯಾಮೋಹದ ಪರಾಕಾಷ್ಠೆಯಿಂದ ವ್ಯವಹರಿಸುತ್ತಾನೆ. ಪಾರತ್ರಿಕ ಸುಖದೊರೆತರೂ ತಾನು ಬಂಧುಗಳನ್ನು ಹಿಂಸಿಸಲಾರೆನೆಂದು ಹಠ ಹಿಡಿಯುತ್ತಾನೆ. ವಿಕ್ಷಿಪ್ತಚಿತ್ತನಾಗಿ ಶ್ರೀಕೃಷ್ಣನನ್ನು ಪ್ರಾರ್ಥಿಸಿಕೊಳ್ಳುತ್ತ, ತಾನು ಕರ್ತವ್ಯಮೂಢನಾಗಿರುವೆನು. ಮೋಹವಶನಾಗಿ ಸತ್ಯವನ್ನು ತಿಳಿಯಲು ಅಸಮರ್ಥನಿರುವೆನು. ಧರ್ಮಸಮ್ಮೂಢಚೇತನಾದ ತನಗೆ ಸರಿಯಾದ ದಾರಿಯನ್ನು ತೋರಿಸಿ ಗುರುವಾಗಿ ನೀನು ಉದ್ಧರಿಸಬೇಕೆಂದು ಬೇಡುವನು. ಇಷ್ಟೆಲ್ಲ ವಾದಗಳನ್ನು ಮುಂದಿಟ್ಟು ಯುದ್ಧವನ್ನು ಅರ್ಜುನನು ವಿರೋಧಿಸಿದರೂ ತನ್ನ ವಾದದಲ್ಲಿ ಆತನಿಗೆ ನಂಬಿಕೆ ಇರಲಿಲ್ಲ. ತಾನು

ಮೋಹ-ಕಾರ್ಪಣ್ಯಗಳಿಗೆ ಒಳಪಟ್ಟು ಅವನ್ನು ವೇದಾಂತಿಕ ಭಾಷೆಯಿಂದ ಮುಚ್ಚಿಡಲು ಪ್ರಯತ್ನಿಸುತ್ತಿದ್ದೇನೆಂದು ಅರ್ಜುನನಿಗೂ ಅರಿವಾಗಿತ್ತು. ಬಂಧುವ್ಯಾಮೋಹ, ಧರ್ಮಭೀರುತ್ವ ಒಂದೆಡೆ. ಕರ್ತವ್ಯದ ಕರೆ ಇನ್ನೊಂದೆಡೆ, ಈ ಅಂತರ್ದ್ವಂದ್ವದಲ್ಲಿ ಸಿಲುಕಿದ ಅರ್ಜುನನಿಗೆ ನಿಶ್ಚಿತ ಪಥವು ಗೋಚರವಾಗದೆ, ಗುರುವಾಗಿ ತನಗೆ ಮಾರ್ಗದರ್ಶನ ಮಾಡಿ ಉದ್ಧರಿಸಬೇಕೆಂದು ಶ್ರೀಕೃಷ್ಣಪರಮಾತ್ಮನಲ್ಲಿ ಶರಣಾಗತನಾಗುವನು.

## ಕೃಷ್ಣನ ಉಪದೇಶದ ಹಿನ್ನೆಲೆ

ಜಿಜ್ಞಾಸುವೂ ಆರ್ತನೂ ಆದ ತನ್ನ ಭಕ್ತ ಅರ್ಜುನನಿಗೆ ಶ್ರೀಕೃಷ್ಣನು ತನ್ನ ದಿವ್ಯವಾಣಿಯಿಂದ ಉಪದೇಶವನ್ನು ನೀಡಲು ಉಪಕ್ರಮಿಸುತ್ತಾನೆ. ಶ್ರೀಕೃಷ್ಣನು ಅರ್ಜುನನ ಪ್ರಶ್ನೆಗಳಿಗೆ ನೇರವಾಗಿ ಉತ್ತರಕೊಡದೆ ಬಳಸುದಾರಿಯಿಂದ ಉಪದೇಶವನ್ನು ಯಾಕೆ ನೀಡುತ್ತಾನೆಂದು ಕೆಲವರು ಆಕ್ಷೇಪಿಸುತ್ತಾರೆ. ಆತ್ಮನ ನಿತ್ಯತೆ, ಸತ್ಯತೆ ಮುಂತಾದ ಜಟಿಲ ವಿಷಯಗಳನ್ನು ಕೃಷ್ಣನು ಪ್ರಸ್ತಾಪಿಸುವ ಆವಶ್ಯಕತೆ ಏನಿತ್ತು! ಯುದ್ಧದಿಂದಾಗುವ ಲೋಕವ್ಯವಸ್ಥಾಭಂಗದ ಅನರ್ಥಕ್ಕೆ ಮುಂದೆ ಗೀತೆಯಲ್ಲಿ ವಿವೇಚನೆಯೇ ಕಾಣುವುದಿಲ್ಲ. ಬೇರೆ ವೇದಾಂತಿ ಭಾಷೆಯಲ್ಲಿ ಈ ವಿಷಯಗಳನ್ನೇ ಮರೆಸಲು ಶ್ರೀಕೃಷ್ಣನು ಪ್ರಯತ್ನಿಸಿದಂತೆ ಇದೆಯೆಂದು ಅನೇಕರು ಪ್ರಶ್ನಿಸುತ್ತಾರೆ. ಆದರೆ ಗೀತೆಯನ್ನು ಸರಿಯಾಗಿ ಅಭ್ಯಸಿಸಿದರೆ ಶ್ರೀಕೃಷ್ಣನು ಅರ್ಜುನನಿಗೆ ಉಪದೇಶಿಸುವಾಗ ಈ ವಕ್ರಗತಿಯನ್ನು ಅನುಸರಿಸಲಿಲ್ಲವೆಂದು ಸ್ಪಷ್ಟವಾಗುವುದು. ಅರ್ಜುನನು ಇಷ್ಟೆಲ್ಲ ಮಾತಾಡಿದ್ದರೂ ಅವನ ವಿವಶತೆಗೆ ಮೂಲ ಕಾರಣವೇನು? ನಿಜವಾಗಿಯೂ ಧಾರ್ಮಿಕ ಭಾವನೆಯಿಂದ ಅರ್ಜುನನು ಯುದ್ಧವಿಮುಖನಾಗಿರುವನೆ? ಇಲ್ಲ, ಆತನು ನಿಜವಾಗಿಯೂ ಮೋಹಕ್ಕೆ ವಶನಾಗಿರುವನು. ತನ್ನವರನ್ನು ಹೇಗೆ ಕಳೆದುಕೊಳ್ಳಲಿ ಎಂಬ ವ್ಯಾಮೋಹವೇ ಅವನ ಈ ವಿಮುಖತೆಗೆ ಮುಖ್ಯ ಕಾರಣ. ಹಿಂದೆ ಹಲವಾರು ಯುದ್ಧಗಳನ್ನು ನಡೆಸಿದ ಅರ್ಜುನನು ಇಂದು ಮಾತ್ರ ಯುದ್ಧವು ಅಕಾರ್ಯವೆಂದು ಪ್ರತಿಪಾದಿಸುತ್ತಾನೆ. ಮನುಷ್ಯನು ಸ್ವಾರ್ಥಿಯಾದಾಗ ಧರ್ಮ-ವೇದಾಂತಗಳನ್ನು ತನಗೆ ಬೇಕಾದಂತೆ ತಿರುಗಿಸಿಕೊಳ್ಳುವನು.

ಸಮಾಜದಲ್ಲಿ ಧರ್ಮಜಾಗೃತಿಯನ್ನು ಮಾಡಲು ಹೊಣೆಗಾರನಾದರೂ ಆಲಸಿಯಾದ ಸನಾತನಿಯು ''ಕಲಿಯುಗದಲ್ಲಿ ಅಧರ್ಮಪ್ರಚಾರವಾಗುವುದೇ ಭಗವತ್‌ಸಂಕಲ್ಪ, ಅವನ ಸಂಕಲ್ಪಕ್ಕೆ ವಿರುದ್ಧವಾಗಿ ನಾವು ಏನೂ ಮಾಡಬಾರದು'' ಎಂದು ವೇದಾಂತದ ಭಾಷೆಯಿಂದ ತನ್ನ ಆಲಸ್ಯವನ್ನು ಮುಚ್ಚಿಡಲು ಪ್ರಯತ್ನಿಸುತ್ತಾನೆ. ''ಸಂತರ್ಪಣೆ ಮಾಡುವುದು ಅಪವ್ಯಯ; ರಾಷ್ಟ್ರಕ್ಕೆ ಹಾನಿಕರ'' ಎಂದು ಹೇಳಿ ತಮ್ಮ ಲೋಭವನ್ನು ಮುಚ್ಚಿಡುವವರೂ ಕೆಲವರು ಇರುವರು. ಅರ್ಜುನನು ಅನೇಕಬಾರಿ ಯುದ್ಧವನ್ನು ಮಾಡಿದವನೇ. ಇಂದು ಮಾತ್ರ ಯುದ್ಧದ ವಿರುದ್ಧವಾಗಿ ದೀರ್ಘ ಉಪನ್ಯಾಸ ಮಾಡಿ ಈ ಪ್ರಜ್ಞಾವಾದದ ಮುಖವಾಡದಲ್ಲಿ ತನ್ನ ಮೋಹದ ದೌರ್ಬಲ್ಯವನ್ನು ಮುಚ್ಚಿಡಲು ಪ್ರಯತ್ನಿಸುತ್ತಿದ್ದಾನೆ. ವಸಿಷ್ಠ ಮೊದಲಾದವರೂ ಪುತ್ರ ವ್ಯಾಮೋಹಕ್ಕೆ ಸಿಕ್ಕು ಶೋಕಾವೇಶವನ್ನು ಪ್ರಕಟಿಸಿದ್ದಾರೆ. ಆದರೆ ಅವರಿಗೆ ತಮ್ಮ ದೌರ್ಬಲ್ಯ ಹಾಗೂ ವಿವಶತೆಯ ಅರಿವಾಗಿತ್ತು. ಅರ್ಜುನನಂತೆ ಆತ್ಮಸಮರ್ಥನೆಯ ಈ ವಾದಗಳನ್ನು ಅವರು ಮಂಡಿಸಿರಲಿಲ್ಲ. ಅರ್ಜುನನ ಈ ವೇಷವನ್ನು ಕಂಡೇ ಶ್ರೀಕೃಷ್ಣನಿಗೆ ನಗು ಬಂದಿರಬೇಕು-

ಪ್ರಹಸನ್ನಿವ ಭಾರತ

ಆದ್ದರಿಂದಲೇ ಶ್ರೀಕೃಷ್ಣನು ಅರ್ಜುನನು ಯುದ್ಧದ ಅನರ್ಥದ ಬಗ್ಗೆ ಆಡಿದ ಮಾತುಗಳಿಗೆ ವಿಶೇಷವಾಗಿ ಉತ್ತರ ಕೊಡುವುದಿಲ್ಲ. ನಿಜವಾಗಿಯೂ ಅರ್ಜುನನು ಹೇಳಿದಂತೆ ಯುದ್ಧದಿಂದ ರಾಷ್ಟ್ರಕ್ಕೆ ದುಷ್ಪರಿಣಾಮವಾಗಲಿಲ್ಲ. ಯುದ್ಧಾನಂತರದಲ್ಲಿ ದೇಶದಲ್ಲಿ ರಾಮರಾಜ್ಯ ಸದೃಶವಾದ ಶ್ರೇಷ್ಠವಾದ ಲೌಕಿಕ ಆಧ್ಯಾತ್ಮಿಕ ಸಮೃದ್ಧಿ ಸಂಪನ್ನವಾದ ಧರ್ಮರಾಜ್ಯವೇ ಸ್ಥಾಪಿತವಾಯಿತು. ಅನಂತರದ ಸಹಸ್ರಾರು ವರ್ಷಗಳು ದೇಶದ ಸ್ವರ್ಣಯುಗವೆಂದು ಇತಿಹಾಸಕಾರರೂ ಭಾವಿಸುತ್ತಾರೆ. ಆದ್ದರಿಂದ ಧರ್ಮಕ್ಕಾಗಿ ನಡೆಯುವ ಹೋರಾಟದ ಬಗ್ಗೆ ಅರ್ಜುನನು ಆಡಿದ ಪ್ರಜ್ಞಾವಾದಗಳಿಗೆ ಶ್ರೀಕೃಷ್ಣನು ವಿಶೇಷವಾಗಿ ಉತ್ತರ ಕೊಡುವ ಗೋಜಿಗೆ ಹೋಗದೆ ಆತನ ಮೂಲಭೂತ ಹೃದಯದೋಷವನ್ನು ಕಿತ್ತೊಗೆಯಲು ಉಪಕ್ರಮಿಸುತ್ತಾನೆ. ಅರ್ಜುನನ ಮೋಹವನ್ನು ಪರಿಹರಿಸುವುದೇ ಶ್ರೀಕೃಷ್ಣನ ಮುಖ್ಯ ಉದ್ದೇಶವಾಗಿದೆ.

ಅರ್ಜುನನು ತನ್ನ ದೌರ್ಬಲ್ಯವನ್ನು ಮುಚ್ಚಿಡಲು ಆಡಿದ ಸ್ವಸಮರ್ಥನೆಯ ಪ್ರಜ್ಞಾವಾದಗಳಿಗೆ ಉತ್ತರ ಕೊಡುವುದಕ್ಕಿಂತ ಆ ದೌರ್ಬಲ್ಯವನ್ನು ಪರಿಹಾರ ಮಾಡಿದರೆ ಅರ್ಜುನನಿಗೆ ಸರಿಯಾದ ಚಿಕಿತ್ಸೆಯನ್ನು ಮಾಡಿದಂತಾಗುವುದೆಂದು ಸರ್ವಜ್ಞನೂ ಕರುಣಾನಿಧಿಯೂ ಆದ ಭಗವಂತನು ಅವನ ಮೋಹವನ್ನು ಹೋಗಲಾಡಿಸುವ ಸ್ಪಷ್ಟ ಸಂದೇಶವನ್ನು ನೀಡುತ್ತಿದ್ದಾನೆ. ಆದುದರಿಂದಲೇ ಅರ್ಜುನನು ಪ್ರಶ್ನಿಸಿದ ಬೇರೆ ಯಾವ ಅಂಶಗಳನ್ನೂ ಸ್ಪರ್ಶಿಸದೆ, ಮೋಹ ನಿರಾಸಕ್ಕೆ ಅವಶ್ಯಕವಾದ ಆತ್ಮನ ನಿತ್ಯತೆ, ದೇಹದಿಂದ ಆತ್ಮನ ಪ್ರತ್ಯೇಕ ಅಸ್ತಿತ್ವ ಮೊದಲಾದ ವಿಚಾರಗಳನ್ನು ಪರಮಾತ್ಮನು ಪ್ರತಿಪಾದಿಸಲು ಉಪಕ್ರಮಿಸುವುದಾಗಿದೆ.

## "ಅಶೋಚ್ಯಾನನ್ವಶೋಚಸ್ತ್ವಮ್"

ಮೊದಲಾಗಿ ಶ್ರೀಕೃಷ್ಣನು ಅರ್ಜುನನಲ್ಲಿ, "ನಿನ್ನ ಶೋಕಾವೇಗಕ್ಕೆ ಕಾರಣಗಳಾದ ಸಂಗತಿಗಳು ಯಾವವು?" ಎಂದು ಕೇಳುವನು. "ಬಂಧು ನಾಶಕ್ಕಾಗಿ ಪರಿತಪಿಸುತ್ತಿರುವ ನಿನ್ನ ಆಕ್ರೋಶವು ಅವರ ಆತ್ಮದ ನಾಶದ ಬಗ್ಗೆಯೊ ಅಥವಾ ಈ ಶರೀರನಾಶದ ವಿಚಾರವಾಗಿಯೊ? ಆತ್ಮವಿನಾಶದ ಬಗ್ಗೆ ನಿನ್ನ ಈ ಶೋಕವು ಅನುಚಿತ. ಆತ್ಮನು ನಿತ್ಯನು; ಅಜರಾಮರನು. ನೀನಾಗಲಿ, ನಾನಾಗಲಿ, ನಮ್ಮ ಮುಂದಿರುವ ಈ ಎಲ್ಲ ಜನನಾಯಕರಾಗಲಿ ಎಲ್ಲರೂ ಹಿಂದೂ ಇದ್ದವರೇ ಮುಂದೂ ಇರುವವರೇ. ಆದ್ದರಿಂದ ಆತ್ಮದ ನಾಶದ ಕಲ್ಪನೆಯನ್ನೇ ಮಾಡಲಾರೆ. ಅದಕ್ಕಾಗಿ ಯಾಕೆ ವ್ಯಥೆಪಡುವಿ ?

"ಇನ್ನು ನಾನು ಪ್ರೀತಿಸಿ ಲಾಲಿಸಿದ ಹಾಗೂ ಗೌರವಿಸಿದ ಈ ಶರೀರಗಳೆಲ್ಲ ನನ್ನ ಮುಂದೆಯೇ ಛಿನ್ನವಿಚ್ಛಿನ್ನಗಳಾಗಿ ನಷ್ಟಹೊಂದುವವೆಂದು ಖೇದವೆ? ಅರ್ಜುನ! ಹಳೇ ಮನೆಯನ್ನು ಕೆಡವಿ ಹೊಸ ಮನೆಯನ್ನು ಕಟ್ಟುವಾಗ ಯಾರಾದರೂ ಅಳುತ್ತಾರೆಯೆ? ಹಳೇ ಅಂಗಿ-ಅರಿವೆಗಳನ್ನು ತೊರೆದು ಹೊಸ ವೇಷಭೂಷಣಗಳನ್ನು ನೀಡಿದಾಗ ಮಕ್ಕಳು ಕುಣಿಯುವುದಿಲ್ಲವೆ? ಬಾಲ್ಯವು ಕಳೆದು ತಾರುಣ್ಯಾವಸ್ಥೆಯನ್ನು ತಲುಪಿದಾಗ ಸಂತಸ ಪಡುವುದನ್ನೇ ನಾವು ಕಾಣುತ್ತೇವಲ್ಲವೆ? ಜಗತ್ತಿನಲ್ಲಿ ಬದಲಾವಣೆ ಅನಿವಾರ್ಯ ಹಾಗೂ ಅಪೇಕ್ಷಿತ;

ಉದ್ಯಾನದಲ್ಲಿ ಹಳೇ ಪುಷ್ಪಗಳು ಉದುರಿ ಹೊಸ ಪುಷ್ಪಗಳು ಅರಳುವಂತೆ. ನಾವು ಪ್ರಸನ್ನತೆಯಿಂದಲೇ ಈ ಪರಿವರ್ತನೆಗಳನ್ನು ಸ್ವಾಗತಿಸುತ್ತಿರಬೇಕು. ಮರಣಕ್ಕಾಗಿ ಸರ್ವಥಾ ಅಂಜಬಾರದು. ಬಾಲ್ಯ, ಕೌಮಾರ, ತಾರುಣ್ಯಗಳಂತೆ ಮರಣವೂ ಒಂದು ದಶಾಪರಿವರ್ತನೆ ಮಾತ್ರವೆಂದು ಭಾವಿಸಿ ಅಶಾಶ್ವತವಾದ ಈ ಶರೀರದ ನಾಶಕ್ಕಾಗಿ ಪರಿತಪಿಸಬಾರದು.

''ಅಥವಾ ಈ ಶರೀರ ನಾಶವಾಗಿ ಇದರ ಬದಲು ಮುಂದೆ ಎಂತಹ ಶರೀರವನ್ನು ಇವರೆಲ್ಲ ಪಡೆಯುವರು? ಬಾಡಿಗೆಯ ಮನೆಯನ್ನು ತೊರೆದು ಅದಕ್ಕಿಂತ ಕೆಟ್ಟ ಮನೆಯನ್ನು ಪಡೆಯುವಂತಾದರೆ ಜನರು ಪರಿತಪಿಸುವುದಿಲ್ಲವೆ? ಹೀಗೆ ಈ ದೇಹನಾಶಕ್ಕಾಗಿ ಶೋಕ ಅನುಚಿತವಾದರೂ ಮುಂದೆ ಬರಬಹುದಾದ ಹೀನದೇಹಗಳ ಭಯ, ಆಶಂಕೆಗಳಿಂದ ಪರಿತಾಪವೆನ್ನುವಿಯೊ? ಭೀಷ್ಮ-ದ್ರೋಣಾದಿಗಳಂತಹ ಜೀವನವಿಡೀ ಶ್ರೇಷ್ಠ ಕಾರ್ಯಗಳನ್ನೇ ಎಸಗಿದ ಸಜ್ಜನರ ಬಗ್ಗೆ ಯಾಕೆ ಕನಿಕರಪಡುವಿ? ಅವರಿಗೆ ಮರಣಾನಂತರ ಶ್ರೇಷ್ಠವಾದ ಸ್ಥಾನವು ನಿರ್ವಿವಾದ. ಜೀವನದಲ್ಲಿ ಅಕೃತ್ಯವನ್ನು ನಡೆಸಿದವರೇ ಮರಣಕ್ಕೆ ಅಂಜಬೇಕು. ಕಳ್ಳರು ತಮ್ಮ ನೆರಳಿಗೇ ಅಂಜುವಂತೆ ಜೀವನದಲ್ಲಿ ಅವ್ಯವಹಾರವನ್ನು ಮಾಡಿರುವವರು ಮಾತ್ರ ಜೀವನದ ನೆರಳಿನಂತಿರುವ ಮರಣಕ್ಕೆ ಭಯಪಡುವರು. ಜ್ಞಾನಿಗಳಿಗೆ, ಉತ್ತಮ ವ್ಯಕ್ತಿಗಳಿಗೆ ಮರಣವು ಜೀವನಯಜ್ಞದ ಅವಭೃಥವೇ ಆಗಿದೆ. ಮರಣದ ನಂತರ ಇನ್ನೂ ಉತ್ತಮವಾದ ಸಂದರ್ಭಗಳು ಅವರಿಗೆ ಕಾದಿವೆ. ಆದುದರಿಂದ ಸಜ್ಜನರ ಮರಣದ ಬಗ್ಗೆ ನೀನು ಕಾತರಿಸಬೇಕಾಗಿಲ್ಲ. ದುಷ್ಟರು ಮಾತ್ರ ತಮ್ಮ ಮರಣದ ನಂತರ ಹೀನ ಶರೀರಗಳನ್ನು ಪಡೆಯಬಹುದು. ದುಷ್ಟಕಾರ್ಯಗಳಿಗೆ ಯೋಗ್ಯ ದಂಡನೆಯೂ ಆಗಲೇಬೇಕಾದುದು. ಎಷ್ಟೋ ಸಜ್ಜನರೂ ಅಕಸ್ಮಾತ್ ಸಂಭವಿಸಿದ ಪಾಪಕೃತ್ಯಗಳಿಗೆ ಸ್ವಯಂ ಪ್ರೇರಣೆಯಿಂದ ಶಿಕ್ಷೆಯನ್ನು ಪಡೆದು ಪಾಪಪ್ರಕ್ಷಾಲನವನ್ನು ನಡೆಸಿಕೊಂಡ ಇತಿಹಾಸಗಳೂ ಸಾಕಷ್ಟು ಇವೆ. ಆದ್ದರಿಂದ ದುರ್ಜನರ ಮರಣದ ನಂತರದ ಸಂಗತಿಗಳನ್ನು ಆಲೋಚಿಸಿಕೊಂಡು ಚಿಂತಿಸುವುದು ಅನಾವಶ್ಯಕವೆನಿಸುತ್ತದೆ. ದುಷ್ಟರ ಬಗ್ಗೆ ಅನುಚಿತ ಅನುಕಂಪದಿಂದ ಸಮಾಜವ್ಯವಸ್ಥೆಯೇ ಶಿಥಿಲವಾಗಬಹುದು. ಅಂತೂ ಶರೀರವು ನಶ್ವರವಾಗಿದ್ದು,

ಅದರಲ್ಲಿ ಬದಲಾವಣೆಯು ಅನಿವಾರ್ಯವೂ ಸ್ವಾಗತಾರ್ಹವೂ ಆಗಿದೆ. ಆತ್ಮನಂತೂ ಶಾಶ್ವತ ವಸ್ತು, ಹೀಗಾಗಿ ನಿನ್ನ ಶೋಕಕ್ಕೆ ಕಾರಣವೇ ಇರುವುದಿಲ್ಲ.''

ಇಲ್ಲಿ ನಮ್ಮ ಪ್ರತ್ಯಕ್ಷಗೋಚರವಾಗಿರುವ ಶರೀರದಿಂದ ಪ್ರತ್ಯೇಕನಾದ ಆತ್ಮನನ್ನು ಯಾಕೆ ಒಪ್ಪಬೇಕು? ಶರೀರವೇ ಆತ್ಮ. ಶರೀರದ ನಾಶದ ಜೊತೆಗೆ ಈ ಆತ್ಮನೂ ಎಂದೆಂದಿಗೂ ಇಲ್ಲದವನಾಗುವನೆಂದು ಶಂಕಿಸಬಹುದು. ಆದರೆ ಶಾಸ್ತ್ರ, ಯುಕ್ತಿ, ಪ್ರತ್ಯಕ್ಷಾನುಭವಗಳಿಂದ ಶರೀರಕ್ಕಿಂತ ಬೇರೆಯಾದ ಆತ್ಮನ ಅಸ್ತಿತ್ವ ಸಿದ್ಧವಾಗುವುದು. ಶೈಶವದಿಂದ ವಾರ್ಧಕ್ಯದವರೆಗೆ ಶರೀರದಲ್ಲಿ ಬೇಕಾದಷ್ಟು ಬದಲಾವಣೆಗಳಾದರೂ ಪ್ರಾರಂಭದಿಂದ ಕೊನೆಯವರೆಗೂ ಅನುಸ್ಯೂತನಾದ ಒಬ್ಬ ಆತ್ಮನನ್ನು ನಾವು ಅನುಭವಿಸುತ್ತಿದ್ದೇವೆ. ದಿನದಿನವೂ ಬದಲಾಗುತ್ತಿರುವ ಈ ಶರೀರದಲ್ಲಿ ಅನುಭವದ ಏಕಸೂತ್ರತೆಯನ್ನು ನಾವು ಕಾಣುತ್ತಿದ್ದೇವೆ. ನಮ್ಮ ಈ ಅನುಭವದಿಂದ ನಾವು ಶರೀರದಿಂದ ವ್ಯತಿರಿಕ್ತನಾದ ಆತ್ಮನನ್ನು ಒಪ್ಪಲೇಬೇಕಾಗಿದೆ.

ನಾವು ಅನೇಕ ವ್ಯಕ್ತಿಗಳಲ್ಲಿ ಆನುವಂಶಿಕ ಹಾಗೂ ಪಾರಿವಾರಿಕ ಗುಣಗಳಿಂದ ಬೇರೆಯಾದ ಗುಣ, ಅಭಿರುಚಿಗಳನ್ನು ಕಾಣುತ್ತಿದ್ದೇವೆ. ತಂದೆ-ತಾಯಂದಿರಲ್ಲಿ ಅಥವಾ ಸುತ್ತಮುತ್ತಲಿನ ಪರಿವಾರದಲ್ಲಿ ಇಲ್ಲದ ಗುಣ, ಅಭಿರುಚಿಗಳು ಮಕ್ಕಳಲ್ಲಿ ಎಲ್ಲಿಂದ ಬರುತ್ತವೆ? ಹುಟ್ಟುವಾಗ ಮಕ್ಕಳ ಮನಸ್ಸು ಖಾಲಿ ಕಾಗದದಂತೆ ಶೂನ್ಯವಾಗಿ ಇರುವುದಿಲ್ಲ. ಹಿಂದಿನ ಜನ್ಮದ ನಾನಾ ಅನುಭವಗಳ ಕಹಿಸಿಹಿಗಳ ಪಡಿಯಚ್ಚು ಆ ಮನಸ್ಸಿನಲ್ಲಿ ಇದ್ದೇ ಇದೆ. ಇಂತಹ ಹಿಂದಿನ ಅನೇಕ ಸಂಸ್ಕಾರಗಳಿಂದ ಚಿತ್ರಿತವಾದ ಮನಸ್ಸನ್ನು ಹಿಡಿದುಕೊಂಡೇ ಮಕ್ಕಳು ಹೊರಜಗತ್ತಿಗೆ ಬರುವವು. ಆದ್ದರಿಂದ ವಿಚಿತ್ರ ಸ್ವಭಾವ, ನಡೆ ನುಡಿ, ಅಭಿರುಚಿಗಳನ್ನು ಅವುಗಳಲ್ಲಿ ಕಾಣುತ್ತೇವೆ. ಹೀಗೆ ಮಕ್ಕಳಲ್ಲಿ ಇರುವ ಸಂಸ್ಕಾರ ವೈಚಿತ್ರ್ಯಗಳಿಗೆ ಹಿನ್ನೆಲೆಯಾಗಿ ಜನ್ಮಾಂತರವನ್ನು ಒಪ್ಪಿದ ನಂತರ ದೇಹದಿಂದ ಬೇರೆಯಾದ ಆತ್ಮನ ಅಸ್ತಿತ್ವದಲ್ಲಿ ವಿವಾದಕ್ಕೆ ಅವಕಾಶವಿರುವುದಿಲ್ಲ.

ನಮಗೆ ಇರುವ ಜ್ಞಾನದ ಶಕ್ತಿಯಿಂದಲೂ ಶರೀರದಿಂದ ಭಿನ್ನವಾದ ಜೀವವನ್ನು ಒಪ್ಪಿಕೊಳ್ಳಬೇಕಾಗುವುದು. ಜಡದಲ್ಲಿ ಜ್ಞಾನದ ಶಕ್ತಿ ಇರಲು

ಸಾಧ್ಯವೇ ಇಲ್ಲ. ಜಡದ ಪರಿಣಾಮವಾದ ದೇಹದಲ್ಲಿ ಮಾತ್ರ ಜ್ಞಾನವು ಹೇಗೆ ಉದಿಸೀತು? ಅಕ್ಕಿಯಲ್ಲಿ ಹುಳವು ಹುಟ್ಟುವುದು. ಅಶುಚಿ ಸ್ಥಳಗಳಲ್ಲಿ ಕ್ರಿಮಿಗಳು ಹುಟ್ಟುತ್ತವೆ. ಯಾವ ಜೀವಾಣುಗಳ ಸಹಾಯವಿಲ್ಲದೆ ತನ್ನಷ್ಟಕ್ಕೇ ಪ್ರಕೃತಿಯಿಂದ ಇವು ಹುಟ್ಟುವವೆಂದು ವಿಜ್ಞಾನಿಗಳು ಒಪ್ಪುತ್ತಿಲ್ಲ; ಅಲ್ಲಿಯೂ ಆಯಾಯ ಪ್ರಾಣಿಗಳು ಮೊಟ್ಟೆಯಿಟ್ಟೇ ಜೀವ - ಜಂತುಗಳ ನಿರ್ಮಾಣವಾಗುತ್ತದೆಯೆಂದು ವಿಜ್ಞಾನಿಗಳ ಮತ. ಅಂತೂ ಜೀವಾಣುವಿನ ಸಹಾಯವಿಲ್ಲದೆ ಜ್ಞಾನವುಳ್ಳ ಜಂತುವು ಹುಟ್ಟಲಾರದು. ಜೀವಾಣುಗಳೇ ಒಂದು ಎರಡಾಗಿ ನಾಲ್ಕಾಗಿ ಅನಂತ ಜೀವಾಣುಗಳ ನಿರ್ಮಾಣವಾಗಿದೆಯೆಂದು ವಿಜ್ಞಾನಿಗಳ ಪ್ರತಿಪಾದನೆಯಿದೆ. ಹಾಗಿದ್ದರೆ ಪ್ರಥಮ ಜೀವಾಣುವಿನ ರಚನೆಯು ಸೃಷ್ಟಿಯ ಆದಿಯಲ್ಲಿ ಹೇಗೆ ನಡೆಯಿತು? ಇನ್ನೊಂದು ಜೀವಾಣುವಿನ ಸಹಾಯವಿಲ್ಲದೆ ಜೀವಾಣುವಿನ ನಿರ್ಮಿತಿಯಾಗಲಾರದಷ್ಟೆ? ಸೃಷ್ಟಿಯ ಆರಂಭದಲ್ಲಿ ಯಾವ ಜೀವಾಣುವೂ ಇಲ್ಲದೆ ಕೇವಲ ಜಡದ ಸಹಾಯದಿಂದ ಪ್ರಥಮ ಜೀವಾಣುವು ಹೇಗೆ ನಿರ್ಮಿತವಾಯಿತು? ಅಂದು ಕೇವಲ ಜಡದಿಂದಲೇ ಪ್ರಕೃತಿಯ ಸಹಜ ಚಮತ್ಕಾರದಿಂದ ಜೀವನ ಸೃಷ್ಟಿಯಾಗಿದ್ದರೆ, ಇಂದು ಎಲ್ಲಿಯೂ ಯಾಕೆ ಅಂತಹ ಘಟನೆ ನಡೆಯುತ್ತಿಲ್ಲ? ಇದು ವಿಜ್ಞಾನಿಗಳಿಗೆ ಬಿಡಿಸಲಾರದ ಒಗಟೆನಿಸಿದೆ. ಅನೇಕ ಜೀವಶಾಸ್ತ್ರಜ್ಞರಲ್ಲಿ ನಾವು ಈ ಪ್ರಶ್ನೆ ಕೇಳಿದಾಗ, ಪ್ರಥಮ ಜೀವನ ಉತ್ಪತ್ತಿಯ ಬಗ್ಗೆ ಸರಿಯಾದ ಪರಿಹಾರ ದೊರೆತಿಲ್ಲವೆಂದೇ ತಿಳಿಸಿರುವರು. ಆದುದರಿಂದ ಜಡದಿಂದ ಬೇರೆಯಾದ ಜ್ಞಾನವುಳ್ಳ ಜೀವವಸ್ತುವನ್ನು ನಾವು ಒಪ್ಪಿಯೇ ಈ ಸಮಸ್ಯೆಯನ್ನು ಪರಿಹರಿಸಬೇಕಾಗುವುದು. ನಮ್ಮ ಜೀವನವು ಈ ಶರೀರದ ಉತ್ಪತ್ತಿಯಿಂದ ಆರಂಭವಾಗಿರದೆ ಅನಾದಿಕಾಲದ ಇತಿಹಾಸವು ಈ ಆತ್ಮನಿಗೆ ಇದೆಯೆಂಬ ಮಾತನ್ನು ಒಪ್ಪಲೇಬೇಕಾಗುವುದು. ಅಂತೂ ದೇಹಾತಿರಿಕ್ತನಾದ ನಿತ್ಯನಾದ ಆತ್ಮನ ಅಸ್ತಿತ್ವವನ್ನು ಒಪ್ಪಿದ ನಂತರ ನಾವು ಯಾರದೇ ಮರಣದ ಬಗ್ಗೆ ಕಂಗೆಡಬೇಕಾಗಿಲ್ಲವೆಂದು ಸ್ಪಷ್ಟವಾಯಿತು. ಇವೆಲ್ಲ ವಿಚಾರಗಳನ್ನು ಪರಮಾತ್ಮನು-

**ದೇಹಿನೋऽಸ್ಮಿನ್ ಯಥಾ ದೇಹೇ**
**ಕೌಮಾರಂ ಯೌವನಂ ಜರಾ ।**

ತಥಾ ದೇಹಾಂತರಪ್ರಾಪ್ತಿ-
ರ್ಧೀರಸ್ತತ್ರ ನ ಮುಹ್ಯತಿ ॥

ಎಂಬ ಶ್ಲೋಕದಿಂದ ಸೂಚಿಸುವನು.

## ಅಭಿಮಾನವೇ ದುಃಖದ ಮೂಲ

ಅರ್ಜುನನು ಪುನಃ ಆಶಂಕಿಸುತ್ತಾನೆ; ''ನಶ್ವರವಾದ ಶರೀರದ ನಾಶಕ್ಕೆ ಶೋಕಿಸಬೇಕಿಲ್ಲವೆಂದೂ ಆತ್ಮನು ಶಾಶ್ವತನೆಂದೂ ಹೇಳಿದ ನಿನ್ನ ಮಾತನ್ನು ಒಪ್ಪಿದೆ. ನಮ್ಮ ಬಂಧುಗಳ ಹಾಗೂ ಮಿತ್ರರ ನಿಧನದ ಮೇಲೂ ಅವರ ಆತ್ಮವು ಉಳಿಯುವುದಾದರೂ ಅವರ ಸಂಪರ್ಕ ನಮಗೆ ತಪ್ಪುವುದಲ್ಲ! ಎಂದು ಶೋಕಿಸುತ್ತೇನೆ. ದೇಹದ ಮಾಧ್ಯಮದಿಂದಲೇ ಇನ್ನೊಂದು ಜೀವನ ಸಂಪರ್ಕ ವನ್ನು ನಾವು ಪಡೆಯುತ್ತಿರುವೆವು. ಈ ದೇಹವು ನಷ್ಟವಾಗಿ ಆತ್ಮ ಮತ್ತೆಲ್ಲಿಯೊ ಇರಬಹುದಾದರೂ ನಮಗೂ ಅವರಿಗೂ ಸಂಪರ್ಕ ಉಳಿಯುವುದಿಲ್ಲ. ಈವರೆಗೆ ಯಾರ ದರ್ಶನ ಸ್ಪರ್ಶನಗಳಿಂದ ನಾನು ಸಂತಸಪಡುತ್ತಿದ್ದೆನೊ ಅಂತಹ ನನ್ನ ಸ್ನೇಹ, ವಾತ್ಸಲ್ಯಪಾತ್ರರಾದ ವ್ಯಕ್ತಿಗಳನ್ನು ನಾನು ಕೊನೆಯವರೆಗೂ ಕಳೆದುಕೊಳ್ಳುತ್ತಿರುವೆನಲ್ಲ ಎಂಬುದೇ ನನ್ನ ವ್ಯಥೆಯಾಗಿದೆ.''

ಅರ್ಜುನನ ಈ ವ್ಯಥೆಯನ್ನು ವಿವೇಚಿಸುತ್ತ, ಶ್ರೀಕೃಷ್ಣನು ಸೂಕ್ತ ಪರಿಹಾರವನ್ನು ಅವನ ಮುಂದಿಡುವನು. ಜೀವನದಲ್ಲಿ ಇಂತಹ ದುಃಖಗಳು ಪದೇ ಪದೇ ಸಂಭವಿಸುವವು. ಇಂತಹ ದುಃಖಗಳನ್ನು ಹೇಗೆ ಎದುರಿಸಬೇಕೆನ್ನುವ ಬಗ್ಗೆ ತಕ್ಕ ಸೂತ್ರವನ್ನು ನಾವು ಕಂಡುಕೊಳ್ಳಬೇಕು, ದುಃಖದ ಮೂಲ ಯಾವುದು? ವಿಷಯಗಳಿಗೂ ಇಂದ್ರಿಯಗಳಿಗೂ ಆಗುವ ಸಂಬಂಧವೇ ದುಃಖದ ನಿದಾನವೆ? ಅಲ್ಲ. ನಿದ್ದೆಯಲ್ಲಿ ಇರುವಾಗಲೂ ವಿಷಯಗಳ ಸಂಬಂಧವು ನಡೆದೇ ಇರುತ್ತದೆ. ಶರೀರಕ್ಕೆ ನಿದ್ದೆಯಲ್ಲಿ ಯಾವುದೇ ಹಿತ- ಅಹಿತ ಸ್ಪರ್ಶಗಳು ಆದರೂ ಅದರಿಂದ ಆಗ ಯಾವ ಸುಖದುಃಖಗಳ ಅನುಭವವೂ ಜೀವನಿಗೆ ಆಗುವುದಿಲ್ಲ. ಎಚ್ಚರದಲ್ಲಿ ಮಾತ್ರ ಸುಖದುಃಖಗಳಿಗೆ ಅವಕಾಶವಿರುತ್ತದೆ. ಆದ್ದರಿಂದ ಸುಖ ದುಃಖಗಳಿಗೆ ಶರೀರೇಂದ್ರಿಯಗಳಿಗೂ ಭೌತಿಕ ಪದಾರ್ಥಗಳಿಗೂ ಇರುವ ಸಂಬಂಧವೇ ಕಾರಣವಾಗಿರದೆ ಇನ್ನೊಂದು ಮಹತ್ವದ ಕಾರಣವಿದೆಯೆಂಬುದನ್ನು ನಾವು

ಒಪ್ಪಬೇಕು. ಅದೇ ಶರೀರದ ಮೇಲಿನ ಅಭಿಮಾನ, ಶರೀರಕ್ಕೂ ತನಗೂ ಇರುವ ಭೇದವನ್ನು ಸುಸ್ಪಷ್ಟವಾಗಿ ಕಾಣದೆ ಅದನ್ನೇ ತಾನು, ತನ್ನದು ಎಂದು ಕಾಣುವ ಅಭಿಮಾನವೇ ಈ ಶೋಕಮೋಹಗಳ ಮೂಲಹೇತುವು. ನಿದ್ದೆಯಲ್ಲಿ ಆತ್ಮನು ಸ್ವಸ್ಥಿತಿಯಲ್ಲಿರುವಾಗ ಈ ಅಭಿಮಾನವಿರುವುದಿಲ್ಲ. ವಿಷಯಗಳ ಮಧ್ಯದಲ್ಲೇ ಇದ್ದರೂ ಆಗ ಶೋಕವೇ ಇರುವುದಿಲ್ಲ. ಎಚ್ಚರದಲ್ಲೂ ಇದೇ ಸ್ಥಿತಿಯನ್ನು ತಂದುಕೊಳ್ಳಲು ನಾವು ಪ್ರಯತ್ನಿಸಬೇಕು. ಅಭಿಮಾನವನ್ನು ತ್ಯಾಗ ಮಾಡಿ ನಾವು ನಮ್ಮ ವ್ಯವಹಾರಗಳನ್ನು ನಡೆಸಿದಲ್ಲಿ ಎಚ್ಚರದಲ್ಲೂ ಸಮಾಧಿಯ ಮನೋಭಾವವನ್ನು ಹೊಂದಬಲ್ಲೆವು. ತಾನು, ತನ್ನವರು ಎಂಬ ಅಭಿಮಾನದಿಂದಲೇ ದುಃಖಕ್ಕೆ ಕಾರಣವಿಲ್ಲದಿದ್ದರೂ ನಾವು ವೃಥಾ ಶೋಕಿಸುತ್ತೇವೆ. ನಮ್ಮ ಪರಿಚಿತರಲ್ಲದ ಯಾರದೋ ಮನೆಯು ಸುಟ್ಟಾಗ ನಾವು ಶೋಕಿಸುವುದಿಲ್ಲ. ಅದೇ ನಮ್ಮ ಮನೆಗೆ ಬೆಂಕಿ ಬಿದ್ದಾಗ ನಾವು ಬಹಳ ಆತುರತೆಯಿಂದ ಚಡಪಡಿಸುತ್ತೇವೆ. ಎರಡೂ ಮನೆಗಳೆ, ಬೆಂಕಿಯು ಸುಡುವ ಕ್ರಿಯೆಯನ್ನು ಎರಡೂ ಕಡೆಗಳಲ್ಲಿ ಏಕರೂಪವಾಗಿ ಮಾಡುತ್ತದೆ. ಆದರೆ ಆ ಮನೆಯು ಸುಡುವಾಗ ಆಗದಿದ್ದ ಶೋಕಾವೇಗವು ನಮ್ಮ ಮನೆಯ ವಿಷಯದಲ್ಲಿ ಮಾತ್ರ ಏಕೆ ಆಗುತ್ತದೆ? ಹೊಸದಾಗಿ ಮದುವೆಯಾದ ವಧುವಿಗೆ ಏನಾದರೂ ಕಾಹಿಲೆ, ತಲೆನೋವಾದಾಗ ಆಕೆಯ ಪ್ರಿಯತಮನು ಬಹಳ ಚಡಪಡಿಸುವನು. ಆದರೆ ಮದುವೆಯ ಮುಂಚೆ ಅದೇ ವ್ಯಕ್ತಿಗೆ ಯಾವ ಕಾಯಿಲೆ ಬಂದರೂ ಇವನು ಏನೂ ಆತುರನಾಗುವುದಿಲ್ಲ. ತನ್ನ ಮನೆ, ತನ್ನ ಮಡದಿ ಎಂಬ ಅಭಿಮಾನವೇ ನಮ್ಮ ವಿಹ್ವಲತೆಗೆ ಕಾರಣವೆಂಬುದು ಸ್ಪಷ್ಟವೇ ಇದೆ. ಈ ಅಭಿಮಾನವನ್ನು ಕಿತ್ತೊಗೆ. ಆಗ ನಿನ್ನ ಪ್ರೀತಿಯ ಬಂಧುಗಳ ವಿಯೋಗದ ಬಗ್ಗೆ ನೀನು ಮರುಗಲಾರೆ-

**ತಾನ್ ತಿತಿಕ್ಷಸ್ವ ಭಾರತ ।**

''ಅಭಿಮಾನತ್ಯಾಗದಿಂದ ಮೋಹಮೂಲಕವಾದ ಈ ಕ್ಷುದ್ರ ಶೋಕವನ್ನು ನೀನು ಎದುರಿಸಲೇಬೇಕು. ಅವುಗಳಿಗೆ ಸರ್ವಥಾ ತಲೆಬಾಗಬೇಡ'' - ಎಂದು ಅರ್ಜುನನ ದುಃಖದ ಮೂಲವನ್ನೇ ಬೇರುಸಹಿತವಾಗಿ ಪರಮಾತ್ಮನು ಕಿತ್ತೊಗೆಯುತ್ತಾನೆ.

ಪರಮಾತ್ಮನ ಈ ಮಾತು ಪರಾನುಕಂಪದಿಂದ ಜನಿತವಾದ ನಿಃಸ್ವಾರ್ಥ, ನಿರಪೇಕ್ಷ, ಸಾತ್ತ್ವಿಕ ಶೋಕಕ್ಕೆ ಅನ್ವಯಿಸುವುದಿಲ್ಲ. ಅಂತಹ ಸಾತ್ತ್ವಿಕ ಶೋಕವು ಆತ್ಮನನ್ನು ಕುಗ್ಗಿಸಲಾರದು. ಅದು ಆತ್ಮನ ವಿಕಾಸಕ್ಕೆ ಕಾರಣವಾಗುವುದು. ವ್ಯಾಮೋಹ ಮೂಲಕವಾದ, ಆತ್ಮನ ಅಪಕರ್ಷಕ್ಕೆ ಕಾರಣವಾದ, ಸಾಂಸಾರಿಕ ಕಾಮನೆಗಳನ್ನು ಕೆರಳಿಸುವ ದುಃಖದ ಬಗ್ಗೆಯೇ ಪರಮಾತ್ಮನು ಈ ಮಾತುಗಳನ್ನು ಆಡಿರುವನು. ಇದರಿಂದ, ಯಾರಿಗೆ ಏನೇ ಸಂಭವಿಸಿದರೂ ರಾಷ್ಟ್ರಕ್ಕೆ, ಸಮಾಜಕ್ಕೆ ಯಾವುದೇ ಭೀಕರ ಅನರ್ಥವಾದರೂ ಅನುಕಂಪದಿಂದ ಅದರ ಪರಿಹಾರಕ್ಕೆ ಪ್ರಯತ್ನಿಸಬಾರದೆಂದು ಯಾರೂ ಗ್ರಹಿಸಬಾರದು. ಸಂಕುಚಿತ ಸ್ವಾರ್ಥ ಭಾವನೆಯಿಂದ ಪ್ರೇರಿತವಾದ, ಪ್ರಗತಿವಿರೋಧಿಗಳಾದ ದುಃಖಗಳಿಗೇ ಅಭಿಮಾನವು ಮೂಲವಾಗಿದ್ದು, ಅವುಗಳನ್ನು ಧೀರಭಾವದಿಂದ ಎದುರಿಸಬೇಕು ಎಂಬುದೇ ಪರಮಾತ್ಮನ ಆಶಯವಾಗಿದೆ.

## ಜೀವನು ಈಶ್ವರನ ಪ್ರತಿಬಿಂಬ

ಈ ಹಿಂದೆ ಭಗವಂತನು ನಿರೂಪಿಸಿದ ಜೀವನ ನಿತ್ಯತೆಯ ಬಗ್ಗೆ ಒಂದು ಪ್ರಶ್ನೆ ಇಲ್ಲಿ ಉದ್ಭೂತವಾಗುವುದು. ಜೀವನು ಪರಮಾತ್ಮನ ಪ್ರತಿಬಿಂಬನು. ಕನ್ನಡಿಯಂತೆ ಶರೀರವು ಜೀವನಿಗೆ ಉಪಾಧಿಯಾಗಿರಬಹುದು. ಕನ್ನಡಿ ಒಡೆದಾಗ ಪ್ರತಿಬಿಂಬವು ಉಳಿಯುವುದಿಲ್ಲ. ಅದರಂತೆ ಶರೀರವು ನಾಶವಾದಾಗ ಪ್ರತಿಬಿಂಬನಾದ ಜೀವನು ಹೇಗೆ ಇರಬಲ್ಲ? ಶರೀರದ ಜೊತೆಗೆ ಜೀವನ ನಾಶವೂ ಅನಿವಾರ್ಯವಾಗಿರುವಾಗ ಜೀವನ ನಿತ್ಯತೆಯನ್ನು ಕೃಷ್ಣನು ಹೇಗೆ ಬೋಧಿಸುತ್ತಾನೆ? ಈ ಸಂಶಯವನ್ನು ಇಲ್ಲಿ ಪರಿಹರಿಸಲಾಗಿದೆ.

ಜೀವನ ಶರೀರರೂಪವಾದ ಬಾಹ್ಯ ಉಪಾಧಿಗೆ ನಾಶವಿದ್ದರೂ ಸ್ವರೂಪಭೂತವಾದ ತನ್ನ ಚಿದಾನಂದಮಯ ರೂಪವು ಶಾಶ್ವತವಾದ ಉಪಾಧಿಯಾಗಿ ಇದ್ದೇ ಇರುವುದು. ಹೊರಗಿನ ಉಪಾಧಿಯು ಕಳಚಿದರೂ ಆಂತರಂಗಿಕ ಚೈತನ್ಯರೂಪವಾದ ಸ್ವರೂಪೋಪಾಧಿಯು ಎಂದೆಂದಿಗೂ ಇರುವುದರಿಂದ ಆತ್ಮನು ನಿತ್ಯ, ಅವಿನಾಶಿ.

ಜೀವನು ಪರಮಾತ್ಮನ ಪ್ರತಿಬಿಂಬವೆಂದರೆ ಏನು? ಜೀವನಿಗೂ

ಪರಮಾತ್ಮನಿಗೂ ಇರುವ ಸಂಬಂಧವೇನು? ಎಂಬುದನ್ನು ನಾವು ಇಲ್ಲಿ ತಿಳಿದುಕೊಳ್ಳಬೇಕು. ನಮ್ಮ ನೆರಳು, ನಮ್ಮ ಭಾವಚಿತ್ರ ಪ್ರತಿಬಿಂಬವೆನಿಸುತ್ತವೆ. ಇವುಗಳಿಗೆ ನಮ್ಮಿಂದ ಬೇರೆ ಅಸ್ತಿತ್ತ್ವವೂ ಇದೆ. ಇವುಗಳು ನಮಗೆ ಸಮಾನವಾದ ಆಕಾರವನ್ನು ಪಡೆದಿವೆ; ಅದರಂತೆ ನಮ್ಮ ಅಧೀನಗಳೂ ಆಗಿವೆ. ನಾವು ಚಲಿಸಿದರೆ ಮಾತ್ರ ನಮ್ಮ ಪ್ರತಿಬಿಂಬವು ಚಲಿಸುವುದು. ನಮ್ಮಲ್ಲಿ ಯಾವುದೇ ಕೃತಿಯು ನಡೆಯದಿದ್ದರೆ ಪ್ರತಿಬಿಂಬದಲ್ಲೂ ಏನೂ ಆಗಲಾರದು. ಹೀಗೆ ಸರ್ವಾತ್ಮನಾ ನಮ್ಮ ಅಧೀನವೂ ನಮಗೆ ಸಮಾನವೂ ಆಗಿರುವ ವಸ್ತುವೇ ಪ್ರತಿಬಿಂಬವೆನಿಸುವುದು. ಅದರಂತೆ ಜೀವನು ಪರಮಾತ್ಮನ ಅಧೀನನೂ ಅವನಿಗೆ ಸದೃಶನೂ ಆಗಿರುವನು. ಪರಮಾತ್ಮನು ಇಲ್ಲದೆ, ಅವನ ವ್ಯಾಪಾರವಿಲ್ಲದೆ ಜೀವನ ಯಾವ ವ್ಯವಹಾರವೂ ನಡೆಯಲಾರದು. ಹಾಗೆಯೇ ಪರಮಾತ್ಮನಂತೆ ಜೀವನೂ ಚಿದಾನಂದಮಯನೇ ಆಗಿರುವನು. ಜೀವನಿಗೂ ಪರಮಾತ್ಮನಿಗೂ ಅನೇಕ ಅಂಶಗಳಲ್ಲಿ ಅಂತರವೂ ಇದೆ. ಕೆಲವು ಅಂಶಗಳಲ್ಲಿ ಸಮಾನತೆಯೂ ಇದೆ. ನಾವು ಬೆಳ್ಳಗಿದ್ದರೂ ನಮ್ಮ ನೆರಳು ಕಪ್ಪಾಗಿಯೇ ಇರುವುದಿಲ್ಲವೆ? ಹೀಗೆ ಜೀವನು, ತಾನು ನಶ್ವರವಾದ ಜಡವಸ್ತುವಲ್ಲ; ಈ ಪ್ರಾಕೃತಿಕವಾದ ಮನೋವಿಕಾರವೇ ತಾನಲ್ಲ; ನಿತ್ಯಚೈತನ್ಯರೂಪಿಯಾದ ಸದ್ಗುಣಮಯನಾದ ಪರಮಾತ್ಮನಿಗೆ ಸದೃಶನಾಗಿ ನಿತ್ಯನಾಗಿ ತಾನಿರುವೆನೆಂದು ಭಾವಿಸಿ ತನ್ನ ಆ ಕಲ್ಯಾಣವ್ಯಕ್ತಿತ್ವವನ್ನು ಕಂಡುಕೊಳ್ಳಲು, ಪ್ರಕಟಗೊಳಿಸಲು ಪ್ರಯತ್ನಿಸಬೇಕು. ತಾನು ದೇವನ ನೆರಳಿನಂತೆ ಎಂದೆಂದಿಗೂ ಅವನ ಅಧೀನನೇ ಇರುವೆನು; ಅಹಂಭಾವದಿಂದ, ಸ್ವಚ್ಛಂದ ರೀತಿಯಿಂದ ವರ್ತಿಸಬಾರದೆಂಬ ಎಚ್ಚರಿಕೆಯೂ ಜೊತೆಗೆ ಇರಬೇಕು. ಪ್ರತಿಬಿಂಬತ್ವದ ಕಲ್ಪನೆಯಲ್ಲಿ ಈ ವಿಚಾರಗಳ ಜೋಡಣೆ ಇದೆ. ಜಡದಿಂದ ಪ್ರತ್ಯೇಕವಾದ ತನ್ನ ದಿವ್ಯ ಭವ್ಯ ವ್ಯಕ್ತಿತ್ವದ ದರ್ಶನ, ಆದರೂ ಆ ಪರಾತ್ಪರ ವ್ಯಕ್ತಿಗೆ ತಲೆಬಾಗುವ ವಿನಯಪ್ರವೃತ್ತಿ ಈ ಎರಡೂ ಅಂಶಗಳು ಪ್ರತಿಬಿಂಬ ಭಾವನೆಯಲ್ಲಿ ಅಡಕವಾಗಿವೆ. ನಮ್ಮ ಭಾವಚಿತ್ರ ಅಥವಾ ಕನ್ನಡಿಯಲ್ಲಿ ನಮ್ಮ ಪ್ರತಿಕೃತಿಯು ಚೆನ್ನಾಗಿ ಕಾಣಲು ಕನ್ನಡಿಯನ್ನು ಎಷ್ಟು ಅಲಂಕರಿಸಿದರೂ ಆಗದು. ಬಿಂಬವಾದ ನಮ್ಮ ಶರೀರವನ್ನು, ನಮ್ಮ ಮುಖವನ್ನು ವೇಷಭೂಷಣಗಳಿಂದ ಪರಿಷ್ಕರಿಸಿದರೆ ನಮ್ಮ ಪ್ರತಿಬಿಂಬ ಅಥವಾ ಭಾವಚಿತ್ರ ಸುಂದರವಾಗಿ ಕಾಣಿಸುವುದು. ಅದರಂತೆ

ನಮ್ಮನ್ನು ಅಲಂಕರಿಸಲು, ನಮ್ಮ ಪ್ರಗತಿ-ವಿಕಾಸಗಳನ್ನು ಸಾಧಿಸಲು ನಮ್ಮನ್ನೇ ನಾವು ಪೂಜಿಸಿಕೊಳ್ಳುವುದಲ್ಲ. ಕನ್ನಡಿಯನ್ನು ಅಲಂಕರಿಸಿದಂತೆ ಆತ್ಮ ಪೂಜೆಯು ನಿರುಪಯುಕ್ತ. ನಮ್ಮ ಬಿಂಬರೂಪಿಯಾದ ಭಗವಂತನನ್ನು ಅನಂತ ಗುಣಗಳಿಂದ ಅಲಂಕರಿಸಿ ಪೂಜಿಸಿದಷ್ಟು ನಮ್ಮ ದಿವ್ಯವ್ಯಕ್ತಿತ್ವವು ಪ್ರಕಟವಾಗುವುದು. ನಮ್ಮನ್ನು ಸುಂದರಗೊಳಿಸಲು ಪರಮಾತ್ಮನ ಕಡೆಗೇ ನಾವು ಭಕ್ತಿಯ ದೃಷ್ಟಿಯನ್ನು ಹರಿಸಬೇಕು. ಈ ವಿಚಾರವನ್ನು ಭಾಗವತದಲ್ಲಿ ಹೀಗೆ ನಿರೂಪಿಸಲಾಗಿದೆ:

**ಯದ್ಯಜ್ಜನೋ ಭಗವತೇ ವಿದಧೀತ ಮಾನಂ**
**ತಚ್ಚಾತ್ಮನೇ ಪ್ರತಿಮುಖಸ್ಯ ಯಥಾ ಮುಖಶ್ರೀಃ ।**

ಅಂತೂ ಈವರೆಗೆ ದೇಹದ ಅನಿತ್ಯತೆ ಹಾಗೂ ಆತ್ಮನ ನಿತ್ಯತೆ, ಅಭಿಮಾನ ತ್ಯಾಗ ಇವುಗಳ ಉಪದೇಶದಿಂದ ಅರ್ಜುನನ ಅನೇಕ ಸಂಶಯಗಳಿಗೆ ಪರಿಹಾರಗಳು ದೊರೆತಿವೆ. ಭಗವಂತನು ಅದನ್ನೇ ಹೀಗೆ ಹೇಳಿದ್ದಾನೆ:

**ನಾಸತೋ ವಿದ್ಯತೇ ಭಾವೋ ನಾಭಾವೋ ವಿದ್ಯತೇ ಸತಃ ।**

''ಹುಟ್ಟುವ ಶರೀರಕ್ಕೆ ಶಾಶ್ವತ ಅಸ್ತಿತ್ವ ಇಲ್ಲ. ಹುಟ್ಟದಿರುವ ಆತ್ಮನಿಗೆ ನಿವೃತ್ತಿಯೂ ಇಲ್ಲ.''

## ಧರ್ಮ ಯುದ್ಧದಿಂದ ಹಾನಿ ಇಲ್ಲ

ಮೇಲಿನ ಶ್ಲೋಕದಲ್ಲಿ ಯುದ್ಧದಿಂದ ಪರಲೋಕದಲ್ಲಿ ಅನರ್ಥವಾಗುವುದೆಂಬ ಭಯವನ್ನೂ ಪರಿಹರಿಸಲಾಗಿದೆ.

''ದುಷ್ಟ ಕೃತ್ಯಗಳಿಂದ ಒಳ್ಳೆಯದೂ ಸಂಭವಿಸದು; ಒಳ್ಳೆಯ ಕೃತ್ಯದಿಂದ ಅನಿಷ್ಟವೂ ಘಟಿಸಲಾರದು'' ಎಂದೂ ಅದಕ್ಕೆ ಅರ್ಥವಾಗುವುದು.

ಇದು ದುರ್ಯೋಧನನ ವಿರುದ್ಧವಾಗಿ ಪಾಂಡವರು ನಡೆಸಿದ ದಾಯಾದಿಗಳ ಜಗಳವಲ್ಲ. ಅಧರ್ಮದ ವಿರುದ್ಧವಾಗಿ ನಡೆದ ಧರ್ಮದ ಹೋರಾಟವಾಗಿದೆ. ದುರ್ಯೋಧನನು ಮೊದಲಿನಿಂದಲೂ ಲೋಕಹಾನಿಕರವಾದ ಕುಟಿಲ ಹಾಗೂ ಸ್ವಾರ್ಥಪರ ನೀತಿಯಿಂದಲೇ ರಾಜ್ಯವನ್ನು ನಡೆಸುತ್ತಿದ್ದನು. ಅವನಿಗೆ ಕಲಿಂಗ ಅಥವಾ ಕಣಿಕ ಎಂಬ ಕುಟಿಲ ನೀತಿಯ ಗುರುವಿನಿಂದ

ಸ್ವಾರ್ಥಧರ್ಮದ ಉಪದೇಶವು ಬಾಲ್ಯದಿಂದಲೇ ದೊರೆತಿತ್ತು. ಆ ದಾರಿಯಲ್ಲೇ ಆತ ನಡೆದು ಲೋಕದ ವಾತಾವರಣವನ್ನೇ ಕೆಡಿಸಿದ್ದ. ಭೀಷ್ಮಾದಿಗಳಂತಹ ಮಹಾತ್ಮರಿಗೂ ಅವನ ಈ ಅನ್ಯಾಯವನ್ನು ಪ್ರತಿಭಟಿಸುವ ಶಕ್ತಿ ಕುಗ್ಗಿಹೋಗಿತ್ತು. ಶ್ರೀಮದಾಚಾರ್ಯರು ಹೇಳಿದಂತೆ -

> **ಛದ್ಮೈವ ಯತ್ರ ಪರಮಂ ನ ಸುರಾಶ್ಚ ಪೂಜ್ಯಾಃ**
> **ಸ್ವಾರ್ಥೇನ ವಂಚನಕೃತೇ ಜಗತೋಽಖಿಲಂ ಚ ।**
> **ಧರ್ಮಾದಿ ಕಾರ್ಯಮಪಿ ಯತ್ರ ಮಹೋಪಧಿಃ ಸ್ಯಾತ್**
> **ಶ್ರೇಷ್ಠಃ ಸ ಏವ .....॥**

-ತಾತ್ಪರ್ಯನಿರ್ಣಯ

"ಜೀವನದಲ್ಲಿ ಕಪಟಕ್ಕೆ ಪ್ರಧಾನ ಸ್ಥಾನವಿರಬೇಕು. ಸ್ವಾರ್ಥಕ್ಕಾಗಿ ಏನು ಬೇಕಾದರೂ ಮಾಡಬೇಕು. ದೇವತೆಗಳ ಪೂಜೆಗೆ ಸ್ಥಾನವಿಲ್ಲ. ಜಗತ್ತಿನ ವಂಚನೆಗಾಗಿ, ಸ್ವಾರ್ಥ ಸಾಧನೆಗಾಗಿ ಮಾತ್ರ ಧರ್ಮದ ನಾಟಕವನ್ನು ಆಡಬೇಕು." ಈ ಮಾದರಿಯ ಭೋಗಪರವಾದ ನಾಸ್ತಿಕ ನೀತಿಯ ಉಪದೇಶವನ್ನು ಪಡೆದು ಆ ಕುಟಿಲ ತಂತ್ರಗಳನ್ನೆಲ್ಲ ತಿಳಿದು ಆ ಮಾದರಿಯಲ್ಲೇ ನಡೆಯುವ ದುರ್ಯೋಧನನ ಪ್ರಬಲವಾದ ದುಷ್ಟಶಕ್ತಿಯಿಂದ ಸಂಭವಿಸಿದ ಲೋಕದ ವಿಷವಾತಾವರಣವನ್ನು ಸರಿಪಡಿಸುವುದೇ ಈ ಮಹಾಭಾರತ ಯುದ್ಧದ ಮುಖ್ಯ ಉದ್ದೇಶವಾಗಿತ್ತು. ಹೀಗೆ ಸ್ವಾರ್ಥರಹಿತವಾದ ವಿಶ್ವ ಕಲ್ಯಾಣಕಾರಕವಾದ ಈ ಯುದ್ಧದಿಂದ ಶ್ರೇಯಸ್ಸು ದೊರಕಬಹುದಲ್ಲದೆ ನರಕದ ಸಂಭವವೆಲ್ಲಿ?

> **ಧರ್ಮ್ಯಾದ್ಧಿ ಯುದ್ಧಾಚ್ಛ್ರೇಯೋನ್ಯತ್**
> **ಕ್ಷತ್ರಿಯಸ್ಯ ನ ವಿದ್ಯತೇ ।**

"ಧರ್ಮಸಾಧನವಾದ ಯುದ್ಧಕ್ಕಿಂತ ಮಿಗಿಲಾದ ಶ್ರೇಯೋಮಾರ್ಗವು ಕ್ಷತ್ರಿಯನಿಗಿಲ್ಲ."

ಬರಿಯ ಯುದ್ಧದಿಂದ ಕ್ಷತ್ರಿಯನಿಗೆ ಶ್ರೇಯಸ್ಸಾಗುವುದೆಂದು ಇಲ್ಲಿ ಕೃಷ್ಣನ ಅಭಿಪ್ರಾಯವಲ್ಲ. ಯುದ್ಧವು ಧರ್ಮಕ್ಕಾಗಲಿ ಮಾತ್ರ

ಹಿಂದಿನ ಕಾಲದಲ್ಲಿ ಕ್ಷತ್ರಿಯರಲ್ಲಿ ಬರೇ ಯುದ್ಧ ನೀತಿಗೆ ಪ್ರೋತ್ಸಾಹವನ್ನು ನೀಡಲಾಗುತ್ತಿತ್ತು ಎಂದು ಕೆಲವರು ಆಕ್ಷೇಪಿಸುವುದುಂಟು. ಧ್ಯೇಯರಹಿತವಾದ ಬರಿ ಸಾಮ್ರಾಜ್ಯವಿಸ್ತರಣೆಯ ಸಮರ ಕಾರ್ಯವನ್ನು ಶ್ರೀಕೃಷ್ಣನು ಸಮರ್ಥಿಸಲಿಲ್ಲ. ವೃಥಾ ಸ್ವಾರ್ಥ ಸಾಧನೆಗಾಗಿ ಭಯಾನಕ ಸಮರವನ್ನು ಆರಂಭಿಸುವವನನ್ನು ಲೋಕಕಂಟಕ, ಲೋಕಕ್ಷಯಕಾರಕ ಎಂದೇ ಕರೆಯಲಾಗುತ್ತಿತ್ತು. ಲೋಕಹಿತಕಾರಿಯಾದ ಒಂದು ವಿಶಿಷ್ಟ ತತ್ತ್ವವನ್ನು ಸಾಧಿಸುವುದಕ್ಕಾಗಿ ನಡೆಸುವ ಅನಿವಾರ್ಯವಾದ ಸಮರವೇ ಧರ್ಮಯುದ್ಧ. ಅದರಲ್ಲಿ ಭಾಗವಹಿಸಿ ವೀರತನದಿಂದ ಹೋರಾಡಿ ಪ್ರಾಣವನ್ನು ಅರ್ಪಿಸುವವರನ್ನು ವಿಶೇಷವಾಗಿ ಪ್ರಶಂಸಿಸಲಾಗಿದೆ. ಅವರೇ ವೀರಸ್ವರ್ಗದ ಅಧಿಕಾರಿಗಳು. ಇಂತಹ ಪವಿತ್ರ ಧ್ಯೇಯವಿಲ್ಲದ, ಸಾಮ್ರಾಜ್ಯಶಾಹಿ ಮನೋವೃತ್ತಿಯ ಆಕ್ರಮಣ ಭಾವನೆಯ ಸ್ವಾರ್ಥಿ ಸಮರವನ್ನು ನಮ್ಮ ಶಾಸ್ತ್ರಗಳು ಪ್ರೋತ್ಸಾಹಿಸಿಲ್ಲ. ಈಗ ಪಾಂಡವರು ನಡೆಸಲಿದ್ದ ಯುದ್ಧವು ಇಂತಹ ಧಾರ್ಮಿಕ ಹೋರಾಟವಾಗಿತ್ತು. ಆದ್ದರಿಂದ ವಿಶ್ವದಲ್ಲಿ ಧರ್ಮಸಂಸ್ಥಾಪನೆಗೆ ಅತ್ಯಂತ ಸಹಾಯಕವಾದ ಇಂತಹ ಹೋರಾಟದ ಸಂದರ್ಭವು ಜೀವನದಲ್ಲಿ ಸಿಗುವುದು ಬಹಳ ಕಡಿಮೆ. ಅರ್ಜುನನಿಗೆ ಈ ಅಪೂರ್ವ ಸಂಧಿಯು ದೊರಕಿರುವುದು ಸ್ವರ್ಗದ ದ್ವಾರವನ್ನು ತೆರೆದಂತೆ ಆಗಿದೆ ಎಂದು ಶ್ರೀಕೃಷ್ಣನು ಅಪ್ಪಣೆ ಕೊಡಿಸುತ್ತಾನೆ.

## ಆಸಕ್ತಿಯೇ ಪಾಪದ ಮೂಲ

ಶ್ರೀಕೃಷ್ಣನು ಈವರೆಗೆ ಅಭಿಮಾನತ್ಯಾಗದ ಉಪದೇಶವನ್ನು ನೀಡಿ ವ್ಯಾಮೋಹಜನಿತವಾದ ದುಃಖದ ಭಾರವನ್ನು ಕಡಿಮೆ ಮಾಡಿದರೂ ಅರ್ಜುನನಿಗೆ ಪಾಪದ ಭೀತಿಯು ಇನ್ನೂ ಪೂರ್ಣವಾಗಿ ನಿರಸನವಾಗಿಲ್ಲ. ಬಂಧುಜನರ, ಗುರುಜನರ ಹಿಂಸೆಯಿಂದ ಪಾಪವು ಅಂಟಬಹುದೆಂಬ ಸಂಶಯವು ಅವನಲ್ಲಿ ಇನ್ನೂ ಉಳಿದಿದೆ. ಇದು ಧರ್ಮಯುದ್ಧವಾಗಿದ್ದು ಪುಣ್ಯಕರವಾದರೂ ಇದರ ಜೊತೆಗೆ ಅನೇಕ ಪಾಪಕಾರ್ಯಗಳೂ ಸಂಭವಿಸುತ್ತವೆ. ಪರಲೋಕದಲ್ಲಿ ಈ ಅಧರ್ಮಕೃತ್ಯಗಳಿಂದ ದುಃಖವನ್ನು

ಅನುಭವಿಸಬೇಕಾಗುವುದು. ಹೀಗೆ ಸುಖದುಃಖಗಳೆರಡಕ್ಕೂ ಕಾರಣವಾದ ಧರ್ಮಾಧರ್ಮಮಿಶ್ರವಾದ ಈ ಯುದ್ಧಕ್ಕಿಂತ ಕೇವಲ ಧರ್ಮಕಾರಕವಾದ, ಪಾಪದ ಸೋಂಕೇ ಇಲ್ಲದ ಸಂನ್ಯಾಸವೇ ಶ್ರೇಷ್ಠವಲ್ಲವೆ? ಇವೆಲ್ಲ ಕರ್ಮಗಳನ್ನು ತ್ಯಾಗ ಮಾಡಿ ಅರಣ್ಯಕ್ಕೆ ಹೋಗಿ ಮುನಿ ವೃತ್ತಿಯನ್ನು ಯಾಕೆ ಸ್ವೀಕರಿಸಬಾರದೆಂಬ ಅರ್ಜುನನ ಸಂಶಯವು ಇನ್ನೂ ಉಳಿದಿದೆ.

ಇದಕ್ಕಾಗಿ ಇನ್ನು ಮುಂದೆ ಪರಮಾತ್ಮನು ನಿಷ್ಕಾಮ ಕರ್ಮ ಅಥವಾ ಭಾಗವತ ಧರ್ಮದ ಸಂದೇಶವನ್ನು ನೀಡುತ್ತಾನೆ. ಹೇಗೆ ಅಭಿಮಾನವೇ ದುಃಖದ ಮೂಲವಾಗಿದ್ದು ಅಭಿಮಾನವನ್ನು ತ್ಯಾಗ ಮಾಡುವುದರಿಂದ ದುಃಖದ ಸಮೂಲ ಉಚ್ಚಾಟನೆಯಾಗುವುದೋ ಅದರಂತೆ ಪಾಪದ ಮೂಲ ಯಾವುದೆಂಬುದನ್ನು ನಾವು ಪರಿಶೀಲಿಸಿ ಅದನ್ನು ಕಿತ್ತೊಗೆಯಬೇಕು. ಬರಿ ಹಿಂಸೆಯಿಂದ ಪಾಪವು ಸಂಭವಿಸುವುದೇ ಇಲ್ಲ. ನ್ಯಾಯಾಧೀಶನು ಸಾವಿರಾರು ಜನರಿಗೆ ಮರಣದಂಡನೆ ಹಾಗೂ ಇತರ ಕಠಿಣ ಶಿಕ್ಷೆಗಳನ್ನು ವಿಧಿಸುತ್ತಾನೆ. ಅಧಿಕಾರಿಗಳು ಆ ಶಿಕ್ಷೆಯನ್ನು ಕಾರ್ಯಗತಗೊಳಿಸುವರು. ಇದರಿಂದ ಅವರೆಲ್ಲ ಪಾಪಿಗಳೆನಿಸುವರೆ? ಆಸಕ್ತಿಯೇ ಪಾಪದ ಮೂಲ. ನಮ್ಮ ಸ್ವಾರ್ಥಕ್ಕಾಗಿ ರಾಗದ್ವೇಷಗಳಿಂದ ನಾವು ಇನ್ನೊಬ್ಬರನ್ನು ಹಿಂಸಿಸುವೆವು. ಅದರಿಂದ ನಮಗೆ ಪಾಪವು ಸಂಭವಿಸುವುದು. ಇಂತಹ ರಾಗದ್ವೇಷಗಳಿಲ್ಲದೆ ಶಾಸ್ತ್ರವಿಹಿತವಾದ ಲೋಕಹಿತಕಾರಿಯಾದ ಕರ್ತವ್ಯವೆಂಬ ಭಾವನೆಯಿಂದ ಅನಾಸಕ್ತಿಯಿಂದ ಕಾರ್ಯವನ್ನು ಮಾಡುವಾಗ ಹಿಂಸೆಯ ಘಟನೆಗಳು ನಡೆದರೂ ಪಾಪವು ಅಂಟುವುದಿಲ್ಲ. ಇಡೀ ಜಗತ್ತನ್ನೇ ಸಂಹರಿಸುವ ಭಗವಂತನಿಗೆ ದೋಷವಿದೆಯೆ? ಆದ್ದರಿಂದ ಆಸಕ್ತಿಯನ್ನು ಬಿಟ್ಟು ಕರ್ತವ್ಯ ಧರ್ಮವನ್ನು ನಿರ್ವಹಿಸಬೇಕು-ವೇದನಾ ನಿರೋಧಕ ಇಂಜಕ್ಷನ್ ನೀಡಿ ಶಸ್ತ್ರಕ್ರಿಯೆಯನ್ನು ಮಾಡುವಂತೆ. ಆಗ ಯಾವ ಮನೋವೇದನೆಗೂ ಅವಕಾಶ ಇರುವುದಿಲ್ಲವೆಂದು ನಿಷ್ಕಾಮ ಕರ್ಮದ ದಿವ್ಯಸಂದೇಶವನ್ನು ಶ್ರೀಕೃಷ್ಣನು ಉಪದೇಶಿಸುವನು.

ಹೀಗೆ ಕಾಮನೆಯಿಲ್ಲದೆ, ಭಗವತ್ ಪ್ರೀತಿಯಾಗಲೆಂಬ ಭಾವನೆಯಿಂದ ಮಾಡುವ ಸತ್‌ಕರ್ಮವನ್ನು ಸಂಕಲ್ಪಿಸಿದರೂ ಪ್ರಾರಂಭಮಾಡಿ ಅನಿವಾರ್ಯ ಕಾರಣದಿಂದ ಮಧ್ಯದಲ್ಲಿ ಕೈಬಿಟ್ಟರೂ ಅದರಿಂದ ಆವರೆಗೆ ಮಾಡಿದ್ದಕ್ಕೆ

ಹಾನಿಯಿಲ್ಲ. ಭಗವಂತ ಹೇಳುತ್ತಾನೆ:

**ನೇಹಾಭಿಕ್ರಮನಾಶೋಽಸ್ತಿ**
**ಪ್ರತ್ಯವಾಯೋ ನ ವಿದ್ಯತೇ ।**
**ಸ್ವಲ್ಪಮಪ್ಯಸ್ಯ ಧರ್ಮಸ್ಯ**
**ತ್ರಾಯತೇ ಮಹತೋ ಭಯಾತ್ ॥**

ನಾವು ಕೃಷಿ, ವ್ಯಾಪಾರ ಮೊದಲಾದವುಗಳನ್ನು ಸಂಕಲ್ಪಿಸಿ ಆರಂಭ ಮಾಡಿ ಅರ್ಧದಲ್ಲೇ ತೊರೆದರೆ ವಿಶೇಷ ನಷ್ಟವಾಗುವುದು. ಅದರಿಂದ ಮತ್ತೆ ಮೇಲೆ ಏರುವುದೇ ದುಸ್ತರವಾಗುವುದು. ನಾವು ಔಷಧವನ್ನು ಸೇವಿಸುವಾಗ ಸ್ವಲ್ಪ ಹೆಚ್ಚು ಕಡಿಮೆ ಆದರೆ ಅದರಿಂದ ಬಹಳ ಅನರ್ಥವಾಗಬಹುದು. ಆದರೆ ಮುಂದೆ ವಿವರಿಸಲಿರುವ ಭಾಗವತಧರ್ಮ ಅಥವಾ ಅನಾಸಕ್ತಿ ಯೋಗದಲ್ಲಿ ಅಂತಹ ಭಯಕ್ಕೂ ಅವಸರವಿಲ್ಲ. ನಾವು ಶುದ್ಧ ಭಾವನೆಯಿಂದ ಮಾಡುವಾಗ ಸ್ವಲ್ಪ ಹೆಚ್ಚು ಕಡಿಮೆ ಆದರೂ ಅದರಿಂದ ಪ್ರತ್ಯವಾಯವಿಲ್ಲ; ಅಪಾಯವಿಲ್ಲ. ಶ್ರೀಮದಾಚಾರ್ಯರು ಹೇಳುವಂತೆ -

**ಪ್ರಾರಂಭಮಾತ್ರಮಿಚ್ಛಾ ವಾ**
**ವಿಷ್ಣುಧರ್ಮೇ ನ ನಿಷ್ಫಲಾ ।**

-ಗೀತಾತಾತ್ಪರ್ಯ

ಭಗವಂತನು ವಿವರಿಸುವ ಈ ಪವಿತ್ರ ಭಾಗವತಧರ್ಮ ಎಷ್ಟು ಸರಳ ನಿರಪಾಯ ರಾಜಮಾರ್ಗವಾಗಿದೆ! ಇದನ್ನು ಸ್ವಲ್ಪವಾಗಿ ಯಥಾಶಕ್ತಿ ಆಚರಿಸಿದರೂ ಮಹಾಫಲವನ್ನು ಪಡೆಯಬಹುದು. ಎಷ್ಟು ಕರ್ತವ್ಯ ಮಾಡಿದ್ದೇವೆ ಎಂಬುದಕ್ಕಿಂತ ಹೇಗೆ ಮಾಡಿದ್ದೇವೆ ಎಂಬುದೇ ಮುಖ್ಯ. ಸುದಾಮನು ನೀಡಿದ ಹಿಡಿ ಅವಲಕ್ಕಿಗೆ ಭಗವಂತನು ಎಂತಹ ಪ್ರತಿಫಲವನ್ನು ನೀಡಿರುವನು ! ಆ ಹಿಡಿ ಅವಲಕ್ಕಿಯ ಹಿಂದೆ ಅಂತಹ ಪವಿತ್ರ ಭಾವವಿತ್ತು. ಶುದ್ಧ ಭಾವದಿಂದ ಮಾಡುವ ಅತ್ಯಲ್ಪ ಕರ್ಮವೂ ಪರಮ ಶ್ರೇಯಸ್ಸಿಗೆ ಕಾರಣವೆನಿಸುವುದು. ಕಾಗದದ ನೂರಾರು ಹಾಳೆಗಳಿಗಿಂತಲೂ ರಾಷ್ಟ್ರ ಮುದ್ರೆ ಇರುವ ಒಂದು ನೋಟಿಗೆ ಎಷ್ಟು ಬೆಲೆ ಇದೆ! ಭಕ್ತಿಯ ದೇವಮುದ್ರೆ ಇರುವ ಅಲ್ಪ ಕರ್ಮವೂ ನೂರಾರು

ಕರ್ಮಗಳಿಗಿಂತ ಮಿಗಿಲು ಎಂದು ಶ್ರೀಕೃಷ್ಣನು ನಿಷ್ಕಾಮಕರ್ಮದ ಮಹತ್ತ್ವವನ್ನು ವರ್ಣಿಸಿ ಅದನ್ನು ಮುಂದಿನ ಭಾಗದಲ್ಲಿ ವಿವರಿಸುವನು.

## ಸತ್ಯದ ದಾರಿ ಒಂದೇ

ಕರ್ಮದ ವಿಚಾರದಲ್ಲಿ ಅನೇಕರು ಭಿನ್ನ ಭಿನ್ನ ಅಭಿಪ್ರಾಯಗಳನ್ನು ವ್ಯಕ್ತಪಡಿಸಿದ್ದಾರೆ. ಕೆಲವರು ಕರ್ಮವೇ ಮಾಯಿಕವಾಗಿದ್ದು ಅಜ್ಞಾನಿಗೆ ಮಾತ್ರ ಕರ್ಮಾಚರಣೆಯು ಸಂಬಂಧಿಸಿದ್ದು ಎಂದು ಪ್ರತಿಪಾದಿಸಿದರೆ, ಮೀಮಾಂಸಕರು ಸ್ವರ್ಗಾದಿ ಫಲಗಳ ಅಪೇಕ್ಷೆಯಿಂದ ಯಜ್ಞ ಯಾಗಾದಿ ಕರ್ಮಗಳ ಅನುಷ್ಠಾನ ಮಾಡಿ ಸ್ವರ್ಗಭೋಗವನ್ನು ಪಡೆಯುವುದೇ ಜೀವನದ ಪರಮ ಪುರುಷಾರ್ಥವೆನ್ನುವರು. ಶ್ರೀಕೃಷ್ಣನು ನಿಷ್ಕಾಮ ಭಾವನೆಯ ಭಗವತ್ ಸೇವಾರೂಪ ಕರ್ಮಗಳನ್ನು ಜ್ಞಾನಿಗಳು, ಅಜ್ಞಾನಿಗಳು ಎಲ್ಲರೂ ಆಚರಿಸ ಬೇಕೆಂದು ಬೋಧಿಸುವನು. ಈ ಎಲ್ಲ ಭಿನ್ನ ಭಿನ್ನ ವಿಚಾರಗಳಿಂದ ಸಾಧಕರ ಮನಸ್ಸಿನಲ್ಲಿ ಏಳಬಹುದಾದ ಗೊಂದಲವನ್ನು ಶ್ರೀಕೃಷ್ಣನು ಪರಿಹರಿಸುತ್ತಾನೆ:

**ವ್ಯವಸಾಯಾತ್ಮಿಕಾ ಬುದ್ಧಿ-**<br>**ರೇಕೇಹ ಕುರುನಂದನ ।**

''ಈ ಅನೇಕ ಮಾರ್ಗಗಳಲ್ಲಿ ಪ್ರಮಾಣಗಳಿಂದ ಪರಿಶೀಲಿಸಿ ನಿರ್ಣೀತವಾದ ಮಾರ್ಗ ಒಂದೇ ಇದೆ.'' ತಾನು ಉಪದೇಶಿಸಿದ ನಿಷ್ಕಾಮ ಕರ್ಮವು ಅಂಥ ನಿರ್ಣೀತವಾದ ಸತ್ಯಪಥವಾಗಿದೆ. ಯಾವ ಮಾರ್ಗವಾದರೇನು? ಎಲ್ಲವೂ ಒಂದೇ ಗುರಿಗೆ ನಮ್ಮನ್ನು ಒಯ್ಯುವುವೆಂದು ಭಾವಿಸಿಕೊಂಡು ಯಾವ ವಿಮರ್ಶೆಯೂ ಇಲ್ಲದೆ ತಮಗೆ ತೋರಿದ ದಾರಿಯಲ್ಲಿ ಕೆಲವರು ಸಾಗುವರು. ಇದರಿಂದ ಸತ್ಯವನ್ನು ಬಹಳ ಲಘುವಾಗಿ ಭಾವಿಸಿಕೊಂಡಂತೆ ಆಗುವುದು. ಒಂದೇ ವಿಷಯದ ಬಗ್ಗೆ ಪರಸ್ಪರ ವಿರುದ್ಧವಾದ ಎರಡೂ ಮಾತುಗಳು ಸತ್ಯವೆನಿಸಲಾರವು. ಅವೆರಡರಿಂದಲೂ ನಮಗೆ ಒಂದೇ ಫಲವು ದೊರೆಯುವುದಾದರೆ ಅಸತ್ಯಮಾರ್ಗದಿಂದಲೂ ಮುಕ್ತಿಯು ಲಭಿಸುವುದೆಂದು ಹೇಳಿದಂತಾಗುವುದು. ಸತ್ಯ ಅಸತ್ಯ ಇವೆರಡನ್ನೂ ಒಂದೇ ಮಟ್ಟದಲ್ಲಿ ನಾವು ನೋಡುವುದರಿಂದ ಸತ್ಯದ ಪವಿತ್ರತೆ ಹಾಗೂ ಮಹತ್ತ್ವವನ್ನು ನಾವು

ಅಲ್ಲಗಳೆಯುತ್ತಿದ್ದೇವೆ. ಇದರಿಂದ ಲೋಕದಲ್ಲಿ ಸತ್ಯಾನ್ವೇಷಣದೃಷ್ಟಿಯೇ ಕುಂಠಿತವಾಗುವುದು.

ಶ್ರೀ ವಿನೋಬಾ ಮತ್ತು ನಾವು ಸಂಧಿಸಿದಾಗ ಈ ವಿಷಯದಲ್ಲಿ ವಿಚಾರವಿನಿಮಯ ನಡೆಯಿತು. ''ಭಿನ್ನ ಭಿನ್ನ ಆಹಾರಗಳೂ ಅವರವರ ಅಭಿರುಚಿಗೆ ಅನುಗುಣವಾಗಿ ತೃಪ್ತಿಯನ್ನು ನೀಡುವವು. ಕೆಲವರಿಗೆ ಖಾರ ಪ್ರಿಯವೆನಿಸುವುದು; ಕೆಲವರಿಗೆ ಸಿಹಿ ಅಪೇಕ್ಷಿತವಿರುವುದು. ಆದರೂ ಎಲ್ಲರಿಗೂ ಯಾವ ಆಹಾರ ತೆಗೆದುಕೊಂಡರೂ ತೃಪ್ತಿ ಆಗಿಯೇ ತೀರುವುದು. ಮತಗಳ ವಿಚಾರವೂ ಅಷ್ಟೇ. ಅವರವರ ಅಭಿರುಚಿಗೆ ತಕ್ಕಂತೆ ಯಾವ ಮತವನ್ನು ಅನುಸರಿಸಿದರೂ ಶ್ರೇಯಸ್ಸು ಆಗುವುದು'' ಎಂದು ವಿನೋಬಾ ಅವರು ಅಭಿಪ್ರಾಯಪಟ್ಟರು. ಈ ವಿಷಯದಲ್ಲಿ ನಮ್ಮ ಅಭಿಪ್ರಾಯವನ್ನು ವಿವರಿಸುತ್ತ ನಾವು, ''ಭಿನ್ನ ಭಿನ್ನ ಆಹಾರಗಳು ರುಚಿಕರಗಳಾದರೂ ಎಲ್ಲ ಆಹಾರಗಳಿಂದಲೂ ಶರೀರದ ಮೇಲೆ ಒಂದೇ ರೀತಿಯ ಪರಿಣಾಮಗಳಾಗುವುದಿಲ್ಲ. ಆಹಾರದ ಗುಣಧರ್ಮಗಳಿಗನುಸಾರವಾಗಿ ಶರೀರದ ಮೇಲೆ ವಿಭಿನ್ನ ಪ್ರತಿಕ್ರಿಯೆ ಆಗಿಯೇ ತೀರುವುದು. ತಾತ್ತ್ವಿಕ ವಿಚಾರದಲ್ಲೂ ಇದೇ ಮಾತು ಬರುವುದು. ಪರಸ್ಪರ ವಿರೋಧಿ ವಿಚಾರಗಳು ಎಂದಿಗೂ ಸತ್ಯವೆನಿಸಲಾರವು. ಸತ್ಯ ಹಾಗೂ ಅಸತ್ಯ ವಿಚಾರಗಳಿಂದ ಆತ್ಮನ ಮೇಲೆ ಒಂದೇ ವಿಧವಾದ ಪರಿಣಾಮ ಹೇಗೆ ಆಗಬಹುದು? ಅವು ಅವರವರ ಮನೋವೃತ್ತಿಗನುಗುಣವಾಗಿ ಮಾನಸಿಕ ಸಮಾಧಾನವನ್ನು ನೀಡಿದರೂ ಎಲ್ಲ ವಿಚಾರಗಳಿಂದ ಏಕವಿಧ ಪರಿಣಾಮವು ಆತ್ಮನ ಮೇಲೆ ಆಗಲಾರದು'' ಎಂದೆವು. ನಮ್ಮ ಈ ಮಾತನ್ನು ವಿನೋಬಾರವರು ಒಪ್ಪಿಕೊಂಡರು. ಮತಗಳಲ್ಲಿ ವಿಚಾರ ಭೇದಗಳಿದ್ದರೂ ಸಮಾನ ಅಂಶಗಳೂ ಬಹಳ ಇವೆ. ಆ ಅಂಶಗಳಲ್ಲಿ ಪರಸ್ಪರ ಸಹಕಾರವೃತ್ತಿಯನ್ನೂ ವಿಚಾರಭೇದವಿದ್ದರೂ ಸ್ನೇಹಭಾವವನ್ನೂ ಬೆಳೆಸಿಕೊಳ್ಳಬೇಕೆಂಬ ನಿರ್ಣಯಕ್ಕೆ ಕೊನೆಗೆ ನಾವು ಬಂದೆವು.

''ಸತ್ಯಕ್ಕೆ ಅನೇಕ ಮುಖಗಳಿದ್ದು ಒಂದೊಂದು ಅಂಶವನ್ನು ಒಬ್ಬೊಬ್ಬರು ಪ್ರತಿಪಾದಿಸಿರಬಹುದು. ಸಾಮಾನ್ಯವಾಗಿ ವಿರೋಧ ಕಂಡರೂ ಅವೆಲ್ಲವೂ

ಒಂದೇ ಸತ್ಯದ ಅನೇಕ ಮುಖಗಳಾಗಿರಬಹುದು. ಮಕ್ಕಳಿಗೆ, ದೊಡ್ಡವರಿಗೆ, ರೋಗಿಗಳಿಗೆ, ನೀರೋಗಿಗಳಿಗೆ ಅವರವರ ಪ್ರಕೃತಿಗನುಸಾರವಾಗಿ ಆಹಾರ ಭೇದವೇ ಶರೀರಕ್ಕೆ ಹಿತಕರವಿರುವಂತೆ, ಈ ಸತ್ಯದ ಭಿನ್ನ ರೂಪಗಳೇ ಆಗಿರುವ ಇವೆಲ್ಲ ಮತಗಳು ವ್ಯಕ್ತಿ ಭೇದವನ್ನನುಸರಿಸಿ ಶ್ರೇಯಸ್ಸನ್ನು ನೀಡಬಲ್ಲವು'' ಎಂದೂ ಕೆಲವರ ವಾದವಿದೆ. ಆದರೆ ಆಯಾಯ ಮತಪ್ರವರ್ತಕರೆಲ್ಲರೂ ತಮ್ಮ ವಿಚಾರವೇ ಅಂತಿಮ ಸತ್ಯವೆಂದೂ ಎಲ್ಲರೂ ಇದನ್ನು ಅನುಸರಿಸಿಯೇ ಮುಕ್ತಿಯನ್ನು ಪಡೆಯಬಲ್ಲರೆಂದೂ ಉಳಿದ ವಿಚಾರಗಳು ಅಜ್ಞಾನದ ಅಪ್ರಗಲ್ಭ ಫಲಗಳಾಗಿದ್ದು ಆ ಅಸತ್ಯ ಮಾರ್ಗದಿಂದ ಯಾರಿಗೂ ಮುಕ್ತಿ ದೊರೆಯಲಾರದೆಂದೂ ಪ್ರತಿಪಾದಿಸಿರುವುದನ್ನು ನಾವು ಗಮನದಲ್ಲಿಟ್ಟು ಕೊಳ್ಳಬೇಕು. ಪರಸ್ಪರ ವಿರುದ್ಧ ವಿಚಾರಗಳನ್ನೇ ಅಂತಿಮ ಸತ್ಯಗಳೆಂದೂ ಎಲ್ಲರಿಗೂ ಅದರಿಂದಲೇ ಶ್ರೇಯಸ್ಸು ದೊರೆಯುವುದೆಂದೂ ಹೇಳುವ ಈ ಎಲ್ಲ ಮತಗಳೂ ಸತ್ಯವನ್ನೇ ಹೇಳುವುವೆಂದು ನಾವು ಹೇಗೆ ಒಪ್ಪುವುದು? ಒಂದೇ ಮಗುವಿನ ಒಂದೇ ಕಾಹಿಲೆಗೆ ಪರಸ್ಪರ ವಿರೋಧಿ ಚಿಕಿತ್ಸೆಗಳನ್ನು ಹೇಳುವ ಇಬ್ಬರು ಡಾಕ್ಟರರ ಅಭಿಪ್ರಾಯಗಳನ್ನು ನಾವು ಹೇಗೆ ಒಪ್ಪುವುದು? ಪ್ರಮಾಣಗಳಿಂದ ನಿರ್ಣೀತವಾದ ಸತ್ಯಮಾರ್ಗವು ಒಂದೇ ಇರುವುದೆಂದು ಶ್ರೀಕೃಷ್ಣನು ಹೇಳಿರುವುದು ಅತ್ಯಂತ ಸಮಂಜಸವಾಗಿದೆ. ಈಶಾವಾಸ್ಯೋಪನಿಷತ್ತಿನಲ್ಲೂ ವಿದ್ಯೆ ಅವಿದ್ಯೆಗಳ ಬಗ್ಗೆ ವಿವೇಚಿಸುತ್ತ ಇದೇ ಮಾತನ್ನು ಹೇಳಲಾಗುತ್ತದೆ. ಯಥಾರ್ಥಜ್ಞಾನವು ಯಾವುದು, ಅಯಥಾರ್ಥಜ್ಞಾನವು ಯಾವುದು ಎಂಬುದನ್ನು ಸರಿಯಾಗಿ ವಿಮರ್ಶಿಸಿ ಯಥಾರ್ಥಜ್ಞಾನವನ್ನೇ ಆರಿಸಿ ಕೊಳ್ಳಬೇಕು ಎಂಬುದಾಗಿ ಅಲ್ಲಿ ತಿಳಿಸಲಾಗಿದೆ. ಹಸಿವೆಯಾಗಿದೆ ಎಂದು ಸಿಕ್ಕಿದ್ದನ್ನು ತಿಂದು ದೇಹವನ್ನು ಕೆಡಿಸುವುದಕ್ಕಿಂತ ಉಪವಾಸವೇ ಒಳಿತು. ಜ್ಞಾನವು ಬೇಕೆಂದು ವಿಮರ್ಶಿಸದೆ ಭ್ರಾಂತಜ್ಞಾನವನ್ನು ಪಡೆಯುವುದಕ್ಕಿಂತ ಅಜ್ಞಾನವೇ ಲೇಸೆಂದೂ ಅದರಲ್ಲಿ ಪ್ರತಿಪಾದಿಸಲಾಗಿದೆ. ಆದುದರಿಂದ ಅಕರ್ಮ ಹಾಗೂ ಕಾಮ್ಯಕರ್ಮಗಳಿಂದಲೇ ಪರಮಶ್ರೇಯವು ದೊರೆಯುವುದೆಂದು ಭಾವಿಸದೆ, ಗೀತೆಯಲ್ಲಿ ಶ್ರೀಕೃಷ್ಣನು ಪ್ರತಿಪಾದಿಸಿದ ನಿಷ್ಕಾಮಕರ್ಮಯೋಗವೇ ತಾರಕವೆಂದು ನಾವು ಭಾವಿಸಬೇಕು.

## ವೇದ ಮತ್ತು ಕಾಮ್ಯಕರ್ಮ

ವೇದಗಳಲ್ಲಿ ಕಾಮ್ಯಕರ್ಮಗಳ ಪ್ರತಿಪಾದನೆ ಇದೆ. ಜ್ಯೋತಿಷ್ಟೋಮ ಮುಂತಾದ ಯಜ್ಞಗಳ ಅನುಷ್ಠಾನದಿಂದ ಸ್ವರ್ಗವನ್ನು ಪಡೆಯಬಹುದೆಂದು ಅಲ್ಲಿ ಹೇಳಲಾಗಿದೆ. ಯಾವ ಕಾಮನೆಯೂ ಇಲ್ಲದೆ ಕರ್ತವ್ಯವನ್ನು ಮಾಡಬೇಕೆಂದು ಗೀತೆಯು ಹೇಳುವುದು ವೇದವಿರೋಧಿ ವಿಚಾರವಲ್ಲವೇ ಎಂಬ ಸಂಶಯ ಮೂಡಬಹುದು. ಆದರೆ ಸ್ವರ್ಗದ ಭೋಗವನ್ನು ಪಡೆಯುವುದಕ್ಕಾಗಿ ಯಜ್ಞ ಯಾಗಾದಿಗಳನ್ನು ಬೋಧಿಸುವುದೇ ವೇದದ ಗುರಿಯಲ್ಲ. ವೇದದ ನಿಜವಾದ ಅಂತರಾರ್ಥವನ್ನು ತಿಳಿಯದೆ ಜ್ಞಾನ ರಹಿತವಾದ ಶುಷ್ಕ ಕರ್ಮಕಾಂಡದ ಕಡೆಗೆ ವೇದವನ್ನು ಎಳೆದು ವೇದಕ್ಕೆ ಅಪಚಾರ ಎಸಗಿದವರು ಮೀಮಾಂಸಕರು. ಸ್ವರ್ಗದ ಸುಖಭೋಗದ ಆಮಿಷವನ್ನು ಜನರ ಮುಂದಿಟ್ಟು ಕೇವಲ ಕರ್ಮಕಾಂಡದ ಪ್ರಸ್ಥವನ್ನು ದೇಶದಲ್ಲಿ ಬೆಳೆಸಿ ಇಲ್ಲಿ ಪೂರೈಸಲಾಗದ ಭೋಗಲಾಲಸೆಯನ್ನು ಮಾತ್ರ ಜಾಗೃತಗೊಳಿಸಿದರು. ಇದರಿಂದ ಜ್ಞಾನ, ಅಧ್ಯಾತ್ಮಚಿಂತನವೆಲ್ಲ ಸ್ಥಗಿತವಾಗುವಂತಾಯಿತು. ಇವರು ವೇದವೇತ್ತರಲ್ಲ, ವೇದವಾದಿಗಳು; ಬರೇ ವೇದಪಾಠಕರು. ಮರವು ಹೂ ಬಿಟ್ಟಾಗ ಅದರಿಂದ ಉಂಟಾಗುವ ಮಧುರ ಫಲಕ್ಕಾಗಿ ಕಾಯದೆ ಹೂವಿನ ಪರಿಮಳಕ್ಕಾಗಿ ಆತುರತೆಯಿಂದ ಹೂವನ್ನೇ ಕಿತ್ತುಕೊಂಡು ಹಣ್ಣನ್ನು ಕಳೆದುಕೊಳ್ಳುವವರಂತೆ ಇವರ ಸ್ಥಿತಿಯಾಗಿದೆ. ವೇದವು ಮಾಡಿದ ಕಾಮ್ಯಕರ್ಮಗಳ ಬೋಧನೆಯ ಉದ್ದೇಶವನ್ನು ಅರಿಯದೆ ಭೋಗಪ್ರಧಾನವಾದ ಸಾಮಾನ್ಯ ಫಲಗಳನ್ನೇ ಆಶಿಸಿದರೆ ಶಾಸ್ತ್ರದ ಅಮೃತಫಲವನ್ನೇ ನಾವು ಕಳೆದುಕೊಳ್ಳುತ್ತೇವೆ. ಮೀಮಾಂಸಕರು ಇಂತಹ ಪ್ರಮಾದವನ್ನು ಮಾಡಿದರು. ಅದನ್ನೇ -

**ಯಾಮಿಮಾಂ ಪುಷ್ಪಿತಾಂ ವಾಚಮ್ ।**

ಎಂಬ ಶ್ಲೋಕದಲ್ಲಿ ನಿಂದಿಸಲಾಗಿದೆ.

ವೇದವೇನೋ ಸ್ವರ್ಗಸುಖಗಳ ಮಾತನ್ನು ಹೇಳಿದೆ. ಭೋಗ ಪ್ರವೃತ್ತಿಯ ಸಾಮಾನ್ಯ ಜನರ ಮನಸ್ಸನ್ನು ಪರಮಾತ್ಮನ ಕಡೆಗೆ ತಿರುಗಿಸುವ ಕಾರ್ಯದ ಮೊದಲನೇ ಹಂತವಾಗಿ ಸ್ವರ್ಗ ಹಾಗೂ ಐಹಿಕ ಫಲಗಳಿಗಾಗಿ ಅನೇಕ

ಕರ್ಮಗಳನ್ನು ಬೋಧಿಸಿದೆ. ಅದೇ ಅದರ ಅಂತಿಮ ಉದ್ದೇಶವಲ್ಲ. ತಾಯಿಯು ಮಕ್ಕಳಿಗೆ ಕಹಿ ಔಷಧ ನೀಡಲು ಪ್ರಾರಂಭಿಕವಾಗಿ ಸಕ್ಕರೆಯನ್ನು ನೀಡುವಂತೆ ವೇದವು ಸ್ವರ್ಗದ ಆಮಿಷವನ್ನು ನಮ್ಮ ಮುಂದೆ ಇಡುವುದುಂಟು. ವೇದದ ಈ ಮಾತೃಹೃದಯದ ವಾತ್ಸಲ್ಯ ಭಾವವನ್ನು ನಾವು ಅರ್ಥ ಮಾಡಿಕೊಳ್ಳಬೇಕು. ನಮ್ಮ ನಮ್ಮ ಮಾನಸಿಕ ಮಟ್ಟವನ್ನು ಅನುಸರಿಸಿ ನಮ್ಮ ಆತ್ಮವನ್ನು ಎತ್ತರಿಸಲು ವೇದವು ಪ್ರವೃತ್ತವಾಗಿದೆ. ಇದನ್ನೇ ಭಾಗವತದಲ್ಲಿ,

**ರೋಚನಾರ್ಥಂ ಫಲಶ್ರುತಿಃ।**

ಎಂದು ಹೇಳಿದೆ. ಛಾಂದೋಗ್ಯೋಪನಿಷತ್ತಿನಲ್ಲಿ ಒಂದು ವರ್ಣನೆ ಇದೆ. ಮೃತ್ಯುವು ಜೀವನನ್ನು ಹಿಡಿಯಬೇಕೆಂದು ಆತನನ್ನು ನೋಡಿದಾಗ ಅವನು ಬೆದರಿ ವೇದದ ಆಶ್ರಯವನ್ನು ಪಡೆದನು. ಮೀನು ನೀರಿನಲ್ಲಿ ಇದ್ದರೂ ಅದನ್ನು ಹಕ್ಕಿಯು ತನ್ನ ಉದ್ದನೆಯ ಕೊಕ್ಕಿನಿಂದ ಹಿಡಿಯುವಂತೆ ಮೃತ್ಯುವು ಮುಂದೆ ಬಂದಾಗ ಜೀವನು ಇನ್ನೂ ಒಳಗೊಳಗೆ ಸೇರಿಕೊಂಡು ಮೃತ್ಯುವಿನಿಂದ ಪಾರಾದನು. ನೀರಿನಲ್ಲಿ ಆಳವಾಗಿ ಒಳ ಹೊಕ್ಕಿರುವ ಮೀನನ್ನು ಹಕ್ಕಿ ಏನೂ ಮಾಡಲಾರದು. ವೇದದಲ್ಲಿ ಮೇಲಿಂದ ಮೇಲೆ ಹರಿದಾಡಿದರೆ ಏನೂ ಪ್ರಯೋಜನವಾಗಲಾರದು. ವೇದದ ಒಳಹೊಕ್ಕು ಆಳವಾಗಿ ವಿಮರ್ಶಿಸಿ ಅದರ ಅಂತರಾರ್ಥವನ್ನು ತಿಳಿದರೆ ಮಾತ್ರ ನಾವು ಮೃತ್ಯುವಿನಿಂದ ಅಮೃತತ್ತ್ವದ ಕಡೆಗೆ ನಾಗಬಲ್ಲೆವೆಂದು ಇದರ ತಾತ್ಪರ್ಯವಾಗಿದೆ.

**ತ್ರೈಗುಣ್ಯ ವಿಷಯಾ ವೇದಾಃ**
**ನಿಸ್ತ್ರೈಗುಣ್ಯೋ ಭವಾರ್ಜುನ।**

ಈ ಶ್ಲೋಕದಿಂದ ಶ್ರೀಕೃಷ್ಣನು ''ವೇದವು ತ್ರಿಗುಣಜನ್ಯವಾದ ಕರ್ಮವನ್ನು ಹೇಳಿದರೂ ನೀನು ಅದನ್ನು ಮಾಡಬೇಡ'' ಎಂದು ವೇದದ ನಿರಾಕರಣೆ ಮಾಡಿರುವನೆಂದೇ ಆಪಾತವಾಗಿ ಪ್ರತೀತಿಯಾಗುವುದು. ಇದರಿಂದ ವೇದದ ವಿಚಾರವನ್ನು ಅಲ್ಲಗಳೆದು ಗೀತೆಯು ಹೊಸ ಹೆಜ್ಜೆಯನ್ನು ಇಟ್ಟಿದೆಯೆಂದು ಕೆಲವರು ಪ್ರತಿಪಾದಿಸುತ್ತಾರೆ. ಆದರೆ ನಿಷ್ಕಾಮಕರ್ಮವು ಗೀತೆಯ ಹೊಸ ವಿಚಾರವಲ್ಲ. ಉಪನಿಷತ್ತಿನಲ್ಲಿ ಈ ನಿಷ್ಕಾಮಕರ್ಮದ ಮಾತು ಅನೇಕ ಕಡೆ

ಬರುತ್ತದೆ. ಈಶಾವಾಸ್ಯದಲ್ಲೇ ಇದರ ಸುಂದರ ನಿರೂಪಣೆ ಇರುವುದು. ವೇದದಿಂದ ಕಾಮ್ಯಧರ್ಮದ ಬೋಧೆಯಾದರೂ ಅದರ ನಿಜಾರ್ಥವನ್ನು ಅರಿತು ಕಾಮ್ಯಧರ್ಮಗಳ ಕಡೆಗೆ ನಮ್ಮ ಮನವನ್ನು ಹರಿಸದೆ ವೇದದ ಪರಮ ತಾತ್ಪರ್ಯ ವಿಷಯವಾದ ನಿಷ್ಕಾಮಧರ್ಮವನ್ನು ಆಚರಿಸುವುದೇ ನಮ್ಮ ಧ್ಯೇಯವಾಗಿರಬೇಕೆಂಬುದು ಶ್ರೀಕೃಷ್ಣನ ಆಶಯವಾಗಿದೆ.

ವೇದಗಳು ದೊಡ್ಡ ಸರೋವರದಂತೆ ಇದ್ದು ಎಲ್ಲ ಬಗೆಯ ವಿಚಾರಗಳನ್ನು ಒಳಗೊಂಡಿರುವವು. ಸರೋವರದಲ್ಲಿಯ ನೀರನ್ನು ನಮಗೆ ಬೇಕಾಗುವಷ್ಟು ತೆಗೆದುಕೊಳ್ಳುವಂತೆ ವೇದಗಳಲ್ಲಿಯ ವಿಚಾರಗಳನ್ನು ಸರಿಯಾಗಿ ಮಥನಮಾಡಿ ನಮಗೆ ಯಾವುದು ಯೋಗ್ಯವೋ ಯಾವುದು ಜೀರ್ಣವಾಗುವುದೋ ಅದನ್ನು ಸ್ವೀಕರಿಸಬೇಕು. ಆತ್ಮದ ಮಟ್ಟವನ್ನು ಎತ್ತರಿಸಬೇಕೆಂಬುದೇ ವೇದದ ಉದ್ದೇಶವಾಗಿದೆ. ಜ್ಞಾನದಲ್ಲಿ ಅಭಿರುಚಿ ಹುಟ್ಟಿಸಲು, ಪರಮಾತ್ಮನಲ್ಲಿ ಭಕ್ತಿಯನ್ನು ಹುಟ್ಟಿಸಲು ವೇದಗಳು ಕಾಮ್ಯಕರ್ಮಗಳನ್ನು ಬೋಧಿಸುವವು. ಪರೀಕ್ಷೆಯಲ್ಲಿ ಉತ್ತಮ ರೀತಿಯಿಂದ ಉತ್ತೀರ್ಣನಾದವನಿಗೆ ಬಹುಮಾನದ ಆಮಿಷ ತೋರಿಸುವಂತೆ ವೇದದ ಬೋಧನೆಯಾಗಿದೆ. ವಿದ್ಯಾರ್ಥಿಯಲ್ಲಿ ವಿದ್ಯಾಭಿರುಚಿಯನ್ನು ಬೆಳೆಸುವುದೇ ಬಹುಮಾನ ನೀಡುವ ಉದ್ದೇಶವಾಗಿರುವುದು. ಸ್ವರ್ಗಸುಖಗಳಿಗಾಗಿ ಕರ್ಮವನ್ನು ಬೋಧಿಸುವ ವೇದದ ಆಶಯವೂ ಇದೇ ಆಗಿದೆ. ಇದೇ ವೇದದ ಅಂತಿಮ ಉದ್ದೇಶವೆಂದು ಭಾವಿಸಬಾರದು. ಭಗವಂತನ ಜ್ಞಾನ ಪಡೆದು ಭಕ್ತಿಯಿಂದ ನಿಷ್ಕಾಮಕರ್ಮವನ್ನು ಆಚರಿಸುವುದೇ ವೇದಗಳ ತಾತ್ಪರ್ಯಾರ್ಥವಾಗಿರುವುದರಿಂದ ಶಾಸ್ತ್ರದ ಬಗ್ಗೆ ತಪ್ಪು ತಿಳುವಳಿಕೆ ಮಾಡಿಕೊಳ್ಳಲು ಅವಕಾಶವಿಲ್ಲ.

ಇನ್ನೂ ಒಂದು ವಿಷಯವನ್ನು ಇಲ್ಲಿ ನಾವು ಗಮನದಲ್ಲಿ ಇಟ್ಟುಕೊಳ್ಳಬೇಕು. ವೇದವು ಫಲದ ಆಶೆಯಿರುವವನಿಗಾಗಿ ಅನೇಕ ಕರ್ಮಗಳನ್ನು ಬೋಧಿಸಿದರೂ ಫಲದ ಕಾಮನೆಯನ್ನು ಮಾಡಬೇಕೆಂದು ಎಲ್ಲಿಯೂ ವಿಧಿಸಿಲ್ಲ. ಮೋಕ್ಷದ ಇಚ್ಛೆ ಹಾಗೂ ಆತುರತೆಯನ್ನು ಒತ್ತಿ ಹೇಳಿದಂತೆ ಫಲಕಾಮನೆಯ ಬಗ್ಗೆ ವಿಧಿವಾಕ್ಯವಿಲ್ಲ. ಫಲದ ಆಶೆ ಇದ್ದವರು ಇಂತಹ ಕರ್ಮಗಳನ್ನು ಮಾಡಲಿ ಎಂದು ಹೇಳುವುದರಿಂದ ಆಶೆಯನ್ನು ಅದು ಬೋಧಿಸಿದಂತೆ ಆಗುವುದಿಲ್ಲ. ಹಣದ ಆಶೆಯುಳ್ಳವನಿಗಾಗಿ

ಒಂದು ಒಳ್ಳೇ ಕೆಲಸ ಕೊಟ್ಟು ಸಂಬಳ ನೀಡುವುದರಿಂದ ನಿರಪೇಕ್ಷೆಯಿಂದ ಏನೂ ಸಂಬಳ ಪಡೆಯದೆ ಆ ಕೆಲಸವನ್ನು ಇನ್ನೊಬ್ಬ ಮಾಡಬಾರದೆಂದು ಆಗುವುದಿಲ್ಲ. ಸ್ವರ್ಗ ಮುಂತಾದ ಫಲಾಶೆಯಿಂದ ಮಾಡಬಹುದಾದ ಕಾರ್ಯಗಳನ್ನೇ ಫಲಾಶೆಯನ್ನು ತೊರೆದೂ ಮಾಡಲು ಅವಕಾಶವಿದೆ.

**ಕರ್ಮಣ್ಯೇವಾಧಿಕಾರಸ್ತೇ**
**ಮಾ ಫಲೇಷು ಕದಾಚನ ।**

''ವೇದವು ಕರ್ಮವನ್ನು ಮಾತ್ರ ವಿಧಾನಮಾಡಿದೆ. ಫಲಾಶೆಯನ್ನು ಅದು ವಿಧಿಸಲಿಲ್ಲ.''

## ಕರ್ಮವೂ ಫಲಾಶೆಯೂ

''ಫಲದಾತನು ಭಗವಂತನೇ ಆಗಿರುವುದರಿಂದ ಕರ್ತವ್ಯವನ್ನು ಮಾಡುವುದು ಮಾತ್ರ ನಮ್ಮ ಅಧಿಕಾರವ್ಯಾಪ್ತಿಗೆ ಒಳಪಟ್ಟಿದೆ'' ಎಂದೂ ಈ ಶ್ಲೋಕ ಹೇಳುತ್ತದೆ. ಫಲದ ಆಶೆಯನ್ನು ತೊರೆಯುವಾಗ ಅದರ ಜೊತೆಗೆ ಕರ್ತವ್ಯವನ್ನು ನಾವು ಬಿಡಬಾರದು. ಕಳೆಯನ್ನು ತೆಗೆಯುವಾಗ ಅದರ ಜೊತೆಗೆ ಬೆಳೆಯೂ ಹೋಗದಿರಲಿ. ನಮ್ಮ ಅಧಿಕಾರ ವ್ಯಾಪ್ತಿಗೆ ಒಳಪಡದ ಮತ್ತು ವೇದಗಳಿಂದ ವಿಹಿತವಲ್ಲದ ಫಲಾಶೆಯನ್ನು ಬಿಡುವ ಜೊತೆಗೆ ಕರ್ತವ್ಯತ್ಯಾಗವಾಗದಿರಲಿ ಎಂದೂ ಪರಮಾತ್ಮನು ಎಚ್ಚರಿಸುತ್ತಾನೆ.

**ಮಾ ತೇ ಸಂಗೋಽಸ್ತ್ವಕರ್ಮಣಿ ।**

ಸಾಂಸಾರಿಕ ಪ್ರವೃತ್ತಿಯವರಿಗೆ ಈ ಲೌಕಿಕ ಸುಖದ ಅಪೇಕ್ಷೆಯನ್ನು ತೊರೆಯುವುದು ಕಠಿಣವಾದೀತು. ನಿಷ್ಕಾಮಕರ್ಮದಿಂದ ದೊರೆಯುವ ಸಾತ್ತ್ವಿಕ ಆನಂದವು ಅತ್ಯಂತ ಮಹತ್ತರವಾದುದರಿಂದ ಅದನ್ನು ಪಡೆಯುವಾಗ ಈ ಲೌಕಿಕ ಸುಖವು ಕಳೆದುಹೋಯಿತೆಂದು ನಾವು ಮರುಗಬೇಕಿಲ್ಲ. ಕತ್ತಲಲ್ಲಿ ತಡವರಿಸುತ್ತಿದ್ದವನು ಮಿಂಚುಹುಳದ ಬೆಳಕು ಮಾಯವಾಗುವುದೆಂದು ಸೂರ್ಯೋದಯವೇ ಬೇಡವೆನ್ನುವನೆ? ಅಣೆಕಟ್ಟು ಕಟ್ಟಿ ದೊಡ್ಡ ಜಲಾಶಯವನ್ನು ನಿರ್ಮಿಸುವಾಗ ತನ್ನ ಬಾವಿಯು ಮುಳುಗಿ ನಿಷ್ಪ್ರಯೋಜಕವಾಗುವುದರಿಂದ ಅಣೆಕಟ್ಟು ಕಟ್ಟಬಾರದೆಂದು ಹೇಳುವುದು

ಉಚಿತವೆನಿಸುವುದೆ? ಆ ದೊಡ್ಡ ಜಲರಾಶಿಯ ಮುಂದೆ ಬಾವಿಯ ಉಪಯೋಗ ಏನಿದೆ? ನಿಷ್ಕಾಮಕರ್ಮದಿಂದ ದೊರೆಯುವ ಸುಖಸಮುದ್ರದಲ್ಲಿ ಉಳಿದ ಕ್ಷುದ್ರಸುಖಗಳಿಗೆ ಪ್ರತ್ಯೇಕವಾದ ಮಹತ್ತ್ವ ಹಾಗೂ ಆವಶ್ಯಕತೆ ಉಳಿಯುವುದಿಲ್ಲ. ಗೀತೆ ಹೇಳುತ್ತದೆ:

**ಯಾವಾನರ್ಥ ಉದಪಾನೇ**
**ಸರ್ವತಃ ಸಂಪ್ಲುತೋದಕೇ ।**

ಫಲದ ಆಶೆಯಿಂದ ಕಾರ್ಯವನ್ನು ಮಾಡುವವರು ದೀನಜೀವನವನ್ನು ನಡೆಸುವರು ಎಂದೂ ಪರಮಾತ್ಮನು ಹೇಳುತ್ತಾನೆ:

**ಕೃಪಣಾಃ ಫಲಹೇತವಃ ।**

ಸಂಸಾರಿಗಳು ಸಹಜವಾಗಿ ಹಗಲು ರಾತ್ರಿ ಕಠಿಣವಾಗಿ ದುಡಿಯುತ್ತಾರೆ. ಶ್ರಮಪಡುವುದರಲ್ಲಿ ಕರ್ಮಯೋಗಿಗಿಂತ ಅವರೇನು ಕಡಿಮೆ ಇಲ್ಲ. ಕರ್ಮಯೋಗಿಯು ಪರಮಾತ್ಮನಿಗಾಗಿ ಅಳುತ್ತಿದ್ದರೆ, ಇವರು ಹೆಂಡತಿ, ಮಕ್ಕಳು, ಪರಿವಾರಕ್ಕಾಗಿ ಅಳುತ್ತಾರೆ. ಇಂತಹ ಕಾರ್ಯಗಳನ್ನು ದೇವರನ್ನು ಸ್ಮರಿಸಿ ಅವನಿಗಾಗಿ ಮಾಡಿದ್ದರೆ ಎಷ್ಟು ಒಳಿತಾಗುತ್ತಿತ್ತು! ಆಸಕ್ತಿ ಪರವಶರಾಗಿ ನಾವು ಹೆಚ್ಚಿನ ತ್ಯಾಗ, ಕಷ್ಟ, ಕಾರ್ಪಣ್ಯಗಳಿಂದ ಕಾರ್ಯ ಮಾಡುವಂತೆ ನಿರಾಸಕ್ತರಾಗಿ ಪರಮಾತ್ಮನಿಗಾಗಿ ಕಾರ್ಯ ಮಾಡುವುದರಲ್ಲಿ ಅದೇ ಶ್ರಮವನ್ನು ವಿನಿಯೋಗಿಸಬಹುದಲ್ಲವೆ? ಕ್ಷುದ್ರಫಲಗಳಿಗಾಗಿ ತಮ್ಮ ಜೀವನವನ್ನೇ ಅಪವ್ಯಯಗೊಳಿಸುವ ಈ ಜನರ ಬಗ್ಗೆ ಭಗವಂತನೇ ಕನಿಕರಪಡುತ್ತಾನೆ.

ಗೀತೆಯೇನೋ ಕಾಮನಾತ್ಯಾಗವನ್ನು ಮಾತುಮಾತುಗಳಲ್ಲಿ ಬೋಧಿಸಿದೆ. ಆದರೆ ಇದರ ವ್ಯವಹಾರ್ಯತೆಯ ಬಗ್ಗೆಯೇ ನಮಗೆ ಸಂಶಯ ಮೂಡುವುದು. ಕಾಮನೆ ಇಲ್ಲದೆ ಕಾರ್ಯಪ್ರವೃತ್ತಿ ಎಂತು ಸಾಧ್ಯ? ಯಾವುದೊಂದು ಕರ್ತವ್ಯಪ್ರವೃತ್ತಿಗೂ ಆಸೆ, ಆಕಾಂಕ್ಷೆಗಳೇ ಮೂಲವಾಗಿರುವವು. ಅದನ್ನೇ ಕಿತ್ತೊಗೆದು ಕರ್ತವ್ಯದ ಉಪದೇಶ ನೀಡುವುದರಲ್ಲಿ ಏನು ಔಚಿತ್ಯವಿದೆ? ಇತರ ಮತಾನುಯಾಯಿಗಳು ಗೀತೆಯ ನಿಷ್ಕಾಮಕರ್ಮಯೋಗದಲ್ಲಿ ಏನೂ ಅರ್ಥವಿಲ್ಲವೆಂದು ಆಕ್ಷೇಪಿಸಿದ್ದೂ ಇದೆ. ನಿಜ, ಆಶೆಯು ಇಲ್ಲದ ಜೀವನವು

ನಿಷ್ಪ್ರಯೋಜಕವೇ! ಆದರೆ ಆ ಆಶೆಯು ಉದಾತ್ತವಾಗಿರಬೇಕು. ಗೀತೆಯು ಕಾಮನೆಯನ್ನೇ ಸರ್ವಾತ್ಮನಾ ನಿಷೇಧಿಸಲಿಲ್ಲ. ತನ್ನ ಸ್ವಾರ್ಥ ಸುಖಕ್ಕಾಗಿ, ಭೌತಿಕ ಸುಖದ ಆಕರ್ಷಣೆಯಿಂದ ಕಾರ್ಯ ಮಾಡುವುದನ್ನು ಮಾತ್ರ ಅದು ನಿಷೇಧಿಸಿದೆ. ಹುಚ್ಚು ಕಾಮನೆಗಳನ್ನು ಮಾಡದೆ ಉಚ್ಚ ಉದಾತ್ತ ಧ್ಯೇಯದಿಂದ ವರ್ತಿಸ ಬೇಕೆಂಬುದೇ ಗೀತೆಯ ಆಶಯ. ಭಗವದನುಗ್ರಪದ ಹಾಗೂ ಲೋಕಹಿತದ ಕಾಮನೆಯಿಂದ ನಾವು ಕಾರ್ಯಪ್ರವೃತ್ತರಾಗಬೇಕು. ರಾಗದ್ವೇಷಗಳಿಗೆ ಬಲಿಯಾಗಿ ಕ್ಷುದ್ರ ಕಾಮನೆಗಾಗಿ ನಮ್ಮ ಶಕ್ತಿಯ ಅಪವ್ಯಯವಾಗಬಾರದೆಂಬ ಈ ಗೀತೆಯ ಉಪದೇಶದಲ್ಲಿ ಅವ್ಯವಹಾರ್ಯತೆ ಏನೂ ಇಲ್ಲ. ಜೀವನದ ನಿಜತತ್ತ್ವವನ್ನೇ ಅದು ಬೋಧಿಸುತ್ತದೆ.

ಮಹಾಭಾರತದಲ್ಲಿ ಬಂದ ಒಂದು ಸಂದರ್ಭವನ್ನು ಇಲ್ಲಿ ಉದಾಹರಿಸಬಹುದು; ಭೀಷ್ಮರಿಂದ ನಾನಾ ಧರ್ಮಗಳ ಬಗ್ಗೆ ವಿಸ್ತಾರವಾದ ಉಪದೇಶವನ್ನು ಪಡೆದ ಬಳಿಕ ಯುಧಿಷ್ಠಿರನು ಎಲ್ಲರ ಮುಂದೆ ಒಂದು ಪ್ರಶ್ನೆ ಇಡುವನು. ಧರ್ಮ, ಅರ್ಥ, ಕಾಮ, ಮೋಕ್ಷಗಳಲ್ಲಿ ಯಾವುದು ಶ್ರೇಷ್ಠ? - ಇದು ಅವನ ಪ್ರಶ್ನೆ. ಧರ್ಮವೇ ಶ್ರೇಷ್ಠ, ಅದರಿಂದಲೇ ನಿಃಶ್ರೇಯಸ್ಸನ್ನು ಪಡೆಯಬಹುದು ಎಂದು ವಿದುರನು ಸಹಜವಾಗಿ ಹೇಳಿದನು. ಅರ್ಥವೇ ಪುರುಷಾರ್ಥಗಳಲ್ಲಿ ಪ್ರಧಾನ, ಸಂಪತ್ತು ಹಾಗೂ ವಿದ್ಯೆಗಳೇ ಅರ್ಥ. ಇವಿಲ್ಲದೆ ಧರ್ಮಾಚರಣೆ ಅಶಕ್ಯವೆಂದು ವ್ಯವಹಾರವಾದಿಯಾದ ಅರ್ಜುನನು ಪ್ರತಿಪಾದಿಸಿದನು. ಧರ್ಮರಾಜನಂತೂ ಎಲ್ಲರ ಗುರಿಯೂ ಮುಕ್ತಿಯೇ ಆಗಿರುವುದರಿಂದ ಅದೇ ಶ್ರೇಷ್ಠವೆಂದು ಉಪಸಂಹಾರ ಮಾಡಿದನು. ಆದರೆ ಭೀಮಸೇನನ ವಾದವೇ ಬೇರೆಯಾಗಿತ್ತು. ಕಾಮವೇ ಎಲ್ಲವುಗಳಿಗಿಂತಲೂ ಮುಖ್ಯವೆಂದು ಅವನು ನುಡಿದಾಗ ಎಲ್ಲರೂ ಒಮ್ಮೆಲೇ ಚಕಿತರಾದರು. ಭೀಮನು ಅದರ ವಿವರಣೆಯನ್ನು ನೀಡುತ್ತ, "ಕಾಮವೆಂದರೆ ಇಚ್ಛೆ. ಇಚ್ಛಾಶಕ್ತಿ ಇಲ್ಲದಿದ್ದಲ್ಲಿ ಧರ್ಮವೂ ಇಲ್ಲ, ಅರ್ಥವೂ ಇಲ್ಲ, ಮೋಕ್ಷವನ್ನೂ ಪಡೆಯಲಾರೆವು. ಉದಾತ್ತವಾದ ಇಚ್ಛಾಬಲದಿಂದಲೇ ಧರ್ಮಾರ್ಥಮೋಕ್ಷ ಗಳನ್ನು ನಾವು ಹೊಂದಬಲ್ಲೆವು. ಎಲ್ಲ ಪುರುಷಾರ್ಥಗಳೂ ಕಾಮದ ಅಧೀನವಾಗಿರುವುದರಿಂದ ಅದು ಹೇಯವಲ್ಲ. ಕೇವಲ ಭೋಗಲಾಲಸೆಯನ್ನೆ

ನಾವು ಕಾಮವೆಂದು ಭಾವಿಸಬಾರದು. ಕಾಮದ ಮಹತ್ತ್ವ ಹಾಗೂ ಪವಿತ್ರತೆಯನ್ನು ಅರಿತು ಉಚ್ಚ ಆಕಾಂಕ್ಷೆಗಳಿಂದ ಪ್ರೇರಿತರಾಗಿ ನಾವು ಜೀವನದ ಸಾಫಲ್ಯವನ್ನು ಪಡೆಯಬೇಕು'' ಎಂದನು.

ಅನಿಷಿದ್ಧಕಾಮಿತ್ವೈವ
ಹ್ಯಕಾಮಿತ್ವಮಿತೀರ್ಯತೇ । -ಗೀತಾತಾತ್ಪರ್ಯ

''ನಿಷಿದ್ಧವಾದದ್ದನ್ನು ಬಯಸದಿರುವುದೇ ಕಾಮನಾತ್ಯಾಗವೆನಿಸುವುದು''. ತನ್ನ ಸ್ವಂತ ವೈಷಯಿಕ ಸುಖದ ಬಯಕೆಯನ್ನು ವರ್ಜಿಸಿ ಮೋಕ್ಷ, ಭಗವದನುಗ್ರಹ, ಲೋಕಹಿತಗಳ ಆಕಾಂಕ್ಷೆಯಿಂದ ಪ್ರವರ್ತಿಸುವುದೇ ನಿಷ್ಕಾಮ ಕರ್ಮವೆನಿಸುವುದು.

ಯಾವ ಸ್ವಾರ್ಥದ ಆಶೆಯನ್ನೂ ಇಟ್ಟುಕೊಳ್ಳದೆ ಕರ್ತವ್ಯವನ್ನು ಆಚರಿಸಬೇಕೆನ್ನುವುದು ಹೇಳುವಷ್ಟು ಆಚರಣೆಯಲ್ಲಿ ಸುಲಭವಲ್ಲ. ನಾವು ನಿತ್ಯಜೀವನದಲ್ಲಿಯೂ ಯಾವುದೇ ಉತ್ತಮ ಕಾರ್ಯಗಳನ್ನು ಸ್ವಾರ್ಥಭಾವನೆಯಿಂದ ಪ್ರೇರಿತರಾಗಿಯೇ ಮಾಡುತ್ತಿರುವೆವು. ಸ್ವರ್ಗ ಕೀರ್ತಿ ಏನಾದರೊಂದು ಆಶೆ ನಮಗೆ ಇದ್ದೇ ಇರುವುದು. ಗೀತೆಯ ಈ ಉಚ್ಚ ಆದರ್ಶವನ್ನು ನೋಡಿ ನಾವು ನಿಜವಾಗಿಯೂ ನಿರಾಶರೇ ಆಗಬೇಕಾಗುತ್ತದೆ. ವಸ್ತುತಃ ಇಂತಹ ನಿರಾಶೆಗೆ ಕಾರಣವಿಲ್ಲ. ಶ್ರೇಷ್ಠ ಪುರುಷರೂ ಒಮ್ಮೊಮ್ಮೆ ಲೌಕಿಕ ಆಶೆಗೆ ಬಲಿಬೀಳುವ ಪ್ರಸಂಗ ಬರುವುದು. ಅಪರೋಕ್ಷ ಜ್ಞಾನಿಗಳಿಗೂ ಆ ತತ್ತ್ವಜ್ಞಾನದ ಅಭಿಭವವಾಗಿ ಮೋಹಪರವಶತೆ ಉಂಟಾಗಬಹುದು. ಗೀತೆಯ ಉಚ್ಚ ಆದರ್ಶ ನಮ್ಮ ಕಣ್ಣ ಮುಂದೆ ಇದ್ದಲ್ಲಿ ನಾವು ತಪ್ಪು ದಾರಿ ತುಳಿಯುವ ಸಂಭವ ಬಹಳಷ್ಟು ಕಡಿಮೆ ಆಗುವುದು. ಧ್ರುವನಕ್ಷತ್ರವನ್ನು ನಾವು ಮುಟ್ಟಲಾರೆವು. ಆದರೆ ಅದು ನಮ್ಮ ಕಣ್ಣ ಮುಂದೆ ಇದ್ದರೆ ಹಡಗು ದಾರಿ ತಪ್ಪಲಾರದು. ಕರ್ಮಯೋಗದ ಶ್ರೇಷ್ಠ ಆದರ್ಶ ಒಮ್ಮೆಲೇ ನಮಗೆ ಎಟುಕಲಾರದಾದರೂ ಈ ಆದರ್ಶದ ಗುರಿಯಲ್ಲಿ ನಮ್ಮ ಜೀವನಪಥವನ್ನು ರೂಪಿಸಲು ಪ್ರಾಮಾಣಿಕವಾಗಿ ಪ್ರಯತ್ನಿಸುವುದರಲ್ಲೇ ನಮ್ಮ ಜೀವನದ ಸಾರ್ಥಕತೆ ಅಡಗಿದೆ. ನಿರಾಶರಾಗದೆ ಈ ಗುರಿಯ ಕಡೆಗೆ ನಾವು ಸಾಗಬೇಕು.

## ಯೋಗಃ ಕರ್ಮಸು ಕೌಶಲಮ್

ಹೀಗೆ ಆಸಕ್ತಿಯ ಪರಿತ್ಯಾಗದೊಂದಿಗೆ ಕರ್ತವ್ಯವನ್ನು ಆಚರಿಸುವಾಗ ಯಾವ ಲೇಪವೂ ನಮಗೆ ಆಗದು. ಬೆಂಕಿಯ ಜೊತೆಗೆ ಹೊಗೆಯಂತೆ ಕರ್ತವ್ಯದ ಜೊತೆಗೆ ಅನಿವಾರ್ಯವಾಗಿ ಸಂಭವಿಸುವ ದೋಷಲೇಪದ ನಿವಾರಣೆಯೇ ಈ ಕರ್ಮಯೋಗದ ವೈಶಿಷ್ಟ್ಯ. ಒಬ್ಬನಿಗೆ ನದಿಯ ಆಚೆಯ ದಡವನ್ನು ಸೇರಬೇಕಾಗಿದೆ. ನದಿಗೆ ಇಳಿಯದೆ ಆಚೆ ದಡವನ್ನು ಅವನೆಂದೂ ಮುಟ್ಟಲಾರ. ಅದರಂತೆ ಸಂಸಾರಕ್ಕೆ ಇಳಿಯದೆ, ಕರ್ತವ್ಯವನ್ನು ಆಚರಿಸದೆ ಸಂಸಾರವನ್ನು ದಾಟಲಾರೆವು. ಈಜು ಕಲಿಯದೆ ನದಿಗೆ ಹಾರಿದರೆ ಆಗುವ ಅನರ್ಥದಂತೆ ಕರ್ತವ್ಯದ ಕಲೆಯನ್ನು ಅರಿತುಕೊಳ್ಳದೆ ಸ್ವಾರ್ಥಪರರಾಗಿ ಕರ್ಮಾಚರಣೆಯನ್ನು ಮಾಡುವುದರಿಂದ ಸಂಸಾರದಲ್ಲಿ ಮುಳುಗೇಳುವ ದುರಂತಕ್ಕೆ ಗುರಿಯಾಗುವೆವು.

> ತಸ್ಮಾದ್ಯೋಗಾಯ ಯುಜ್ಯಸ್ವ
> ಯೋಗಃ ಕರ್ಮಸು ಕೌಶಲಮ್ ।

''ನಿಷ್ಕಾಮಕರ್ಮದ ಆಚರಣೆಯೇ ಕರ್ಮದ ಚಾತುರ್ಯ; ಅದೇ ಕರ್ಮದ ಕಲೆ''. ಆಸಕ್ತಿ ಇಲ್ಲದೆ ಕರ್ಮವನ್ನು ಆಚರಿಸಿದರೆ ಆತ ಕರ್ಮದಲ್ಲಿ ಮುಳುಗದೆ ಲೀಲಾಜಾಲವಾಗಿ ಸಂಸಾರವನ್ನು ದಾಟಬಲ್ಲ. ಹಲಸಿನ ಹಣ್ಣು ತಿನ್ನಬೇಕು; ಮೇಣ ಅಂಟಬಾರದು. ಕೈಗೆ ಜಿಡ್ಡು ಬಳಿದುಕೊಂಡು ಹಣ್ಣು ಸುಲಿದರೆ ಈ ಕೆಲಸವಾಗುವುದು. ಕರ್ಮಯೋಗವೇ ಆ ಜಿಡ್ಡು. ನಾವು ಒಳ್ಳೇ ಕರ್ತವ್ಯಗಳನ್ನು ಮಾಡುವಾಗಲೂ ಅನಿವಾರ್ಯವಾಗಿ ನಡೆಯಬಹುದಾದ ಹಿಂಸೆ ಮುಂತಾದ ಕೃತ್ಯಗಳ ಲೇಪವಾಗದಿರಲು ಗೀತೆಯು ಯೋಗ್ಯ ಪರಿಹಾರವನ್ನು ನೀಡಿದೆ. ನಾವು ಉಪನ್ಯಾಸ ಮಾಡುವಾಗಲೂ ಎಷ್ಟೋ ಹಿಂಸೆಗಳು ಸಂಭವಿಸುತ್ತವೆ. ನಮ್ಮ ಶರೀರ ವ್ಯಾಪಾರವಾದಾಗಲೆಲ್ಲ ಅನೇಕ ಚಿಕ್ಕ ಜೀವಜಂತುಗಳ ಹಿಂಸೆಯು ನಡೆದೇ ನಡೆಯುತ್ತದೆ. ನಾವು ನಿಷ್ಕಾಮಭಾವನೆಯಿಂದ, ಭಗವದ್ಭಕ್ತಿಯಿಂದ ಕರ್ತವ್ಯವನ್ನು ಮಾಡಿದರೆ ಈ ದೋಷವು ಅಂಟದೆ ಕರ್ತವ್ಯದ ಅಮೃತ ಫಲವನ್ನು ಮಾತ್ರ ನಾವು ಪಡೆಯುವಂತಾಗುವುದು.

## ನಿಷ್ಕಾಮಕರ್ಮದ ಫಲ

ಈ ನಿಷ್ಕಾಮಕರ್ಮವನ್ನು ಎಷ್ಟು ಸಮಯದವರೆಗೆ ನಾವು ಮಾಡಬೇಕು? ಇದು ಮುಂದಿನ ಪ್ರಶ್ನೆ.

**ಯದಾ ತೇ ಮೋಹಕಲಿಲಂ**
**ಬುದ್ಧಿರ್ವ್ಯತಿತರಿಷ್ಯತಿ ।**
**ತದಾ ಗಂತಾಸಿ ನಿರ್ವೇದಂ**
**ಶ್ರೋತವ್ಯಸ್ಯ ಶ್ರುತಸ್ಯ ಚ ॥**

ಅಂತಃಕರಣಶುದ್ಧಿ, ಮಿಥ್ಯಾಜ್ಞಾನದ ನಿವೃತ್ತಿ ಹಾಗೂ ತತ್ತ್ವಜ್ಞಾನದ ಉದಯ ಆಗುವವರೆಗೆ ಈ ಕರ್ಮಾಚರಣೆಯು ನಡೆಯಬೇಕು. ಧ್ಯಾನ ಮತ್ತು ಸಾಕ್ಷಾತ್ಕಾರಗಳಾಗಲು ಅಂತಃಕರಣದ ಪಾವಿತ್ರ್ಯವು ಆವಶ್ಯಕ. ರಾಗದ್ವೇಷಗಳಿಂದ ಕಲುಷಿತವಾದ ಮನಸ್ಸಿನಲ್ಲಿ ಪರಮಾತ್ಮನು ಪ್ರತಿಬಿಂಬಿತನಾಗಲಾರನು. ಅಲೆಗಳಿಂದ ಚಲವಿಚಲವೂ ಕಲುಷಿತವೂ ಆದ ನೀರಿನಲ್ಲಿ ಸೂರ್ಯನ ಪ್ರತಿಬಿಂಬವನ್ನು ಕಾಣಲಾರೆವು. ಅದಕ್ಕೆ ನಿರ್ಮಲ ಸರೋವರವೇ ಬೇಕಾಗುವಂತೆ ಭಗವಂತನನ್ನು ಕಾಣಲು ನಿರ್ಮಲ ಹೃದಯ ಬೇಕು.

**ಕರ್ಮಣಾ ಜ್ಞಾನಮಾತನೋತಿ ।**

ಕರ್ಮದ ಆಚರಣೆಯಿಂದ ಹೃದಯನೈರ್ಮಲ್ಯ ಸಿದ್ಧಿಸುವುದು. ಸತ್‌ಕರ್ಮಗಳನ್ನು ಆಚರಿಸುತ್ತಿರುವಾಗ ಮನೋದೋಷಗಳು ಹುಟ್ಟಲು ಅವಕಾಶವೇ ಆಗುವುದಿಲ್ಲ. ಮನಸ್ಸು ಅದರಿಂದ ಉತ್ತಮ ಸಂಸ್ಕಾರವನ್ನೇ ಪಡೆಯುವುದು. ದೇಶದ ಸ್ವಾತಂತ್ರ್ಯಾಂದೋಲನದ ಸಂದರ್ಭದಲ್ಲಿ ಇದ್ದ ಶುದ್ಧ ವಾತಾವರಣವನ್ನು ಇಂದು ನಾವು ಕಾಣುತ್ತಿಲ್ಲ. ಹಣ, ಅಧಿಕಾರ ಮುಂತಾದ ಆಕರ್ಷಣೆಗಳಿಲ್ಲದೆ ಸ್ವಾತಂತ್ರ್ಯಕ್ಕಾಗಿ ಹೋರಾಟ ನಡೆಸುವಾಗ ಜನರಲ್ಲಿ ಇದ್ದ ನಿರ್ಮಲ ಮನೋಭಾವದ ಕಲ್ಪನೆಯನ್ನೇ ನಾವು ಈಗ ಮಾಡಲಾರದವರಾಗಿರುವೆವು. ಇನ್ನೂ ಸ್ವಾತಂತ್ರ್ಯವು ತಡವಾಗಿ ಸಿಗುತ್ತಿದ್ದರೆ ಆಗುತ್ತಿತ್ತೇನೋ ಎನ್ನುವಷ್ಟು ಸ್ವಾರ್ಥಪರತೆ ಇಂದು ಬೆಳೆದಿದೆ. ನಿಷ್ಕಾಮನೆಯಿಂದ ಸತ್‌ಕರ್ಮಗಳನ್ನು ಆಚರಿಸುತ್ತ ಹೃದಯ ಶುದ್ಧಿಯ ತುತ್ತ ತುದಿಯನ್ನು ಏರಿದ ಮೇಲೆ

ಧ್ಯಾನಸಾಕ್ಷಾತ್ಕಾರಗಳಿಗೆ ಆತನು ಅರ್ಹನಾಗುವನು.

ಈ ಶ್ಲೋಕದಲ್ಲಿ ನಿರ್ವೇದವೆಂದರೆ ವೈರಾಗ್ಯವಲ್ಲ. ತಾನು ಸಂಪಾದಿಸಿದ ಜ್ಞಾನದಲ್ಲೇ ವೈರಾಗ್ಯವನ್ನು ಹೊಂದಬೇಕೆನ್ನುವ ಅರ್ಥವು ಆಪಾತವಾಗಿ ಕಾಣಿಸುತ್ತದೆ. ವಿಷಯಗಳಲ್ಲಿ ವೈರಾಗ್ಯದ ಬದಲು, ಶಾಸ್ತ್ರೀಯ ಜ್ಞಾನದಲ್ಲಿ ವೈರಾಗ್ಯವನ್ನು ಕೃಷ್ಣನು ಬೋಧಿಸುವನೆ? ಈ ಅರ್ಥ ವಿಚಿತ್ರವೆನಿಸುವುದು.

**ತಸ್ಮಾದ್ಬ್ರಾಹ್ಮಣಃ ಪಾಂಡಿತ್ಯಂ ನಿರ್ವಿದ್ಯ.... ।**

ಎಂದು ಬೃಹದಾರಣ್ಯಕದಲ್ಲಿ ಲಾಭ ಎಂಬ ಅರ್ಥದಲ್ಲಿ ನಿರ್ವೇದ ಶಬ್ದವನ್ನು ಬಳಸಲಾಗಿದೆ. ಅಂತಃಕರಣಶುದ್ಧಿಯಾಗಿ ಅನ್ಯಥಾಜ್ಞಾನವನ್ನು ದಾಟಿದಾಗಲೇ ನಮ್ಮ ಎಲ್ಲ ಅಧ್ಯಯನದ ಲಾಭವನ್ನು ನಾವು ಪಡೆಯುವೆವು ಎಂದು ಇದರ ತಾತ್ಪರ್ಯವಾಗಿದೆ.

ಈ ಪ್ರಕಾರ ಕರ್ಮಾಚರಣೆಯಿಂದ ಜ್ಞಾನವನ್ನು ಪಡೆದವನು ಪುಣ್ಯ ಪಾಪಗಳೆರಡನ್ನೂ ದಾಟುವನು :

**ಬುದ್ಧಿಯುಕ್ತೋ ಜಹಾತೀಹ**
**ಉಭೇ ಸುಕೃತದುಷ್ಕೃತೇ ।**

ಇಲ್ಲಿ ಪುಣ್ಯವನ್ನೂ ತೊರೆಯುತ್ತಾನೆಂಬುದನ್ನು ಕೇಳಿ ಸ್ವಲ್ಪ ಆಶ್ಚರ್ಯವೆನಿಸಬಹುದು. ಸತ್ಕರ್ಮವನ್ನು ಆಚರಿಸುವುದರಿಂದ ಉಂಟಾಗುವ ಭಗವದನುಗ್ರಹವೇ ಪುಣ್ಯ. ಇಂತಹ ಪುಣ್ಯವು ಮುಕ್ತಿಗೆ ಆವಶ್ಯಕವಾಗಿರುವಾಗ ಅದರ ಮೋಚನವನ್ನು ಗೀತೆಯು ಯಾಕೆ ಹೇಳುತ್ತದೆ? ಪುಣ್ಯಗಳಲ್ಲಿ ಎರಡು ಪ್ರಭೇದಗಳಿವೆ. ಪುಣ್ಯಗಳೆಲ್ಲವೂ ಸುಖವನ್ನು ನೀಡುವವಾದರೂ ಕಾಮನೆಯಿಂದ ನಾವು ಮಾಡುವ ಕರ್ಮದ ಫಲವಾಗಿ ಸಾಂಸಾರಿಕ ಸುಖವೇ ದೊರೆಯುತ್ತದೆ. ಇಂತಹ ಪುಣ್ಯಗಳು ಮುಕ್ತಿಯಿಂದ ನಮ್ಮನ್ನು ದೂರ ತಳ್ಳುವುದರಿಂದ ಇವುಗಳನ್ನು ಅನಿಷ್ಟ ಪುಣ್ಯಗಳೆಂದೇ ಕರೆಯುವರು. ನಿಷ್ಕಾಮಕರ್ಮ, ಉಪಾಸನೆ ಇವುಗಳಿಂದ ನಾವು ಪಡೆಯುವ ಪುಣ್ಯಗಳು ಆತ್ಮವಿಕಾಸಕ್ಕೆ ಸಾಧನಗಳಾಗಿ ಮುಕ್ತಿಪಥದಲ್ಲಿ ನಮ್ಮನ್ನು ಕರೆದೊಯ್ಯುವವು. ಅನಿಷ್ಟಪುಣ್ಯಗಳಿಂದ ವಿಮೋಚನೆ ಹೊಂದುವುದು ನಮಗೆ ಅಪೇಕ್ಷಿತವಿರುವು

ದರಿಂದ ಗೀತೆಯು ಅದನ್ನೇ ನಿರೂಪಿಸಿದೆ. ಚುನಾವಣೆಯಲ್ಲಿ ಆರಿಸಿಬಂದು ಮಂತ್ರಿಪದವಿ ಮೊದಲಾದದ್ದು ದೊರೆಯಬೇಕಾದರೆ ಸರಕಾರಿ ನೌಕರಿ, ಸರಕಾರಿ ಕಾಂಟ್ರಾಕ್ಟ್ ಮೊದಲಾದವು ಇರಬಾರದು. ಅವುಗಳನ್ನು ತ್ಯಾಗ ಮಾಡಿಯೇ ಚುನಾವಣೆಗೆ ನಿಲ್ಲಬೇಕಾಗುತ್ತದೆ. ಅನಿಷ್ಟಪುಣ್ಯಗಳೂ ಇವುಗಳಂತೆಯೇ ಮುಕ್ತಿಗೆ ಪ್ರತಿಬಂಧಕಗಳಾಗಿರುವವು.

ಪರೋಕ್ಷಜ್ಞಾನ ಹಾಗೂ ಅಪರೋಕ್ಷಜ್ಞಾನವೆಂದು ಜ್ಞಾನವನ್ನು ಎರಡು ವಿಧವಾಗಿ ನಾವು ಪರಿಗಣಿಸಬೇಕು. ಗುರುಗಳ ಉಪದೇಶದಿಂದ, ಯುಕ್ತಿಯಿಂದ, ಶಾಸ್ತ್ರಗಳಿಂದ ಪಡೆಯುವ ಜ್ಞಾನವು ಪರೋಕ್ಷಜ್ಞಾನ. ಕರ್ಮಾಚರಣೆಯಿಂದ ಈ ಜ್ಞಾನವು ಪರಿನಿಷ್ಠಿತವಾಗುವುದು, ಸುದೃಢವಾಗುವುದು. ಇಂತಹ ಜ್ಞಾನವನ್ನು ಪಡೆದನಂತರ ನಾವು ಭಗವಂತನ ಪ್ರತ್ಯಕ್ಷ ಜ್ಞಾನವನ್ನು ಹೊಂದಬಯಸುವೆವು. ಶಬ್ದ, ಯುಕ್ತಿಗಳ ಸಹಾಯವಿಲ್ಲದೆ ಸಾಕ್ಷಾತ್ ಪರಮಾತ್ಮನನ್ನು ಕಾಣಬೇಕೆಂದು ಹಂಬಲಿಸುವೆವು. ಧ್ಯಾನ, ಸಮಾಧಿಗಳನ್ನು ನಡೆಸಿದರೆ ಈ ಭಗವದ್ ದರ್ಶನವಾಗುವುದು. ಇದನ್ನೇ ಅಪರೋಕ್ಷಜ್ಞಾನವೆಂದೂ ಸಾಕ್ಷಾತ್ಕಾರವೆಂದೂ ಕರೆಯಲಾಗುತ್ತದೆ. ವರೋಕ್ಷಜ್ಞಾನವು ಸುದೃಢವಾಗಿ ನಮ್ಮ ಹೃದಯದಲ್ಲಿ ಬೇರೂರಲು ನಿಷ್ಕಾಮಕರ್ಮವು ಆವಶ್ಯಕವಿದ್ದಂತೆ ಪರೋಕ್ಷಜ್ಞಾನಾನಂತರ ಅಪರೋಕ್ಷಜ್ಞಾನಕ್ಕಾಗಿ ಸಮಾಧಿಯ ಹಿನ್ನೆಲೆಯು ರೂಪಿತವಾಗಲಿಕ್ಕೂ ನಿಷ್ಕಾಮ ಕರ್ಮದ ಆವಶ್ಯಕತೆ ಇದೆ. ವಸ್ತ್ರವನ್ನು ಬರಿ ನೀರಿನಲ್ಲಿ ಮುಳುಗಿಸುವುದರಿಂದ ಅದು ನಿರ್ಮಲವಾಗಲಾರದು; ನೀರಿನಲ್ಲಿ ಮುಳುಗಿಸಿ ಒಗೆಯುವುದರಿಂದಲೇ ಅದು ಸ್ವಚ್ಛವಾಗುವಂತೆ, ಹೃದಯವೂ ನಿರ್ಮಲವಾಗಲು ಬರಿ ಪರೋಕ್ಷಜ್ಞಾನವು ಸಾಲದು. ಪರೋಕ್ಷಜ್ಞಾನವನ್ನು ಪಡೆದು ಅದರ ಜೊತೆಗೆ ನಿಷ್ಕಾಮಕರ್ಮವನ್ನು ಆಚರಿಸಿದಾಗಲೇ ಸಮಾಧಿಗೆ ಬೇಕಾದ ಹೃದಯಪರಿಪಾಕವಾಗುವುದು. ಅನಂತರ ಅಲ್ಲಿ ಭಗವಂತನ ಚಿತ್ರವನ್ನು ಸುಂದರವಾಗಿ ಮೂಡಿಸಬಹುದು. ಹೀಗೆ ಪರೋಕ್ಷಜ್ಞಾನ ಹಾಗೂ ಅಪರೋಕ್ಷಜ್ಞಾನಗಳೆರಡಕ್ಕೂ ನಿಷ್ಕಾಮಕರ್ಮವು ಮುಖ್ಯ ಸಾಧನವಾಗಿರುವುದನ್ನು ನಾವು ಮನಗಾಣಬೇಕು. ಅಪರೋಕ್ಷ ಜ್ಞಾನವಾಗಿ ಬ್ರಹ್ಮದರ್ಶನದ ಪರಮಾನಂದದಲ್ಲಿ ಮಗ್ನನಾದವನಿಗೆ ಹೊರಗಿನ ಪರಿವೆಯೇ ಇರುವುದಿಲ್ಲ. ಬಾಹ್ಯವಾದ ಯಾವುದೇ ಶಬ್ದ ಸ್ಫೋಟಗಳಿಂದ

ಅವನಿಗೆ ಎಚ್ಚರವಾಗಲಾರದು. ಇಂತಹ ವ್ಯಕ್ತಿಯನ್ನು ''ಸ್ಥಿತಪ್ರಜ್ಞ''ನೆಂದು ಕರೆಯುವರು.

## ಸ್ಥಿತಪ್ರಜ್ಞನೂ ಇಂದ್ರಿಯನಿಗ್ರಹವೂ

ಇನ್ನುಮುಂದೆ ಸ್ಥಿತಪ್ರಜ್ಞನ ಬಗ್ಗೆ ವಿಶೇಷ ವಿವರಣೆಯನ್ನು ಭಗವಂತನು ಕೊಡುವನು. ಕಾಮವರ್ಜಿತನೂ ಭಗವದೇಕನಿಷ್ಠನೂ ಆದ ವ್ಯಕ್ತಿಯೇ ಸ್ಥಿತಪ್ರಜ್ಞನು. ರಾಗ-ದ್ವೇಷ, ಭಯ ಮೊದಲಾದ ಮನೋದೋಷಗಳು ಈತನಲ್ಲಿರುವುದಿಲ್ಲ. ಸುಖ-ದುಃಖಗಳೆರಡರಲ್ಲೂ ನಿರ್ವಿಕಾರನಾಗಿರುವನು. ಅಪರೋಕ್ಷಜ್ಞಾನಕ್ಕೆ ಪೂರ್ವಭಾವಿಯಾಗಿಯೂ ಇವೆಲ್ಲ ಸದ್ಗುಣಗಳು ನಮಗೆ ಆವಶ್ಯಕವೇ ಆಗಿವೆ. ಆದರೆ ಸ್ಥಿತಪ್ರಜ್ಞನಲ್ಲಿ ಈ ಗುಣಗಳು ಸ್ವಭಾವಸಿದ್ಧವಾಗಿ ಇರುತ್ತವೆ. ಸಾಧಕರು ಪ್ರಯತ್ನ ಪೂರ್ವಕವಾಗಿ ಈ ಗುಣಗಳನ್ನು ಸಂಪಾದಿಸಬೇಕಾಗಿದೆ. ಮಗು ನಡೆಯಲು ಕಲಿಯುವಾಗ ಬಹಳ ಪ್ರಯಾಸದಿಂದ ನಡೆಯುತ್ತದೆ. ಅದು ದೊಡ್ಡದಾದ ಮೇಲೆ ತಾನು ನಡೆಯುತ್ತೇನೆಂಬ ಕಲ್ಪನೆಯೇ ಇಲ್ಲದಂತೆ ಸಹಜವಾಗಿ ನಡೆಯುತ್ತದೆ. ಈ ಅಂತರವನ್ನು ಸಾಧಕ ಹಾಗೂ ಜ್ಞಾನಿಗಳಲ್ಲಿ ನಾವು ಕಾಣುತ್ತೇವೆ. ಯಾರಲ್ಲಿ ಸಹಜವಾದ ನಡಿಗೆಯಂತೆ ಈ ಸದ್ಗುಣಗಳು ಸ್ವಭಾವಸಿದ್ಧವಾಗಿ ಸೇರಿಕೊಂಡಿವೆಯೋ ಇವುಗಳ ಅವಿಷ್ಕಾರಕ್ಕೆ ಯಾವ ಪ್ರಯತ್ನದ ಆವಶ್ಯಕತೆಯೂ ಇಲ್ಲವೋ ಆತನೇ ಸ್ಥಿತಪ್ರಜ್ಞನು.

ಇಂದ್ರಿಯಗಳ ಮೇಲೆ ಹಿಡಿತವಿರುವುದರಿಂದಲೇ ಯಾವ ಲೌಕಿಕ ಆಕರ್ಷಣೆಗೂ ಒಳಗಾಗದೆ ಕಾಮ, ಕ್ರೋಧ ಮೊದಲಾದ ಉಪದ್ರವಗಳಿಂದ ರಹಿತವಾದ ಜೀವನವನ್ನು ಅವನು ನಡೆಸುತ್ತಾನೆ. ಆಮೆಯು ತನಗೆ ಬೇಕಾದಾಗ ತನ್ನ ಅವಯವಗಳನ್ನು ನಿರಾಯಾಸವಾಗಿ ಒಳಗೆ ಎಳೆದುಕೊಳ್ಳುವಂತೆ ಅವನು ಇಂದ್ರಿಯಗಳನ್ನು ವಿಷಯ ಪದಾರ್ಥಗಳಿಂದ ಯಾವ ಪ್ರಯಾಸವಿಲ್ಲದೇ ಎಳೆದುಕೊಳ್ಳಬಲ್ಲನು. ವೈಷಯಿಕ ಪದಾರ್ಥಗಳ ಸಂಬಂಧವು ಇವನಿಗೆ ಏನೂ ಆತಂಕವನ್ನುಂಟುಮಾಡಲಾರದು. ಹಾಲನ್ನು ನೀರಿನಲ್ಲಿ ಹಾಕಿದರೆ ಮತ್ತೆ ಅದನ್ನು ಪ್ರತ್ಯೇಕಿಸುವುದು ಕಠಿಣವಾದೀತು. ಆದರೆ ಅದೇ ಹಾಲನ್ನು ಹದಗೊಳಿಸಿ ತಯಾರಿಸಿದ ಬೆಣ್ಣೆಯನ್ನು ನೀರಿನಲ್ಲಿ ಹಾಕಿದರೂ ನೀರಿನಿಂದ ಬೇಕಾದಂತೆ

ತೆಗೆಯುವುದು ಏನೂ ಅಶಕ್ಯವಾಗುವುದಿಲ್ಲ. ನಾವು ನಮ್ಮ ಮನಸ್ಸನ್ನು ಒಮ್ಮೆ ಪ್ರಪಂಚದಲ್ಲಿ ಹರಿಸಿಬಿಟ್ಟರೆ ಮತ್ತೆ ಅದು ನಮ್ಮ ಕೈಬಿಟ್ಟಂತೆ. ಪುನಃ ಜಗತ್ತಿನಿಂದ ಅದನ್ನು ಬೇರ್ಪಡಿಸಲಾರೆವು. ಜ್ಞಾನಿಗಳ ಮನಸ್ಸು ಹದಗೊಳಿಸಿದ ನವನೀತ, ಪ್ರಪಂಚದಲ್ಲಿದ್ದರೂ ಅದು ನೀರಿನಲ್ಲಿದ್ದ ಬೆಣ್ಣೆ. ಅವರಿಗೆ ವೈಷಯಿಕ ಸಂಬಂಧವನ್ನು ಹಿಡಿಯುವುದೂ ಬಿಡುವುದೂ ಎರಡೂ ಸುಲಭ. ನಾವಂತೂ ಇಂದ್ರಿಯಗಳನ್ನು ವಿಷಯ ಪದಾರ್ಥಗಳ ಕಡೆಗೆ ಸುಲಭವಾಗಿ ಕಳಿಸುವೆವು. ಆದರೆ ನಮ್ಮ ಇಂದ್ರಿಯಗಳನ್ನು ಭೋಗ ವಸ್ತುಗಳಿಂದ ತಿರುಗಿ ಹಿಂದೆಳೆಯಲು ಸಾಧ್ಯವೇ ಆಗುವುದಿಲ್ಲ. ಇದು ದುರ್ಬಲಚಿತ್ತದ ಪರಿಣಾಮ.

ಅರ್ಜುನ-ಅಶ್ವತ್ಥಾಮರಲ್ಲಿ ಒಮ್ಮೆ ಪರಸ್ಪರ ಯುದ್ಧ ನಡೆಯಿತು. ರಾತ್ರಿಯಲ್ಲಿ ಕಳ್ಳತನದಿಂದ ಶಿಬಿರವನ್ನು ಪ್ರವೇಶಿಸಿ ತನ್ನ ವೀರ ಸೈನಿಕರನ್ನು ಹಾಗೂ ಕುಮಾರರನ್ನು ಕೊಲೆ ಮಾಡಿದ ಅಶ್ವತ್ಥಾಮನ ಜೊತೆಗೆ ಅರ್ಜುನನು ಹೋರಾಡುತ್ತಿದ್ದ. ಅಶ್ವತ್ಥಾಮನು ಎಲ್ಲ ಅಸ್ತ್ರಗಳನ್ನೂ ಪ್ರಯೋಗಿಸಿ ಅರ್ಜುನನನ್ನು ಸೋಲಿಸಲಾರದೆ ಕೊನೆಗೆ ಭಯಂಕರವಾದ ಬ್ರಹ್ಮಾಸ್ತ್ರವನ್ನು ಪ್ರಯೋಗಿಸಿದ. ಅರ್ಜುನನೂ ನಿರುಪಾಯನಾಗಿ ಪ್ರತಿಯಾಗಿ ಬ್ರಹ್ಮಾಸ್ತ್ರವನ್ನೇ ಪ್ರಯೋಗಿಸಿದಾಗ ಈ ಎರಡೂ ಘೋರ ಅಸ್ತ್ರಗಳ ತಿಕ್ಕಾಟದಿಂದ ಪ್ರಪಂಚಕ್ಕೆ ಕ್ಷೋಭೆಯುಂಟಾಯಿತು. ಇದನ್ನು ನಿಲ್ಲಿಸಲು ಶ್ರೀ ವೇದವ್ಯಾಸರು ಈ ಅಸ್ತ್ರವನ್ನು ಹಿಂದೆಗೆದುಕೊಳ್ಳಲು ಇಬ್ಬರಿಗೂ ಆದೇಶ ನೀಡಿದರು. ಅರ್ಜುನನು ತನ್ನ ಅಸ್ತ್ರವನ್ನು ಸುಲಭವಾಗಿ ಉಪಸಂಹಾರ ಮಾಡಿದನು. ಆದರೆ ನೈತಿಕ ಬಲವನ್ನು ಕಳೆದುಕೊಂಡ ಅಶ್ವತ್ಥಾಮನಿಗೆ ಇದು ಸಾಧ್ಯವಾಗದೆ ಅಪಹಾಸ್ಯಕ್ಕೆ ಗುರಿಯಾದನು. ನಾವೂ ಇದೇ ಸ್ಥಿತಿಯಲ್ಲಿ ಇದ್ದೇವೆ. ಇಂದ್ರಿಯಗಳನ್ನು ವಿಷಯಗಳ ಕಡೆಗೆ ಓಡಿಸುವುದು ದೊಡ್ಡದಲ್ಲ. ಅವುಗಳನ್ನು ನಮಗೆ ಬೇಕೆನಿಸಿದಾಗ ಹಿಂದಿರುಗಿಸುವುದರಲ್ಲೇ ನಮ್ಮ ಜೀವನದ ಯಶಸ್ಸು ಅಡಗಿದೆ. ನಮಗೆ ಇಂದ್ರಿಯಗಳ ಮೇಲೆ ಇಂತಹ ಪ್ರಭುತ್ವ ಇಲ್ಲದಿರುವುದರಿಂದ ಅಶ್ವತ್ಥಾಮನ ಕೈಯಲ್ಲಿ ಸಿಕ್ಕ ಬ್ರಹ್ಮಾಸ್ತ್ರದಂತೆ ನಮ್ಮ ಇಂದ್ರಿಯಗಳ ಪ್ರವೃತ್ತಿಯು ಆಗಿರುವುದು. ನಾವು ಅದರ ಮೇಲೆ ಅಧಿಕಾರ ನಡೆಸುವ ಬದಲು ಅದೇ ನಮ್ಮ ಮೇಲೆ ಅಧಿಕಾರ ನಡೆಸುತ್ತದೆ. ಇಂದ್ರಿಯಗಳ ಒಡೆಯರಾಗಬೇಕಾದವರು ಅವುಗಳ ಗುಲಾಮರಾಗುತ್ತೇವೆ.

ವ್ರತ, ಉಪವಾಸಗಳಿಂದ ನಾವೇನೋ ಭೋಗವಸ್ತುಗಳ ಸಂಬಂಧವನ್ನು ಬಿಡಲು ಪ್ರಯತ್ನಿಸುತ್ತೇವೆ. ದೈಹಿಕವಾಗಿ ಆ ವಸ್ತುಗಳ ಸಂಬಂಧವನ್ನು ಕೆಲವೊಮ್ಮೆ ತೊರೆದರೂ ಮಾನಸಿಕವಾಗಿ ಅದನ್ನು ಬಿಡಲು ನಮ್ಮಿಂದ ಆಗುವುದಿಲ್ಲ. ಏಕಾದಶೀ ದಿನ ನಿರ್ಜಲ ಉಪವಾಸವನ್ನು ಮಾಡುವಾಗಲೂ ದ್ವಾದಶೀ ದಿನದ ಅಡಿಗೆಯದೇ ನಮಗೆ ಚಿಂತೆ. ಆಹಾರ ಇಲ್ಲದಾಗ ಇತರ ಇಂದ್ರಿಯಗಳ ಶಕ್ತಿ ಕುಂಠಿತವಾದರೂ ನಾಲಿಗೆಯ ಶಕ್ತಿಯು ಚುರುಕಾಗಿಯೇ ಇರುವುದು. ಮರದ ಶಾಖೆಗಳನ್ನು ಕಡಿದರೂ ಬೇರಿಗೆ ನೀರು ಹಾಕಿದರೆ ಅದು ಚಿಗಿಯುವಂತೆ ನಾಲಿಗೆಯನ್ನು ನಿಯಂತ್ರಿಸದಿದ್ದರೆ ಮಾನಸಿಕ ರಾಗವನ್ನು ನಿಲ್ಲಿಸಲಾಗದು. ನಮ್ಮ ಈ ಬಾಹ್ಯ ಪ್ರಯತ್ನದಿಂದ ತಕ್ಕಮಟ್ಟಿಗೆ ಪ್ರಯೋಜನವಾಗಬಹುದಾದರೂ ಪೂರ್ಣವಾಗಿ ನಮ್ಮ ಮಾನಸಿಕ ರಾಗದ ನಿವೃತ್ತಿಯು ಪರಮಾತ್ಮನ ಸಾಕ್ಷಾತ್ಕಾರದಿಂದಲೇ ಸಾಧ್ಯ. ಪರಮಾತ್ಮನ ದರ್ಶನದಿಂದ ಆಗುವ ಆನಂದದ ಮುಂದೆ ಉಳಿದ ಪ್ರಾಪಂಚಿಕ ಕ್ಷುದ್ರ ಸುಖಗಳಿಗೆ ಎಲ್ಲಿಯ ಮಹತ್ವ? ಜ್ಞಾನಿಯನ್ನು ಈ ಕ್ಷುದ್ರ ಸುಖಗಳ ಆಕರ್ಷಣವು ಏನೂ ವಿಚಲಿತಗೊಳಿಸು ವುದಿಲ್ಲ. ಮಗು ಎಷ್ಟೇ ತಿಂಡಿಪದಾರ್ಥಗಳನ್ನು ಹಿಡಿದುಕೊಂಡಿದ್ದರೂ ಅಗಲಿದ ತಾಯಿಯು ಬಂದಾಗ ಅವನ್ನೆಲ್ಲ ಒಗೆದು ತಾಯಿಯನ್ನು ಅಪ್ಪಿಕೊಳ್ಳುವಂತೆ, ಪರಮಾತ್ಮನ ದರ್ಶನವನ್ನು ಪಡೆದವರಿಗೆ ವಿಷಯ ವಸ್ತುಗಳನ್ನೆಲ್ಲ ದೂರ ಒಗೆಯಲು ಏನೂ ಪ್ರಯಾಸವಾಗಲಾರದು. ಪರಮಾತ್ಮನ ಪ್ರೇಮದ ಮುಂದೆ ಉಳಿದ ವಸ್ತುಗಳು ಬಹಳ ತುಚ್ಛವಾಗಿ ಕಾಣಿಸುತ್ತವೆ. ಭಗವಂತ ಹೇಳುತ್ತಾನೆ:

> ರಸವರ್ಜಂ ರಸೋಽಪ್ಯಸ್ಯ
> ಪರಂ ದೃಷ್ಟ್ವಾ ನಿವರ್ತತೇ ।

ಭಗವತ್‌ಪ್ರೇಮ ಹಾಗೂ ಅವನ ಧ್ಯಾನದಿಂದ ಉಂಟಾಗುವ ಆನಂದದ ಕಲ್ಪನೆಯಿಲ್ಲದೆ ನಾವು ಭೋಗಪದಾರ್ಥಗಳ ಬೆನ್ನುಹತ್ತಿರುವೆವು. ಅವುಗಳನ್ನು ಬಿಟ್ಟು ಪರಮಾತ್ಮನ ಕಡೆಗೆ ದೃಷ್ಟಿಯನ್ನು ಹರಿಸಲು ನಮ್ಮಿಂದ ಆಗುವುದಿಲ್ಲ. ಈ ಶಕ್ತಿಯನ್ನು ಪಡೆಯುವುದಕ್ಕಾಗಿ ಪರಮಾತ್ಮನ ಗುಣಗಳ ಚಿಂತನವನ್ನೂ ವಿಷಯವಸ್ತುಗಳಲ್ಲಿರುವ ದೋಷಗಳ ಸಮಾಲೋಚನೆಯನ್ನೂ ಮಾಡಬೇಕು. ಪರರ ದೋಷಗಳನ್ನು ಚಿಂತಿಸುವ ಬದಲು ನಾವು ಉಪಯೋಗಿಸುವ ಭೋಗ

ಪದಾರ್ಥಗಳಲ್ಲಿ ಇರುವ ದೋಷಗಳನ್ನು ಯಾಕೆ ಚಿಂತಿಸಬಾರದು? ಹೀಗೆ ಪ್ರಪಂಚದಲ್ಲಿ ಪದಾರ್ಥದ ದೋಷವನ್ನು ತಿಳಿಯುವುದರಿಂದ ಅದರಲ್ಲಿ ವೈರಾಗ್ಯವೂ ಭಗವಂತನ ಗುಣಾನುಸಂಧಾನದಿಂದ ದೇವರಲ್ಲಿ ಭಕ್ತಿಯೂ ಸಹಜವಾಗಿ ಮೂಡುವವು.

ನಾವು ವಿಷಯಪದಾರ್ಥಗಳಲ್ಲಿಯೇ ಗುಣಗಳನ್ನು ಕಾಣುತ್ತ ಅವನ್ನೇ ಅತಿಯಾಗಿ ಪ್ರೇಮಿಸುತ್ತೇವೆ. ಜಪಕ್ಕೆ ಕುಳಿತಾಗಲೂ ನಮಗೆ ಭಗವಂತನನ್ನು ಚಿಂತಿಸಲು ಆಗುವುದಿಲ್ಲ. ಕೈಯಲ್ಲಿ ಜಪದ ಮಣಿಗಳೇನೋ ತಿರುಗುತ್ತವೆ. ಮನಸ್ಸು ಮಾತ್ರ ಶ್ರೀಹರಿಯನ್ನು ನೆನೆಯದೆ ಸಂಸಾರಿಕ ವಿಷಯಗಳನ್ನೇ ಆಲೋಚಿಸುತ್ತಿರುವುದು. ಇಂತಹ ವೈಷಯಿಕ ಪ್ರೇಮ, ಧ್ಯಾನಗಳಿಂದ ಅವುಗಳಲ್ಲಿಯೇ ಆಸಕ್ತಿಯು ಮತ್ತೂ ದೃಢವಾಗುವುದು. ಅದನ್ನು ತಡೆಯುವಂಥ ವಿಘ್ನಗಳು ಏನಾದರೂ ಸಂಭವಿಸಿದರೆ ಕ್ರೋಧವೂ ಉಕ್ಕೇರುವುದು. ಈ ಕಾಮ-ಕ್ರೋಧಗಳಿಂದ ಮೋಹಪರವಶನಾದ ವ್ಯಕ್ತಿಗೆ ತನ್ನ ಕರ್ತವ್ಯದ ಸ್ಮರಣೆಯೇ ಇರುವುದಿಲ್ಲ. ಶಾಸ್ತ್ರಗಳು ಹೇಳಿದ ವಿಧಿ, ನಿಷೇಧಗಳನ್ನೆಲ್ಲ ಅವನು ಮರೆಯುತ್ತಾನೆ. ಹೀಗಾಗಿ ಆತನ ವಿವೇಕವೇ ಭ್ರಷ್ಟವಾಗಿ ಸ್ವೇಚ್ಛಾಚಾರಿಯಾಗಿ ವರ್ತಿಸಿ ತನ್ನ ವಿನಾಶವನ್ನೇ ಆಹ್ವಾನಿಸಿಕೊಳ್ಳುವನು. ಪರಮಾತ್ಮನು ಹೇಳುತ್ತಾನೆ:

**ಧ್ಯಾಯತೋ ವಿಷಯಾನ್ ಪುಂಸಃ**
**ಸಂಗಸ್ತೇಷೂಪಜಾಯತೇ ।**
**ಸಂಗಾತ್ ಸಂಜಾಯತೇ ಕಾಮಃ**
**ಕಾಮಾತ್ ಕ್ರೋಧೋಽಭಿಜಾಯತೇ ।**
**ಕ್ರೋಧಾದ್ಭವತಿ ಸಮ್ಮೋಹಃ**
**ಸಮ್ಮೋಹಾತ್ ಸ್ಮೃತಿವಿಭ್ರಮಃ ।**
**ಸ್ಮೃತಿಭ್ರಂಶಾತ್ ಬುದ್ಧಿನಾಶಃ**
**ಬುದ್ಧಿನಾಶಾತ್ ಪ್ರಣಶ್ಯತಿ ॥**

ಹೀಗೆ ವಿಷಯಪದಾರ್ಥಗಳನ್ನು ಪ್ರೀತಿಸಿ ಹಂಬಲಿಸುವುದರಿಂದ ನಮಗೆ ನಮ್ಮ ಮೇಲೆಯೇ ಹಿಡಿತ ತಪ್ಪಿ, ಸಂಭವಿಸುವ ಅನರ್ಥಗಳನ್ನು ನಾವು

ಪರ್ಯಾಲೋಚಿಸಬೇಕು. ರಾಗದ್ವೇಷಗಳು ಇಂದ್ರಿಯಗಳಲ್ಲಿ ಹುದುಗಿರುವ ವಿಷವೆಂದು ಪರಿಗಣಿಸಬಹುದು. ರಾಗದ್ವೇಷಗಳಿಂದ ಕೂಡಿದ ಇಂದ್ರಿಯಗಳು ವಿಷಭರಿತ ಸರ್ಪಗಳಂತೆ ಫೂತ್ಕರಿಸಿ ನಮ್ಮನ್ನು ಕೆಡಹುವವು. ಇದಕ್ಕಾಗಿ ನಾವು ಇಂದ್ರಿಯಗಳನ್ನು ದ್ವೇಷಿಸಬೇಕಿಲ್ಲ. ಅವುಗಳಲ್ಲಿರುವ ಈ ವಿಷದ ಹಲ್ಲುಗಳನ್ನು ಮಾತ್ರ ತೆಗೆಯಬೇಕು. ಹಾವಾಡಿಗರು ವಿಷ ತೆಗೆಸಿದ ಹಾವುಗಳನ್ನು ಬೇಕಾದಂತೆ ಆಡಿಸುತ್ತಾರೆ. ಅದರಂತೆ ರಾಗದ್ವೇಷಗಳನ್ನು ತೊರೆದರೆ ಆ ಇಂದ್ರಿಯಗಳು ನಮಗೆ ಏನೂ ಅಪಾಯಕಾರಿಯಾಗಲಾರವು. ಇದನ್ನು ಹೀಗೆ ಹೇಳಿದ್ದಾರೆ:

ರಾಗದ್ವೇಷವಿಯುಕ್ತೈಸ್ತು ವಿಷಯಾನಿಂದ್ರಿಯೈಶ್ಚರನ್ ।
ಆತ್ಮವಶ್ಯೈರ್ವಿಧೇಯಾತ್ಮಾ ಪ್ರಸಾದಮಧಿಗಚ್ಛತಿ ॥

ಇಂದ್ರಿಯಗಳನ್ನು ನಿಗ್ರಹಿಸುವುದೆಂದರೆ ಅವುಗಳನ್ನು ಹಿಂಸಿಸುವುದಲ್ಲ. ಅವುಗಳ ಶಕ್ತಿಯನ್ನೇ ಕುಂಠಿತಗೊಳಿಸುವುದಲ್ಲ. ಇಂದ್ರಿಯಗಳನ್ನು ಯೋಗ್ಯ ರೀತಿಯಿಂದ ಬಳಸುವುದರಿಂದ, ಯೋಗ್ಯ ವಿಷಯಗಳ ಕಡೆಗೇ ಅವುಗಳನ್ನು ಹರಿಸುವುದರಿಂದ ನಾವು ಇಂದ್ರಿಯನಿಗ್ರಹವನ್ನು ಸಾಧಿಸಿದಂತಾಗುವುದು. ಅಲರ್ಕನೆಂಬ ರಾಜನು ಇಂದ್ರಿಯಗಳನ್ನು ಗೆಲ್ಲಬೇಕೆಂದು ಬಾಣಗಳಿಂದ ಅವುಗಳನ್ನು ಕಿತ್ತೊಗೆಯಲು ಉಪಕ್ರಮಿಸಿದನು. ಆಗ ಇಂದ್ರಿಯಗಳ ಅಭಿಮಾನಿ ದೇವತೆಗಳು ಅವನ ಈ ಹುಚ್ಚು ಕೆಲಸವನ್ನು ತಡೆದು, ''ಇದರಿಂದ ನಿನಗೆ ಏನೂ ಸಾಧನೆಯನ್ನು ಮಾಡಿಕೊಂಡ ಹಾಗೆ ಆಗುವುದಿಲ್ಲ. ಸಾಧನೆ ಮಾಡಲು ಬೇಕಾದ ಸಲಕರಣೆಗಳನ್ನು ಒಡೆದು ಹಾಕುತ್ತಿರುವಿ. ಇಂದ್ರಿಯಗಳನ್ನು ಹೀಗೆ ಕಿತ್ತೊಗೆಯುವುದರಿಂದ ಯಾವ ಜ್ಞಾನ, ಸತ್ಕರ್ಮಗಳಿಗೂ ಅವಕಾಶವಾಗದೆ ನಿನ್ನ ಜೀವನವೇ ವ್ಯರ್ಥವಾಗುವುದು. ಯೋಗ್ಯ ದಾರಿಯಲ್ಲಿ ಇಂದ್ರಿಯಗಳು ಪ್ರವೃತ್ತವಾಗುವಂತೆ ಮಾಡುವುದೇ ನಿಜವಾದ ಇಂದ್ರಿಯ ನಿಗ್ರಹ'' ಎಂದು ಬೋಧಿಸಿದರು.

ಅಂತೂ ಇಂದ್ರಿಯನಿಗ್ರಹದಿಂದ, ಮನೋನಿರೋಧದಿಂದ ಧ್ಯಾನದ ಮಾರ್ಗದಲ್ಲಿ ಮುಂದೆ ನಡೆದು ಅದರಿಂದ ಅಪರೋಕ್ಷ ಜ್ಞಾನವಾಗಿ ಅವರು ಪರಮಶಾಂತಿಯನ್ನು ಪಡೆಯುವರು. ಇದನ್ನು -

.... ನ ಚಾಯುಕ್ತಸ್ಯ ಭಾವನಾ ।
ನ ಚಾಭಾವಯತಃ ಶಾಂತಿಃ .... ॥

ಎಂದು ಪರಮಾತ್ಮನು ತಿಳಿಸಿರುವನು.

## ಸ್ಥಿತಪ್ರಜ್ಞನ ಲೋಕವ್ಯವಹಾರ

ಈ ಅಪರೋಕ್ಷ ಜ್ಞಾನಿಗಳಿಗೂ ಉಳಿದವರಿಗೂ ಇರುವ ಅಂತರವನ್ನು ಒಂದು ಚುಟುಕಾದ ಮಾತಿನಿಂದ ಪರಮಾತ್ಮನು ತಿಳಿಸುತ್ತಾನೆ:

ಯಾ ನಿಶಾ ಸರ್ವಭೂತಾನಾಂ
ತಸ್ಯಾಂ ಜಾಗರ್ತಿ ಸಂಯಮೀ ।
ಯಸ್ಯಾಂ ಜಾಗ್ರತಿ ಭೂತಾನಿ
ಸಾ ನಿಶಾ ಪಶ್ಯತೋ ಮುನೇಃ ॥

''ಸಾಮಾನ್ಯ ಜನರಿಗೆ ಎಲ್ಲಿ ಕತ್ತಲೋ ಅಲ್ಲಿ ಜ್ಞಾನಿಗಳಿಗೆ ಹಗಲು; ಅವರಿಗೆ ಹಗಲಾದದ್ದು ಸಾಮಾನ್ಯ ಜನರಿಗೆ ಕತ್ತಲು''.

ನಮಗೆ ಪ್ರಪಂಚದಲ್ಲಿ ಅತ್ಯಾಸಕ್ತಿ ಇರುವುದರಿಂದ ಅದನ್ನೇ ಯೋಚಿಸುತ್ತಿರುವೆವು. ಅದರಲ್ಲೇ ತಲ್ಲೀನರಾಗಿರುವೆವು. ಹೀಗೆ ನಾವು ಯಾವ ಜಗತ್ತಿನ ಬಗ್ಗೆ ಎಚ್ಚರದಿಂದಿರುವೆವೋ ಸ್ಥಿತಪ್ರಜ್ಞರು ಆ ಪ್ರಪಂಚದ ಕಡೆಗೆ ಗಮನವನ್ನೇ ಕೊಡುವುದಿಲ್ಲ; ವಿಷಯಪದಾರ್ಥಗಳ ಕಡೆಗೆ ಅವರಿಗೆ ಏನೂ ಆಕರ್ಷಣೆ ಇಲ್ಲ. ಅವರಿಗೆ ಆಕರ್ಷಣೆ ಇರುವುದು ಪರಮಾತ್ಮನ ಕಡೆಗೆ. ಅವನನ್ನು ತುಂಬಿದ ಹೃದಯದಿಂದ ಧ್ಯಾನಿಸುವರು. ಇತರ ಭೋಗಪದಾರ್ಥಗಳ ಪರಿವೆಯೇ ಇಲ್ಲ. ಯಾವ ಭಗವಂತನ ವಿಷಯದಲ್ಲಿ ಜ್ಞಾನಿಗಳು ಸದಾ ಜಾಗೃತರಾಗಿರುವರೋ ಆ ಪರಮಾತ್ಮನ ಕಡೆಗೆ ನಮಗೆ ಗಮನವೇ ಇಲ್ಲ. ಆ ಪರವಸ್ತುವನ್ನು ಚಿಂತಿಸಬೇಕೆಂದು ಪ್ರವೃತ್ತಿಸಿ ಧ್ಯಾನ, ಜಪಗಳಿಗೆ ಕುಳಿತರೂ ಇತರ ಪದಾರ್ಥಗಳ ಕಡೆಗೇ ನಮ್ಮ ಮನಸ್ಸು ಹರಿಯುತ್ತದೆ. ಒಂದೇ ಮಾತಿನಲ್ಲಿ ಹೇಳುವುದಾದರೆ, ಸ್ಥಿತಪ್ರಜ್ಞರು ಪರಮಾತ್ಮನಲ್ಲಿ ಭಕ್ತಿಯನ್ನೂ ಪ್ರಪಂಚದಲ್ಲಿ ವೈರಾಗ್ಯವನ್ನೂ ಅಳವಡಿಸಿಕೊಂಡಿದ್ದಾರೆ; ನಾವು ಪ್ರಪಂಚದಲ್ಲಿ ಭಕ್ತಿಯನ್ನೂ ಪರಮಾತ್ಮನಲ್ಲಿ ವೈರಾಗ್ಯವನ್ನೂ ಸಾಧಿಸಿಕೊಂಡಿದ್ದೇವೆ.

ಹೀಗೆ ಲೌಕಿಕ ವಸ್ತುಗಳ ಅಪೇಕ್ಷೆಯಿಲ್ಲದೆ ಭಗವಂತನಲ್ಲೇ ತಲ್ಲೀನವಾದ ಜೀವನವನ್ನು ನಡೆಸಿದ ಈ ಸ್ಥಿತಪ್ರಜ್ಞನಿಗೆ ಪ್ರಪಂಚದ ಭೋಗಭಾಗ್ಯಗಳೇನೂ ಇಲ್ಲವೆ? ಊಟ- ಉಡಿಗೆಗಳಿಲ್ಲದೆ, ಅವನು ಹೇಗೆ ಜೀವಿಸುವನು? ಎನ್ನುವ ಪ್ರಶ್ನೆ ಬರುವುದು. ಇದಕ್ಕೆ ಪರಮಾತ್ಮನು ಹೀಗೆ ಸಮಾಧಾನ ನೀಡುವನು ;

**ಆಪೂರ್ಯಮಾಣಮಚಲಪ್ರತಿಷ್ಠಂ**
**ಸಮುದ್ರಮಾಪಃ ಪ್ರವಿಶಂತಿ ಯದ್ವತ್ ।**
**ತದ್ವತ್ಕಾಮಾ ಯಂ ಪ್ರವಿಶಂತಿ ಸರ್ವೇ**
**ಸ ಶಾಂತಿಮಾಪ್ನೋತಿ ನ ಕಾಮಕಾಮೀ ॥**

ಸಮುದ್ರದಲ್ಲಿ ನದಿಯ ನೀರು ಪ್ರವೇಶಿಸುವಂತೆ ಜ್ಞಾನಿಯು ವಿಷಯ ಪದಾರ್ಥಗಳನ್ನು ಸ್ವೀಕರಿಸುವನು. ಸಮುದ್ರಕ್ಕೆ ನದಿಯ ನೀರು ಬಂದರೂ ಅಷ್ಟೆ, ಬಾರದಿದ್ದರೂ ಅಷ್ಟೆ. ಸಮುದ್ರದಲ್ಲಿ ಯಾವುದೇ ಉದ್ರೇಕವಾಗಲಾರದು. ಅದು ಏಕರೂಪವಾಗಿಯೇ ಇರುವುದು. ಸ್ಥಿತಪ್ರಜ್ಞನು ವಿಷಯ ಪದಾರ್ಥಗಳನ್ನು ಸ್ವೀಕರಿಸಿದರೂ ಅವನಲ್ಲಿ ಏನೂ ವಿಕಾರವಾಗಲಾರದು. ಅದು ಇಲ್ಲದಿದ್ದರೂ ಅವನು ಕೊರಗಲಾರನು. ಸಮುದ್ರದಂತೆ ಆತ ಅಚಲ ಪ್ರತಿಷ್ಠನಾಗಿರುವನು.

**ಭುಂಜಾನೋಽಪಿ ಹಿ ಯಃ ಕಾಮಾನ್**
**ಮರ್ಯಾದಾಂ ನ ತರೇತ್ ಕ್ವಚಿತ್ ।**
**ಸಮುದ್ರವತ್ ಧರ್ಮಮಯೀಂ**
**ನಾಸೌ ಕಾಮೀ ಸ ಉಚ್ಯತೇ ॥**

– ಗೀತಾತಾತ್ಪರ್ಯ

''ಎಷ್ಟೇ ನೀರಿದ್ದರೂ ಸಮುದ್ರ ತನ್ನ ದಡ ಬಿಟ್ಟು ಮೇಲೆ ಬರುವುದಿಲ್ಲ. ಅದರಂತೆ ವೈಷಯಿಕ ವಸ್ತುಗಳನ್ನು ಭೋಗಿಸಿದರೂ ಧರ್ಮದ ಎಲ್ಲೆಯನ್ನು ಮೀರಿ ಜ್ಞಾನಿಯು ನಡೆಯಲಾರ''. ಆತನು ಭಗವಂತನ ಶಿಸ್ತಿನ ಸೇವಕ. ಭಗವಂತನ ಆದೇಶದ ನೀತಿ, ನಿಯಮಗಳನ್ನು ಮೀರದೆ, ಪ್ರಾಪಂಚಿಕ ವಸ್ತುಭೋಗಗಳನ್ನು ಪಡೆದರೂ ಅದರಿಂದ ಅತೀತವಾಗಿರುವ, ನಿರ್ವಿಕಾರ, ಸಂತೃಪ್ತ ಜೀವನಪದ್ಧತಿಯನ್ನು ಜ್ಞಾನಿಯು ಅಳವಡಿಸಿಕೊಂಡಿರುತ್ತಾನೆ. ಆತನು

ಬಯಸದೆ ಇದ್ದರೂ ಸಕಲ ಲೌಕಿಕ ವಸ್ತುಗಳು ತಮ್ಮಷ್ಟಕ್ಕೆ ಅವನ ಕಾಲ ಬುಡಕ್ಕೆ ಬಂದು ಬೀಳುತ್ತವೆ. ಸಮುದ್ರವು ಬಯಸದೆ ಇದ್ದರೂ ಎಲ್ಲ ಭಾಗಗಳಿಂದ ನೀರು ಸಮುದ್ರದ ಕಡೆಗೆ ಧಾವಿಸಿ ಬರುವಂತೆ ಪ್ರಪಂಚದ ಎಲ್ಲ ಭೋಗಭಾಗ್ಯಗಳನ್ನು ಅವನು ಸಹಜವಾಗಿ ಪಡೆಯಬಲ್ಲ. ನಾವು ನೆರಳನ್ನು ಮುಟ್ಟಬೇಕೆಂದು ಪ್ರಯತ್ನಿಸಿದರೂ ಅದು ನಮ್ಮ ಕೈಗೆ ಸಿಗಲಾರದು. ನಾವು ಓಡಿದಂತೆ ಅದೂ ದೂರ ಓಡುವುದು. ಆದರೆ ಅದರ ಆಶೆಯನ್ನು ಬಿಟ್ಟು ಸೂರ್ಯನ ಕಡೆ ಮುಖ ತಿರುಗಿಸಿದರೆ ಅದು ನಾವು ಓಡುವಷ್ಟೇ ವೇಗದಿಂದ ನಮ್ಮನ್ನು ಹಿಂಬಾಲಿಸುವುದು. ವಿಷಯಸುಖವೂ ಇದೇ ತರಹ. ಅದನ್ನು ಬೆಂಬತ್ತಿ ನಾವು ಓಡಿದರೆ ನಮಗೆ ಅದು ಕೊನೆಯವರೆಗೂ ಸಿಗುವುದಿಲ್ಲ. ಅದರ ಆಸೆಯನ್ನು ತೊರೆದು ಪರಮಾತ್ಮನ ಕಡೆಗೆ ಓಡುವಾ. ಸಹಜವಾಗಿ ನಮ್ಮ ಬೆನ್ನ ಹಿಂದೆ ಅವೆಲ್ಲ ಭೋಗವದಾರ್ಥಗಳು ಓಡಿ ಬರುವವು. ಜ್ಞಾನಿಯು ಅವುಗಳನ್ನು ಪಡೆಯಲು ಏನೂ ಶ್ರಮಿಸಬೇಕಿಲ್ಲ. ಅಪ್ರಾರ್ಥಿತವಾಗಿಯೇ ಅವು ಆತನ ಬಳಿ ಸೇರುವವು.

ವಿಭೀಷಣನು ಬ್ರಹ್ಮನಲ್ಲಿ ಏನೂ ವರವನ್ನು ಬೇಡಲಿಲ್ಲ. ರಾವಣ, ಕುಂಭಕರ್ಣರಾದರೋ ಜಗತ್ತನ್ನೇ ಗೆಲ್ಲುವ ಮಹಾಶಕ್ತಿಯನ್ನು ಪಡೆದು ತಮ್ಮ ಸ್ವೇಚ್ಛಾಪ್ರವೃತ್ತಿಗಳನ್ನು ಅಬಾಧಿತವಾಗಿ ನಡೆಸಬೇಕೆಂದು ಹವಣಿಸಿ ಬ್ರಹ್ಮನನ್ನು ಕುರಿತು ತಪಸ್ಸು ನಡೆಸಿದರು. ಯಾರಿಂದಲೂ ತಮ್ಮ ವಧೆಯಾಗದಂತಹ ಶಕ್ತಿಯನ್ನು ಹೊಂದಬೇಕೆಂದು ಅವರ ಆಶೆ. ಕುಂಭಕರ್ಣನು ತನ್ನ ಎದುರು ಪ್ರತ್ಯಕ್ಷನಾದ ಬ್ರಹ್ಮನಲ್ಲಿ ಯಾವುದನ್ನೋ ಕೇಳಬಯಸಿ ಮತ್ತೇನನ್ನೋ ತಪ್ಪಿ ಕೇಳಿ ನಿದ್ರಾತುರನೇ ಆದನು. ಸಕಲ ದೈತ್ಯ, ದೇವತೆಗಳಿಂದ ತಾನು ಅಜೇಯನೂ ಅವಧ್ಯನೂ ಆಗಬೇಕೆಂದು ರಾವಣನು ಬೇಡಿದ. ಈ ವರವನ್ನೇನೋ ಆತ ಪಡೆದ. ಆದರೆ ತನ್ನ ಅಪೇಕ್ಷೆಯಂತೆ ಬದುಕಿ ಉಳಿಯುವುದಾಗಲಿಲ್ಲ. ಮಾನವರೂಪಿಯಾದ ಭಗವಂತನಿಂದ ಆತ ಮರಣವನ್ನು ಅಪ್ಪಿದನು. ಆದರೆ ವಿಭೀಷಣನು ಬ್ರಹ್ಮದೇವರಿಂದ ತನ್ನ ಲೌಕಿಕ ಆಶೆಯನ್ನು ತಣಿಸಲು ಬಯಸಲಿಲ್ಲ. ಧರ್ಮನಿಷ್ಠೆ ಮತ್ತು ಭಗವದ್‌ಭಕ್ತಿಯನ್ನು ಮಾತ್ರ ಬ್ರಹ್ಮದೇವರಲ್ಲಿ ಆತ ಬೇಡಿದ. ಇಂತಹ ನಿರಪೇಕ್ಷ ಭಾವನೆಯ ಭಕ್ತನನ್ನು ಕಂಡು ಬ್ರಹ್ಮದೇವರು ಬಹಳ ಸಂತುಷ್ಟರಾದರು. ಉಳಿದವರಿಬ್ಬರಿಗೂ ದೊರೆಯದ ಮಹಾ ಭಾಗ್ಯವು ವಿಭೀಷಣನಿಗೆ

ದೊರೆಯಿತು. ''ಚಿರಂಜೀವಿಯಾಗಿ ನೀನು ಈ ಜಗತ್ತಿನಲ್ಲಿ ಮೆರೆ'' ಎಂದು ಬ್ರಹ್ಮದೇವರು ಅನುಗ್ರಹಿಸಿದರು. ಇಂದಿಗೂ ಚಿರಂಜೀವಿಗಳಲ್ಲಿ ವಿಭೀಷಣನ ಹೆಸರನ್ನು ಉಚ್ಚರಿಸುತ್ತೇವೆ. ಉಳಿದ ಇಬ್ಬರು ಬಯಸಿದರೂ ಅವರಿಂದ ಪಡೆಯಲಾಗದಿದ್ದ ಮರಣದ ಮೇಲಿನ ವಿಜಯವು ಅದನ್ನು ಆಶಿಸದ ವಿಭೀಷಣನ ಕರಗತವಾಯಿತು. ನಿಷ್ಕಾಮನಾದ ಜ್ಞಾನಿಯು ತಾನು ಬಯಸ ದಿದ್ದರೂ ಸಕಲ ಭೋಗಗಳನ್ನು ಹೀಗೆ ಅನಾಯಾಸವಾಗಿ ಪಡೆಯುವನು.

ಈ ರೀತಿಯಾಗಿ ಭಗವಂತನ ದರ್ಶನವನ್ನು ಪಡೆದ ವ್ಯಕ್ತಿಯು, ಭೋಗ ಲಾಲಸೆಯಿಂದ ಅತೀತವೂ ಭಾಗ್ಯಸಂಪನ್ನವೂ ಪ್ರಸನ್ನವೂ ಆದ ಭಗವನ್ನಿಷ್ಠ ಜೀವನವನ್ನು ನಡೆಸುವನು. ಇದೇ ಬ್ರಾಹ್ಮೀಸ್ಥಿತಿ ಎಂದೆನಿಸುವುದು. ಸತ್ಕರ್ಮಾಚರಣೆಯಿಂದ ಪಡೆದ ಅಂತಃಕರಣಶುದ್ಧಿಯ ಬಾಗಿಲಿನಿಂದ ಧ್ಯಾನ ಸಾಕ್ಷಾತ್ಕಾರಗಳ ಮಾರ್ಗದಲ್ಲಿ ನಡೆದು ಬ್ರಾಹ್ಮೀಸ್ಥಿತಿಯನ್ನು ಹೊಂದಬಹುದು.

ಸ್ಥಿತಪ್ರಜ್ಞನ ವಿಸ್ತಾರವಾದ ವರ್ಣನೆಯ ಜೊತೆಗೆ ಗೀತೆಯ ಎರಡನೆಯ ಅಧ್ಯಾಯದ ಮುಕ್ತಾಯವಾಗುವುದು. ಸಾಧಾರಣ ಪ್ರಾರಂಭದಿಂದ ಅಂತಿಮ ಸ್ಥಿತಿಯನ್ನು ಮುಟ್ಟುವವರೆಗಿನ ಎಲ್ಲ ಮೆಟ್ಟಲುಗಳನ್ನು ಬಹು ಸುಂದರವಾಗಿ ಈ ಅಧ್ಯಾಯದಲ್ಲಿ ವರ್ಣಿಸಲಾಗಿದೆ.

## ಮತ್ತೇಕೆ ಕರ್ಮದ ಜಂಜಾಟ

ಶ್ರೀಕೃಷ್ಣನ ಈವರೆಗಿನ ಉಪದೇಶವನ್ನು ಕೇಳಿದನಂತರ ಅವನ ಮಾತುಗಳಲ್ಲಿ ಕೆಲ ವಿರೋಧಾಭಾಸಗಳು ಅರ್ಜುನನಿಗೆ ಗೋಚರವಾದವು.

**ದೂರೇಣ ಹ್ಯವರಂ ಕರ್ಮ**
**ಬುದ್ಧಿಯೋಗಾತ್ ....।**

ಮುಂತಾದ ಮಾತುಗಳಿಂದ ಜ್ಞಾನಕ್ಕಿಂತ ಕರ್ಮವು ನಿಕೃಷ್ಟವೆಂದು ಸ್ವಾಮಿಯು ಹೇಳಿದ್ದಾನೆ. ಹೀಗಿದ್ದರೂ

**.... ಮಾ ತೇ ಸಂಗೋಽಸ್ತ್ವಕರ್ಮಣಿ ।**
**ಯೋಗಸ್ಥಃ ಕುರು ಕರ್ಮಾಣಿ ....॥**

ಎಂದು ಮುಂತಾಗಿ ಕರ್ಮಗಳನ್ನು ಅವಶ್ಯವಾಗಿ ಆಚರಿಸಬೇಕೆಂದೂ ಹೇಳಿರುವನು. ಜ್ಞಾನವೇ ಶ್ರೇಷ್ಠವೆನ್ನುವುದಾದರೆ, ಆ ಜ್ಞಾನಯೋಗದ ಮಾರ್ಗದಲ್ಲೇ ಏಕೆ ನಡೆಯಬಾರದು? ಈ ಕರ್ಮ ಯೋಗದ ಜಂಜಾಟವೇಕೆ? ಎಂಬ ಸಂದೇಹವು ಸಹಜವಾಗಿ ಮೂಡುವುದು. ''ಒಂದೆಡೆ ಜ್ಞಾನವು ಶ್ರೇಷ್ಠವೆನ್ನುವುದು; ಇನ್ನೊಮ್ಮೆ ಕರ್ಮವನ್ನು ಆಚರಿಸಲೇಬೇಕೆಂದು ಹೇಳುವದು. ಈ ವ್ಯಾಮಿಶ್ರಗಳಾದ ಮಾತುಗಳಿಂದ ನನ್ನ ಬುದ್ಧಿಯನ್ನೇ ವ್ಯಾಮೋಹಗೊಳಿಸುತ್ತಿರುವೆ. ಇಂತಹ ಮೋಹಕ್ಕೆ ಅವಕಾಶವಾಗದಂತಹ ನಿಶ್ಚಿತ ಜ್ಞಾನವನ್ನು ನನಗೆ ನೀಡು'' ಎಂದು ಅರ್ಜುನನು ಪ್ರಶ್ನಿಸುತ್ತಾನೆ.

''ಕರ್ಮವು ನಿಕೃಷ್ಟವೆಂದು ಬೋಧಿಸುವಾಗ ಕೃಷ್ಣನ ಮನಸ್ಸಿನಲ್ಲಿ ಕಾಮ್ಯಕರ್ಮಗಳನ್ನು ನಿಷೇಧಿಸುವುದಿತ್ತು; ನಿಷ್ಕಾಮವಾಗಿ ಕರ್ತವ್ಯಗಳನ್ನು ನಡೆಸಬೇಕೆಂಬುದೇ ಕೃಷ್ಣನ ಆಂತರ್ಯ'' ಎಂದಿಟ್ಟುಕೊಂಡರೂ ಈ ಪ್ರಶ್ನೆ ಇಲ್ಲಿಗೇ ಬಗೆಹರಿಯುವುದಿಲ್ಲ. ನಿಷ್ಕಾಮಕರ್ಮವನ್ನು ಆಚರಿಸಬೇಕೆಂದಿದ್ದರೆ ಯುದ್ಧವನ್ನೇ ಆರಂಭಿಸಬೇಕೆ? ಯುದ್ಧದ ಹೊರತು ಬೇರೆ ಅನೇಕ ವಿಧದ ನಿಷ್ಕಾಮಕರ್ಮಗಳು ಇವೆ. ಶಮದಮಾದಿರೂಪಗಳಾದ ಯತಿಧರ್ಮಗಳು ಎಂದೆಂದಿಗೂ ನಿಷ್ಕಾಮಕರ್ಮಗಳೇ. ಉಳಿದ ಧರ್ಮಗಳು ಅವರವರ ಮನಸ್ಸಿಗೆ ಅನುಸಾರವಾಗಿ ಕೆಲವೊಮ್ಮೆ ಸಕಾಮಗಳೂ ಕೆಲಮೊಮ್ಮೆ ನಿಷ್ಕಾಮಗಳೂ ಆಗಬಲ್ಲವು. ಯಜ್ಞಯಾಗಾದಿಗಳನ್ನು ಕಾಮನೆಯಿಂದಲೂ ಅದನ್ನು ತೊರೆದೂ ಮಾಡಬಹುದು. ಆದರೆ ಯತಿಧರ್ಮವನ್ನು ಆಚರಿಸುವಾಗ ಅಲ್ಲಿ ಕಾಮನೆಗೆ ಪ್ರವೇಶವೇ ಇರುವುದಿಲ್ಲ. ಉಳಿದ ಧರ್ಮಗಳು ವೈಕಲ್ಪಿಕವಾಗಿ ಅಕಾಮ್ಯಗಳಾಗಿದ್ದರೆ ಯತಿಧರ್ಮವು ಕೇವಲ ನಿಷ್ಕಾಮಧರ್ಮವಾಗಿರುವುದು. ಇಂತಹ ಯತಿಧರ್ಮವನ್ನು ಬಿಟ್ಟು ಕಾಮನೆಗಳು ಬಂದು ಇಣಿಕಿ ನೋಡಲು ಸಂದರ್ಭವಿರುವ ಉಳಿದ ಕರ್ತವ್ಯಗಳನ್ನು ಯಾಕೆ ಮಾಡಬೇಕು? ಅದರಲ್ಲೂ ಯುದ್ಧವನ್ನಂತು ನಿಷ್ಕಾಮನೆಯಿಂದ ಮಾಡಲು ಸಾಧ್ಯವೇ ಇಲ್ಲ. ಈ ಯುದ್ಧದಲ್ಲಿ ಮೊದಲಿಂದ ಕೊನೆಯವರೆಗೂ ಹೊಡೆಯುವುದು, ಕೊಲ್ಲುವುದು ಮುಂತಾದ ಭೀಷಣ ಹಿಂಸಾಕೃತ್ಯಗಳೇ ಇರುವವು. ರಾಗದ್ವೇಷಗಳಿಲ್ಲದೆ ಈ ಘೋರಕೃತ್ಯವನ್ನು ನಡೆಸಲು ಸಾಧ್ಯವೆ? ನಿಷ್ಕಾಮನೆಯಿಂದ ಯುದ್ಧವನ್ನು ಆಚರಿಸುವುದೆಂದರೆ

ಕಲ್ಲಿದ್ದಲುಗಣಿಯಲ್ಲಿ ಕೆಲಸ ಮಾಡಿ ಕೈಗೆ ಮಸಿ ಅಂಟಬಾರದೆಂದು ಅಂದು ಕೊಂಡಂತೆ ಅವ್ಯವಹಾರ್ಯವಿರುವುದು. ಕಾಮನೆಯ ಸೋಂಕೂ ಇಲ್ಲದೆ ಮಾಡಲು ಸಾಧ್ಯವಿರುವ ಅನೇಕ ರೀತಿಯ ಸತ್ಕರ್ಮಗಳು ಇರುವಾಗ ಕ್ಷಣಕ್ಷಣ ಗಳಲ್ಲಿ ಕೋಪ, ತಾಪಗಳಿಗೆ ಎಡೆಯಿರುವ ಈ ಭೀಕರ ಕೃತ್ಯದಲ್ಲಿ ತಾನು ಯಾಕೆ ತೊಡಗಬೇಕು? ಸಂನ್ಯಾಸ ವೃತ್ತಿಯನ್ನೇ ತಾನು ಆಚರಿಸುವುದು ಮೇಲಲ್ಲವೆ? - ಎಂದು ಅರ್ಜುನನಿಗೆ ನಾನಾ ಪ್ರಶ್ನೆಗಳು ತಲೆಯೆತ್ತುವವು. ಆದುದರಿಂದಲೇ -

**ತತ್ ಕಿಂ ಕರ್ಮಣಿ ಘೋರೇ ಮಾಂ**
**ನಿಯೋಜಯಸಿ.... ।**

"ಘೋರವಾದ ಯುದ್ಧದ ಕಡೆಗೆ ನನ್ನನ್ನು ಯಾಕೆ ಪ್ರಚೋದಿಸುವೆ?" ಎಂದು ಸ್ವಾಮಿಯನ್ನು ಕೇಳುವನು.

ಒಟ್ಟು ಅರ್ಜುನನು ಇಲ್ಲಿ ಎರಡು ಪ್ರಶ್ನೆಗಳನ್ನು ಪ್ರಸ್ತುತಪಡಿಸುವನು: (೧) ಕರ್ಮಕ್ಕಿಂತ ಜ್ಞಾನವು ಶ್ರೇಷ್ಠವಾಗಿದೆ. ಆದುದರಿಂದ ಕರ್ಮಯೋಗ ಹಾಗೂ ಜ್ಞಾನಯೋಗಗಳಲ್ಲಿ ಜ್ಞಾನಯೋಗವನ್ನೇ ಆರಿಸಿಕೊಂಡು ಕರ್ಮವನ್ನು ತ್ಯಾಗ ಮಾಡಬಹುದಲ್ಲವೆ? (೨) ಕರ್ಮವನ್ನು ಮಾಡುವುದಾದರೂ ನಿಷ್ಕಾಮ ನಿರಪಾಯಗಳಾದ ಯತಿಧರ್ಮಗಳು ಇರುವಾಗ ಈ ಯುದ್ಧವನ್ನೇ ಏಕೆ ಆಚರಿಸಬೇಕು ?

## ಕರ್ಮತ್ಯಾಗವು ಅವ್ಯವಹಾರ್ಯ

ಮೊದಲನೆಯ ಪ್ರಶ್ನೆಗೆ ಶ್ರೀಕೃಷ್ಣನು ನೀಡುವ ಉತ್ತರ ಹೀಗಿದೆ:

ಕರ್ಮವೇ ಸಂಸಾರದ ಬೀಜವಾಗಿದೆ. ಅದರ ತ್ಯಾಗದಿಂದ ಸುಲಭವಾಗಿ ಮುಕ್ತಿಯನ್ನು ಪಡೆಯಬಹುದೆಂದು ಅರ್ಜುನನ ವಾದವಾಗಿದೆ. ಹೀಗಿದ್ದರೆ ಪಶು, ಪಕ್ಷ್ಯಾದಿ ಜನ್ಮಗಳಲ್ಲಿ ಜೀವಿಗಳಿಗೆ ಸಹಜವಾಗಿಯೇ ಮುಕ್ತಿಯು ಏಕೆ ದೊರೆಯುವುದಿಲ್ಲ? ಪಶು-ಪಕ್ಷಿಗಳಿಗೆ ಕರ್ಮದಲ್ಲಿ ಅಧಿಕಾರವೇ ಇರುವುದಿಲ್ಲ. ಅವುಗಳು ಮಾಡುವ ಕರ್ಮಗಳು ಸಂಸಾರಕ್ಕೆ ಕಾರಣಗಳೇ ಅಲ್ಲ. ಹೀಗೆ ತಿರ್ಯಕ್ ಪ್ರಾಣಿಗಳ ಜೀವನದಲ್ಲಿ ಸಂಸಾರ ಬೀಜಗಳಾದ ಕರ್ಮ, ಪಾಪ, ಪುಣ್ಯಗಳಿಗೆ

ಅವಕಾಶವೇ ಇಲ್ಲದಿರುವುದರಿಂದ ಅವುಗಳಿಗೆ ಯಾಕೆ ಮುಕ್ತಿ ದೊರೆಯ ಬಾರದು? ಆದುದರಿಂದ ಬರಿ ನಿಷೇಧಾತ್ಮಕ (Negative) ವ್ಯವಹಾರದಿಂದ ಅರ್ಥಾತ್ ಕರ್ಮತ್ಯಾಗದಿಂದ ಮುಕ್ತಿಯು ದೊರೆಯದೆ ವಿಧಾನಾತ್ಮಕ (Positive) ವ್ಯವಹಾರದಿಂದ, ನಿಷ್ಕಾಮಕರ್ಮದಿಂದಲೇ ಮುಕ್ತಿಯನ್ನು ಹೊಂದಲು ಸಾಧ್ಯವಾದೀತು. ಬರಿ ಕರ್ಮವನ್ನು ಬಿಡುವುದರಿಂದಲೇ ಮುಕ್ತಿ ಎಂಬ ಭಾವದಿಂದ ಸಂನ್ಯಾಸವನ್ನು ಸ್ವೀಕರಿಸುವುದಲ್ಲ. ಮನಸ್ಸು ಏಕಾಗ್ರವಾಗಿ ಭಗವನ್ನಿಷ್ಠವಾಗಿರಲು ಅನುಕೂಲವಾಗುವುದೆಂಬ ವಿಧಾಯಕ ಉದ್ದೇಶ ದಿಂದಲೇ ಸಂನ್ಯಾಸದ ಪದ್ಧತಿಯು ಪ್ರವೃತ್ತವಾಗಿದೆ.

**ನ ಚ ಸಂನ್ಯಸನಾದೇವ**
**ಸಿದ್ಧಿಂ ಸಮಧಿಗಚ್ಛತಿ ।**

ಬರಿ ಸಂನ್ಯಾಸವನ್ನು ಅವಲಂಬಿಸಿ ಕರ್ಮತ್ಯಾಗವನ್ನು ಮಾತ್ರ ಮಾಡುವುದರಿಂದ ಮುಕ್ತಿಯಿಲ್ಲ; ಅಲ್ಲೂ ನಿಷ್ಕಾಮಕರ್ಮ ಹಾಗೂ ಜ್ಞಾನದ ಪ್ರಯತ್ನ ಇವೆರಡೂ ಬೇಕು.

ಕರ್ಮವು ಸಂಸಾರದ ಬೀಜವಾಗಿರುವುದರಿಂದ ಯಾವ ಕರ್ಮವನ್ನೂ ಆಚರಿಸದೆ ಇದ್ದರೆ, ಬೇರು ಕಿತ್ತರೆ ಮರವು ಬೀಳುವಂತೆ, ನಮ್ಮ ಇಡೀ ಸಾಂಸಾರಿಕ ಜೀವನವೇ ಒಮ್ಮೆ ಚಿರವಿಶ್ರಾಂತಿಯನ್ನು ಪಡೆಯಬಹುದಲ್ಲ ಎಂದು ಪ್ರಶ್ನಿಸಬಹುದು. ಆದರೆ ಕರ್ಮದಿಂದ ಪೂರ್ಣ ಬಿಡುಗಡೆ ನಮಗೆ ಎಂದಿಗೂ ಶಕ್ಯವಿಲ್ಲ. ನಾವು ಅದನ್ನು ಬಿಟ್ಟರೂ ಅದು ನಮ್ಮನ್ನು ಅಂಟಿಕೊಂಡೇ ತೀರುವುದು. ಹೊಸ ಕರ್ಮಗಳನ್ನು ನಾವು ಮಾಡದಿದ್ದರೂ ಹಿಂದಿನ ಕರ್ಮಗಳನ್ನು ನಾವು ಭೋಗಿಸಿಯೇ ಅವುಗಳನ್ನು ಮುಕ್ತಾಯಗೊಳಿಸಬೇಕು. ಒಂದು ಕರ್ಮವನ್ನು ಅನುಭವಿಸುವಾಗ ಹತ್ತು ಹೊಸ ಕರ್ಮಗಳು ಸಿದ್ಧವಾಗುತ್ತವೆ. ರಕ್ತಬೀಜನ ಸಂತಾನದಂತೆ ಈ ಕರ್ಮಗಳ ಸಂತಾನವು ಬೆಳೆಯುತ್ತಲೇ ಹೋಗುವುದು. ಒಬ್ಬ ರಕ್ತಬೀಜನು ಸಾಯುವಾಗ ಅವನ ರಕ್ತದಿಂದ ಸಾವಿರಾರು ರಕ್ತಬೀಜರು ಹುಟ್ಟಿದಂತೆ ಒಂದು ಕರ್ಮವನ್ನು ಭೋಗಿಸಿ ಅದನ್ನು ಮುಗಿಸುವಾಗ ನೂರು ಕರ್ಮಗಳು ತಯಾರಾಗುತ್ತವೆ. ಇದಕ್ಕೆ ಪರ್ಯವಸಾನವಿಲ್ಲ. ಆದುದರಿಂದ ಕರ್ಮವನ್ನು ತ್ಯಾಗಮಾಡಿ ಸುಲಭವಾಗಿ ಸಂಸಾರದ ಬೇರನ್ನೇ ಕಿತ್ತು

ಒಗೆಯಬಹುದೆಂದು ಆಲೋಚಿಸುವುದು ಬರಿ ಹುಚ್ಚು ಕಲ್ಪನೆ.

ಇಷ್ಟೇ ಅಲ್ಲದೆ ಕರ್ಮಗಳನ್ನು ಮಾಡದೆ ಸುಮ್ಮನೆ ಇರಲೂ ಸಾಧ್ಯವಿಲ್ಲ. ನಾವು ನಿರಂತರವಾಗಿ ಏನಾದರೊಂದು ಕಾರ್ಯವನ್ನು ಮಾಡುತ್ತಲೇ ಇರುವೆವು. ಉಸಿರಾಡುವುದು ಕೂಡ ಒಂದು ಕಾರ್ಯವೇ. ಅದರಿಂದಲೂ ಅನೇಕ ಹಿಂಸಾಕೃತಿಗಳು ನಡೆಯುವವು. ಕರ್ಮವು ಬಂಧಕ ಹಾಗೂ ಪಾಪಲೇಪಕ್ಕೆ ಕಾರಣವೆಂದು ಕರ್ಮವನ್ನೇ ಪೂರ್ತಿ ಬಿಡಲು ಸಾಧ್ಯವೆ? ಆದ್ದರಿಂದ ಕರ್ಮವನ್ನು ಪೂರ್ತಿಯಾಗಿ ತ್ಯಜಿಸುವುದು ಅಸಾಧ್ಯ ಹಾಗೂ ಅವ್ಯವಹಾರ್ಯವಾಗಿದೆ. ಒಂದು ಪಕ್ಷ ಬಾಹ್ಯಕರ್ಮಗಳನ್ನು ತೊರೆದು ಅರಣ್ಯದಲ್ಲಿ ತಪಸ್ಸಿಗಾಗಿ ಕುಳಿತ ಮಾತ್ರಕ್ಕೆ ಆತನಿಗೆ ಸಿದ್ಧಿಯಾಗುವುದೆ? ಒಳಗೆ ಮನೋದೋಷಗಳನ್ನು ತುಂಬಿಕೊಂಡು ಅರಣ್ಯದಲ್ಲಿ ಕುಳಿತಾದರೂ ಆತ ಮಾಡುವುದೇನು? ಇಂದ್ರಿಯಗಳಿಂದ ಏನೂ ಬಾಹ್ಯ ವ್ಯಾಪಾರವನ್ನು ಮಾಡದೆ ಆತ ಸುಮ್ಮನೆ ಕುಳಿತರೂ ಒಳಗೆ ತನಗೆ ಬೇಕಾದ ಸಾಂಸಾರಿಕ ವಸ್ತುಗಳನ್ನೇ ಚಿಂತಿಸುತ್ತಾನೆ. ಇಂತಹ ಡಂಭಾಚಾರದಿಂದ ಆತನಿಗೆ ಈ ಸಾಂಸಾರಿಕ ಜೀವನದಲ್ಲೂ ಸುಖವಿಲ್ಲ; ಪರಲೋಕದಲ್ಲೂ ಅನಿಷ್ಟವೇ. ಹೀಗೆ ಇಹಪರಗಳೆರಡೂ ಇಲ್ಲದೆ ಆತ ಉಭಯಭ್ರಷ್ಟನಾಗುವನು. ಕರ್ಮಗಳನ್ನು ವರ್ಜಿಸಿ ಅರಣ್ಯಕ್ಕೆ ಹೋದರೂ ಅದು ಫಲಕಾರಿಯಾಗಲು ಮನೋನಿಗ್ರಹವೇ ಅವಶ್ಯವೆಂದಿರುವಾಗ ಅದನ್ನೇ ಪಡೆದು ಸಂಸಾರದಲ್ಲೇ ಏಕಿರಬಾರದು? ಮುಕ್ತಿಗೆ ಕರ್ಮತ್ಯಾಗಕ್ಕಿಂತಲೂ ಮನೋನಿಗ್ರಹವೇ ಮುಖ್ಯವಾಗಿರುವಾಗ ಅದನ್ನೇ ಸಾಧಿಸಿ ಸಂಸಾರದಲ್ಲೇ ಇರುವುದು ಲೇಸಲ್ಲವೇ?

**ದಾಂತಸ್ಯ ಕಿಮರಣ್ಯೇನ ತಥಾಽದಾಂತಸ್ಯ ಭಾರತ ।**
**ಯತ್ರೈವ ನಿವಸೇದ್ದಾಂತಃ ತದರಣ್ಯಂ ಸ ಚಾಶ್ರಮಃ ॥**

– ಮ. ಭಾ. ಶಾಂತಿಪರ್ವ

''ಮನೋನಿಗ್ರಹವಿದ್ದವನಿಗೆ ಅರಣ್ಯ ಏಕೆ? ಮನೋನಿಗ್ರಹವಿಲ್ಲದವನಿಗೂ ಅರಣ್ಯ ಏಕೆ? ನಿಗ್ರಹಶೀಲನು ಎಲ್ಲಿರುವನೋ ಅದೇ ಅರಣ್ಯ; ಅದೇ ಆಶ್ರಮ.'' ಆದುದರಿಂದ ಕರ್ಮತ್ಯಾಗದತ್ತ ಲಕ್ಷ್ಯ ಕೊಡುವುದಕ್ಕಿಂತ ಮನೋನಿಗ್ರಹದ ಕಡೆಗೇ ಗಮನ ಕೊಡುವುದು ಸೂಕ್ತವೆನಿಸುವುದು. ಇಷ್ಟೇ ಅಲ್ಲದೆ ಮನೋ

ನಿಗ್ರಹವನ್ನು ಪಡೆಯಬೇಕಾದರೂ ಕರ್ಮವು ಆವಶ್ಯಕವಾಗಿರುವುದು. ಅದು ಇಲ್ಲದೆ ರಾಗದ್ವೇಷಗಳ ಪರಿಹಾರವಾಗಿ ಮನೋನಿಗ್ರಹವನ್ನು ಹೇಗೆ ಸಾಧಿಸಬಲ್ಲನು? ಹೀಗೆ ಸರ್ವಾತ್ಮನಾ ಕರ್ಮ ಅನಿವಾರ್ಯ ಹಾಗೂ ಆವಶ್ಯಕ ವೆಂದು ಸ್ಪಷ್ಟವಾಗುತ್ತದೆ. ಇದನ್ನೆ;

**ಕರ್ಮೇಂದ್ರಿಯಾಣಿ ಸಂಯಮ್ಯ**
**ಯ ಆಸ್ತೇ ಮನಸಾ ಸ್ಮರನ್ ।**
**ಇಂದ್ರಿಯಾರ್ಥಾನ್ ವಿಮೂಢಾತ್ಮಾ**
**ಮಿಥ್ಯಾಚಾರಃ ಸ ಉಚ್ಯತೇ ॥**

-ಎಂದು ಮುಂತಾದ ಶ್ಲೋಕಗಳಲ್ಲಿ ಪರಮಾತ್ಮನು ತಿಳಿಸಿದ್ದಾನೆ.

## ಕರ್ಮವು ಯಜ್ಞರೂಪವಾಗಿರಲಿ

ಇನ್ನೂ ಒಂದು ಪ್ರಶ್ನೆಯನ್ನು ಬಿಡಿಸಬೇಕಾಗಿದೆ. ಕರ್ಮವು ಬಂಧಕವೆಂದು ಶಾಸ್ತ್ರವು ಸಾರಿ ಹೇಳಿದೆ:

**ಕರ್ಮಣಾ ಬಧ್ಯತೇ ಜಂತುಃ ।**

ಹೀಗೆ ಬಂಧಕವಾಗುವ ಕರ್ಮವನ್ನು ಆಚರಿಸಿಕೊಂಡು ನಾವು ಮುಕ್ತಿಯನ್ನು ಹೇಗೆ ಪಡೆಯುವುದು? ಮುಕ್ತಿವಿರೋಧಿಯಾದ ಕರ್ಮವನ್ನು ಆಚರಿಸುತ್ತ ಮುಕ್ತಿಯನ್ನು ಪಡೆಯಲು ಪ್ರಯತ್ನಿಸುವುದು ದುಃಸಾಹಸವೇ ಆಗುವುದು. ಅಪಥ್ಯವನ್ನು ಆಚರಿಸುತ್ತ ಔಷಧವನ್ನು ಸ್ವೀಕರಿಸುವುದು ಅನುಪಯುಕ್ತವೆನಿಸು ವಂತೆ, ಕರ್ಮಾಚರಣೆಯೊಂದಿಗೆ ನಾವು ಮಾಡುವ ಮುಕ್ತಿಯ ಪ್ರಯತ್ನವೂ ವಿಫಲವೇ ಆಗುವುದು ಎಂಬುದೇ ಈ ಪ್ರಶ್ನೆ -ಇದನ್ನೇ ಮೂರನೇ ಅಧ್ಯಾಯದಲ್ಲಿ ವಿಸ್ತಾರವಾಗಿ ಪರಿಹರಿಸಲಾಗಿದೆ.

ಏನೂ ಆಹಾರವಿಲ್ಲದೆ ಜೀವಿಸಲು ಅಸಾಧ್ಯವಾದುದರಿಂದ ನಾವು ಜೀವಿಸಲು ಏನಾದರೂ ಆಹಾರವನ್ನು ಸ್ವೀಕರಿಸಲೇಬೇಕು. ಯಾವುದೇ ಕೆಟ್ಟ ಆಹಾರವನ್ನು ಸ್ವೀಕರಿಸುವುದರಿಂದ ಶರೀರವು ಕೆಟ್ಟುಹೋಗುವುದೆಂದು ಆಹಾರವನ್ನೇ ಸ್ವೀಕರಿಸದಿದ್ದರೆ ಅದರಿಂದ ಶರೀರವೇ ಅಳಿದು ಹೋಗಬಹುದು.

ಅದಕ್ಕಾಗಿ ಉತ್ತಮ ಪೌಷ್ಟಿಕ ಆಹಾರವನ್ನು ಸ್ವೀಕರಿಸಿಯೇ ಶರೀರವನ್ನು ಪೋಷಿಸಬೇಕು. ಅದರಂತೆ ಕರ್ಮಗಳಿಂದ ಸಂಸಾರಬಂಧನವು ಬಿಗಿಯಾಗುವುದೆಂದು ಕರ್ಮವನ್ನೇ ತ್ಯಜಿಸುವುದಲ್ಲ. ಕೆಟ್ಟ ಕರ್ಮಗಳಿಂದ ಮಾತ್ರ ಈ ಅನರ್ಥವಾಗುವುದು. ಉತ್ತಮ ಭಾವನೆಯಿಂದ ಸತ್‌ಕರ್ಮವನ್ನು ಆಚರಿಸುವುದರಿಂದ ಯಾವ ಕೆಡುಕೂ ಆಗಲಾರದು. ಅಂತಹ ಕರ್ಮವು ಮುಕ್ತಿಗೆ ವಿರೋಧಿಯಾಗಲಿ ಬಂಧಕವಾಗಲಿ ಆಗಲಾರದು. ಅದು ಚೈತನ್ಯಪೋಷಣೆಗೆ, ಆತ್ಮವಿಕಾಸಕ್ಕೆ ಸಹಾಯಕವೇ ಆಗುವುದು. ಆಹಾರದಲ್ಲಿ ಒಳ್ಳೆಯದು ಹಾಗೂ ಕೆಟ್ಟದ್ದನ್ನು ಪರಾಮರ್ಶಿಸಿ ಒಳ್ಳೇ ಆಹಾರವನ್ನು ಸ್ವೀಕರಿಸುವಂತೆ ಇಡೀ ಕರ್ಮವನ್ನೇ ನಾವು ದ್ವೇಷಿಸದೆ ಕರ್ಮಗಳನ್ನು ಪೃಥಕ್ಕರಿಸಿ ಒಳ್ಳೇ ಕರ್ಮವನ್ನು ಆಚರಿಸುವುದರಿಂದಲೇ ಆತ್ಮನ ಪೋಷಣೆ ಇದೆ. ನಮ್ಮ ಆತ್ಮನ ಕಲ್ಯಾಣಮಯ ರೂಪವನ್ನು ಮುಚ್ಚಿಡುವ ಅಜ್ಞಾನದ ಪೆಟ್ಟಿಗೆಯನ್ನು ತೆರೆಯುವ ಬೀಗದ ಕೈಯೇ ಕರ್ಮ ಎನ್ನಬಹುದು. ಬೀಗದ ಕೈಯಿಂದ ಪೆಟ್ಟಿಗೆಯನ್ನು ಮುಚ್ಚಲೂಬಹುದು; ತೆರೆಯಲೂ ಬಹುದು. ಅದರಂತೆ ಕರ್ಮವು ಬಂಧಕವೂ ಎನಿಸಬಹುದು; ಮೋಚಕವಾಗಿಯೂ ಪರಿಣಮಿಸಬಹುದು. ಅದನ್ನು ಮಾಡುವ ದೃಷ್ಟಿಯನ್ನು ಇದು ಅವಲಂಬಿಸಿಕೊಂಡಿದೆ.

ಕರ್ಮಗಳಲ್ಲಿ ಯಾವುದು ಬಂಧಕವೆಂಬುದನ್ನು ಮೊದಲಾಗಿ ನಾವು ಅರಿತುಕೊಳ್ಳಬೇಕು. ಕರ್ಮ-ವಿಕರ್ಮಗಳ ವಿವೇಚನೆಯನ್ನು ಮಾಡಿ, ಯಾವ ಕರ್ಮವು ನಮ್ಮನ್ನು ಸಂಸಾರದ ಕಡೆಗೆ ತಳ್ಳದೆ ಪರಮಾತ್ಮನ ಕಡೆಗೆ ಒಯ್ಯಬಹುದೋ ಅಂತಹ ಸತ್ಕರ್ಮವನ್ನು ಅರಿತುಕೊಂಡು ಅದರಂತೆ ನಡೆಯುವುದರಿಂದ ಜೀವನದಲ್ಲಿ ನಿಜವಾದ ಲಾಭವನ್ನೇ ಪಡೆಯಬಹುದು. ಕರ್ಮದ ಈ ವಿವೇಚನೆಯನ್ನು ಶ್ರೀಕೃಷ್ಣನು ಈ ರೀತಿ ಮಾಡಿರುವನು:

**ಯಜ್ಞಾರ್ಥಾತ್ ಕರ್ಮಣೋಽನ್ಯತ್ರ**
**ಲೋಕೋಽಯಂ ಕರ್ಮಬಂಧನಃ ।**

ಯಜ್ಞವೆಂದರೆ ಭಗವಂತನ ಅಥವಾ ಅವನಿಗಾಗಿ ಮಾಡುವ ತ್ಯಾಗಪೂರ್ವಕವಾದ ಸೇವೆ. ಪರಮಾತ್ಮನ ಉದ್ದೇಶದಿಂದ ಮಾಡುವ ಕರ್ಮವು ಬಂಧಕವಾಗಲಾರದು. ಸ್ವಾರ್ಥದ ಉದ್ದೇಶದಿಂದ ನಡೆಸುವ ಕಾರ್ಯಗಳೇ

ಸಂಸಾರದಲ್ಲಿ ನಮ್ಮನ್ನು ಬಿಗಿಯುವ ಶೃಂಖಲೆಗಳಾಗಬಲ್ಲವು. ಭಗವಂತನ ಪೂಜಾರೂಪವಾಗಿ ನಾವು ಕರ್ಮಗಳನ್ನು ಮಾಡಹೊರಟರೆ, ಅವೇ ನಮ್ಮ ಆತ್ಮಸೌಂದರ್ಯವನ್ನು ಬೆಳಗಿಸುವ ಪುಷ್ಪಹಾರ, ಆಭರಣಗಳಾಗುವವು. ಹಿಂದೆ, ಕರ್ಮವನ್ನು ಆಚರಿಸುವಾಗ ಆಸಕ್ತಿಯನ್ನು ತ್ಯಜಿಸಬೇಕೆಂದು ಹೇಳಿದ್ದರೆ, ಈಗ ಕರ್ಮವನ್ನು ಯಜ್ಞರೂಪವಾಗಿ ಆಚರಿಸಬೇಕೆಂಬ ಹೊಸ ಸಂಗತಿಯನ್ನು ತಿಳಿಸಲಾಗಿದೆ. ತ್ಯಾಗ ಮತ್ತು ಸೇವೆ ಇವೆರಡು ಯಜ್ಞದಲ್ಲಿ ಅಡಕವಾದ ಅಂಶಗಳು. ಭಗವತ್‌ಸೇವಾ ದೃಷ್ಟಿಯಿಂದ ನಮ್ಮಲ್ಲಿರುವ ವಸ್ತುವಿನ ತ್ಯಾಗದೊಂದಿಗೆ ನಡೆಸುವ ಕ್ರಿಯೆಯೇ ಯಜ್ಞವಾಗುವುದು. ಬರಿ ಅಗ್ನಿಯಲ್ಲಿ ಮಾಡುವ ಹೋಮವೇ ಯಜ್ಞವೆಂಬ ಪರಿಮಿತ ಅರ್ಥದಲ್ಲಿ ಈ ಯಜ್ಞಶಬ್ದವನ್ನು ಇಲ್ಲಿ ಬಳಸಲಾಗಿಲ್ಲ. ಯಜ್ಞಶಬ್ದದ ಅರ್ಥದ ವ್ಯಾಪ್ತಿಯನ್ನು ವಿಸ್ತರಿಸಲಾಗಿದೆ. ಭಗವತ್ ಪ್ರೀತಿಯಾಗಲಿ ಎಂಬ ಉದ್ದೇಶದಿಂದ ಅವನ ಪೂಜಾರೂಪವಾಗಿ ಫಲದ ಆಸಕ್ತಿ ಇಲ್ಲದೆ ಮಾಡುವ ಸತ್ಕಾರ್ಯಗಳೆಲ್ಲ ಯಜ್ಞಗಳಾಗುವವು. ಯುದ್ಧವನ್ನು ರಾಗದ್ವೇಷಗಳಿಲ್ಲದೆ ಹೇಗೆ ಮಾಡಲಿ ಎಂಬ ಪ್ರಶ್ನೆಯನ್ನು ಶ್ರೀಕೃಷ್ಣನು ಈ ರೀತಿಯಾಗಿ ಪರಿಹರಿಸಿದ್ದಾನೆ. ಈ ಭಾವನೆಯಿಂದ ಪ್ರೇರಿತನಾಗಿ ಶ್ರೀಹರಿಯ ಪೂಜಾರೂಪವಾಗಿ ಈ ಯುದ್ಧವನ್ನು ಮಾಡುವಾಗ ರಾಗದ್ವೇಷಾದಿಗಳ ಉದಯವಾಗಲು ಅವಕಾಶವೆಲ್ಲಿ? ಸ್ವಾರ್ಥ ಪ್ರೇರಿತನಾಗಿ ಮಾಡುವಾಗ ಮಾತ್ರ ಈ ಮನೋವಿಕಾರಗಳು ತಲೆಯೆತ್ತುವವು. ಅಂತಹ ಕಾಮ್ಯಕರ್ಮಗಳನ್ನು ಮಾತ್ರ

ದೂರೇಣ ಹ್ಯವರಂ ಕರ್ಮ !

ಎಂದು ಶ್ರೀಕೃಷ್ಣ ಪರಮಾತ್ಮನು ನಿಂದಿಸಿರುವುದಾಗಿದೆ. ಯಜ್ಞರೂಪವಾದ ಕರ್ತವ್ಯವನ್ನೇ ಶ್ರೀಕೃಷ್ಣನು ಪ್ರಶಂಸಿಸಿ ಆಚರಿಸಬೇಕೆಂದು ವಿಧಿಸಿರುವುದರಿಂದ ಪರಮಾತ್ಮನ ಉಪದೇಶಗಳಲ್ಲಿ ಯಾವುದೇ ವಿರೋಧ ಅಸಂಗತಿಗಳು ಇಲ್ಲವೆಂಬುದು ಇಲ್ಲಿ ಸ್ಪಷ್ಟವಾಗುವುದು.

## ಪರಸ್ಪರಂ ಭಾವಯಂತಃ

ತ್ಯಾಗ-ಸೇವೆಗಳ ಸಮನ್ವಯರೂಪವಾದ ಯಜ್ಞದೃಷ್ಟಿಯಿಂದ ಈ ಕರ್ತವ್ಯಗಳನ್ನು ಮಾನವರು ಅವಶ್ಯವಾಗಿ ಆಚರಿಸಲೇಬೇಕೆಂಬುದನ್ನು

ಪರಮಾತ್ಮನು ವಿವರಿಸುತ್ತಾನೆ. ಕೃತಜ್ಞತಾದೃಷ್ಟಿಯ ಸಂಕೇತವಾಗಿಯೂ ಜಗಚ್ಚಕ್ರದ ಪ್ರವರ್ತನೆಯ ಉದ್ದೇಶದಿಂದಲೂ ಈ ಕರ್ತವ್ಯವನ್ನು ಜಗತ್ತಿನಲ್ಲಿ ಹುಟ್ಟಿದ ಮಾನವನು ಅವಶ್ಯವಾಗಿ ಆಚರಿಸಲೇಬೇಕಾಗುವುದು. ನಾವು ಪ್ರತಿಕ್ಷಣದಲ್ಲಿ ಪರಮಾತ್ಮನಿಂದ ಹಾಗೂ ದೇವತೆಗಳಿಂದ ಉಪಕೃತರಾಗಿದ್ದೇವೆ. ಭೂಮಿ, ನೀರು, ತೇಜಸ್ಸು, ಗಾಳಿ, ಆಕಾಶ ಮುಂತಾದ ಭಗವಂತನು ಒದಗಿಸಿದ ವಸ್ತುಗಳನ್ನು ನಾವು ಅವಲಂಬಿಸಿಕೊಂಡಿರುತ್ತೇವೆ. ಈ ಸೃಷ್ಟಿಯ ಅಭಿಮಾನಿ ಹಾಗೂ ಅಂತರ್ಯಾಮಿ ದೇವತೆಗಳನ್ನು ಆಧರಿಸಿಯೇ ನಮ್ಮ ಆಹಾರ, ವ್ಯವಹಾರ ಮೊದಲಾದ ಎಲ್ಲ ಪ್ರವೃತ್ತಿಗಳೂ ನಡೆದಿವೆ. ಹೀಗೆ ಜಗನ್ನಿಯಾಮಕವಾದ ಆ ಪರಾತ್ಪರ ಶಕ್ತಿಯಿಂದ ಪ್ರತಿ ಕ್ಷಣವೂ ಪ್ರಯೋಜನ ವನ್ನು ಪಡೆಯುತ್ತಿರುವಾಗ, ಅವನಿಗಾಗಿ ಅವನ ಸೇವಾರೂಪವಾಗಿ ಮಾಡ ಬೇಕಾದ ಕರ್ತವ್ಯಗಳೂ ನಮಗಿವೆ ಎಂಬುದನ್ನು ನಾವು ಅರಿತುಕೊಳ್ಳಬೇಕು. ಈ ಜಗತ್ತಿನ ಒಡೆತನ ಯಾರಿಗಿದೆ? ಯಾವ ವ್ಯಕ್ತಿಗೂ ಸಮಾಜಕ್ಕೂ ಈ ಜಗತ್ತಿನ ಮೇಲೆ ಪ್ರಭುತ್ವವಿಲ್ಲ.

**ಈಶಾವಾಸ್ಯಮಿದಂ ಸರ್ವಮ್ ।**

-ಈಶೋಪನಿಷತ್ತು

ಈ ಜಗತ್ತಿಗೆಲ್ಲ ಒಬ್ಬನೇ ಮಹಾಪ್ರಭು. ಅವನೇ ಶ್ರೀಹರಿ. ಇದೆಲ್ಲವೂ ಅವನ ಸೊತ್ತು. ಅವನ ಸೇವಾರೂಪವಾದ ಕರ್ತವ್ಯವನ್ನು ಮಾಡದೆ ಜಗತ್ತಿನ ವಸ್ತುಗಳನ್ನು ಇಚ್ಛಾನುಸಾರವಾಗಿ ನಾವು ಹೇಗೆ ಭೋಗಿಸಬಲ್ಲೆವು? ಆಗರ್ಭ ಶ್ರೀಮಂತ ನಾದರೂ ಇಂತಹ ಸೇವಾರೂಪವಾದ ಕರ್ತವ್ಯಗಳನ್ನು ಮಾಡದೆ ಆತನಿಗೆ ಈ ವಿಶ್ವದ ವಸ್ತುಗಳನ್ನು ಸ್ವೀಕರಿಸಲು ಅಧಿಕಾರವಿಲ್ಲ. ಕಡುಬಡವನಾದರೂ ಕರ್ತವ್ಯನಿಷ್ಠನಾದರೆ ಅವನಿಗೆ ತನ್ನ ಜೀವನಕ್ಕೆ ಆವಶ್ಯಕವಾದುದನ್ನು ಪಡೆಯಲು ಅಧಿಕಾರವಿದೆ. ಇದನ್ನೇ ಈಶಾವಾಸ್ಯೋಪನಿಷತ್ತಿನಲ್ಲಿ ಹೇಳಿದೆ;

**ಕುರ್ವನ್ನೇವೇಹ ಕರ್ಮಾಣಿ ಜಿಜೀವಿಷೇತ್ ।**

ಸೊತ್ತು ವ್ಯಕ್ತಿಗತವಾಗಿದ್ದರೆ ಆತನು ಅದನ್ನು ತನಗಾಗಿ, ತನ್ನ ಪರಿವಾರದವರಿಗಾಗಿಯೇ ಉಪಯೋಗಿಸುತ್ತಾನೆ. ತನ್ನ ಸಂಚಯವನ್ನು

ಹೆಚ್ಚಿಸಲು ಇತರರನ್ನು ಶೋಷಣೆ ಮಾಡಲು ಆತನು ಹಿಂಜರಿಯುವುದಿಲ್ಲ. ಪಕ್ಷದ ಹಾಗೂ ಒಂದು ಗುಂಪಿನ ಸರ್ವಾಧಿಕಾರವು ಬೆಳೆದು ವ್ಯಕ್ತಿತ್ವದ ದಮನ ಮತ್ತು ಪ್ರಜೆಗಳ ಶೋಷಣೆಯು ನಡೆಯಲು ಅವಕಾಶವಿದೆ. ಎಲ್ಲ ವಸ್ತುಗಳ ಒಡೆತನ ವ್ಯಕ್ತಿಯದೂ ಅಲ್ಲ, ಸರಕಾರದ್ದೂ ಅಲ್ಲ; ಅವೆಲ್ಲವೂ ಪರಮಾತ್ಮನವು ಎಂಬ ಭಾವವು ರೂಢಮೂಲವಾದರೆ ವ್ಯಕ್ತಿತ್ವ ಹಾಗೂ ರಾಷ್ಟ್ರ ಇವೆರಡರ ಪ್ರಗತಿಯು ಸಾಧ್ಯವಾಗುವುದು. ವಿಶ್ವದಲ್ಲಿ ಸತ್ ಪ್ರವೃತ್ತಿಗಳು ಬೆಳೆಯುವವು. ಜಗತ್ತಿಗೆಲ್ಲ ದೇವರೇ ಒಡೆಯನೆಂದು ಭಾವಿಸುವವನು ಆ ವಿಶ್ವಚಾಲಕ ಶಕ್ತಿಯ ನಿಷ್ಠಾವಂತ ನಾಗರಿಕನಾಗಿ ವರ್ತಿಸಲು ಪ್ರಯತ್ನಿಸುವನು. ಅಂತಹ ವ್ಯಕ್ತಿಯು ಭಗವಂತನ ನಿಯಮ-ಆದೇಶಗಳಿಗನುಸಾರವಾಗಿ ದೇವರಿಗೆ ಪ್ರೀತಿಕರವೂ ಲೋಕಹಿತಕಾರಿಯೂ ಆದ ಕರ್ತವ್ಯಮಾರ್ಗದಲ್ಲಿ ಸ್ವಲ್ಪವೂ ವಿಚಲಿತನಾಗದೆ ಮುನ್ನಡೆಯುವನು. ಇಂತಹ ಸತ್ಕರ್ಮಗಳೇ ದೇವರಿಗೆ ನಾವು ಕೊಡಬಹುದಾದ ಆಹಾರ. ಭಗವಂತನಿಂದ ನಾವು ಆಹಾರವನ್ನು ಪಡೆಯುತ್ತಿರುವಾಗ ಪ್ರತಿಯಾಗಿ ನಾವೂ ಅವನಿಗೆ ಪ್ರಿಯವಾದ ಭೋಜ್ಯ ವಸ್ತುವನ್ನು ಕೊಡಬೇಡವೆ? ಲೋಕದಲ್ಲಿ ಧರ್ಮ, ಕರ್ಮಗಳು ಲೋಪವಾದಾಗ ದೇವತೆಗಳು ಬಡವಾಗುತ್ತಾರೆಂದು ಪುರಾಣಗಳಲ್ಲಿ ವರ್ಣಿಸಲಾಗಿದೆ. ಇದರ ಅರ್ಥವೇನು? ನಾವು ಮಾಡುವ ಸತ್ಕರ್ಮಗಳನ್ನು ಪರಮಾತ್ಮನು ಸ್ವೀಕರಿಸುವನು, ದೇವತೆಗಳು ಸ್ವೀಕರಿಸುವರು.

> ಶುಭಂ ಪಿಬತ್ಯಸೌ ನಿತ್ಯಂ
> ನಾಶುಭಂ ಸ ಹರಿಃ ಪಿಬೇತ್ ।

ಇಂತಹ ಸತ್ಕರ್ಮಗಳನ್ನು ನಾವು ಮಾಡುವುದರಿಂದಲೇ ದೇವತೆಗಳಿಗೆ ನಾವು ಆಹಾರ ಒದಗಿಸಿದಂತಾಗುವುದು. ಉತ್ತಮ ಧರ್ಮ, ಕರ್ಮಗಳಿಂದಲೇ ಲೋಕದಲ್ಲಿ ದೈವೀಶಕ್ತಿಯು ಪ್ರವರ್ಧಮಾನವಾಗುವುದು. ಇಂತಹ ಸತ್ಕರ್ಮಗಳು ಲೋಕದಲ್ಲಿ ಶಿಥಿಲವಾದರೆ ದೈವೀಶಕ್ತಿಗೆ ಆಹಾರ ಸಿಗದಂತಾಗಿ ಅದರ ಪೋಷಣೆಯು ನಿಂತುಹೋಗಿ ಲೋಕದಲ್ಲಿ ಆ ಶಕ್ತಿಯು ಕುಂಠಿತವಾಗುವುದು. ಇದರಿಂದ ಲೋಕಕ್ಕೆ ತೀವ್ರ ಹಾನಿ ಇದೆ. ಆದುದರಿಂದ ದೇವತೆಗಳಿಂದ ಉಪಕೃತರಾದ ನಾವು ಅವರಿಗೆ ಇಷ್ಟವಾದ ಆಹಾರವನ್ನು ಸಮರ್ಪಿಸುವುದು ನಮ್ಮ ಕರ್ತವ್ಯವಾಗಿದೆ. ಭಗವಂತನ ಉದ್ದೇಶದಿಂದ ಮಾಡುವ

ಸತ್ಕರ್ಮವೇ ಯಜ್ಞವಾಗಿದ್ದು, ಇದೇ ದೇವತೆಗಳಿಗೆ ನಾವು ನೀಡಬಹುದಾದ ಪರಮ ಪವಿತ್ರ ನೈವೇದ್ಯವಾಗಿದೆ. ಇದರಿಂದಲೇ ಲೋಕದಲ್ಲಿ ದೈವೀಶಕ್ತಿಯು ವಿಜೃಂಭಿತವಾಗಿ ಹಿತವಾತಾವರಣದ ನಿರ್ಮಾಣವಾಗುವುದು :

ಪರಸ್ಪರಂ ಭಾವಯಂತಃ
ಶ್ರೇಯಃ ಪರಮವಾಪ್ಸ್ಯಥ ।

## ಯಜ್ಞ ಮತ್ತು ಜಗಚ್ಚಕ್ರ

ಇಂತಹ ಯಜ್ಞವನ್ನು ಆಚರಿಸುವುದರಿಂದ ವಿಶ್ವಚಕ್ರವೂ ಯೋಗ್ಯ ರೀತಿಯಲ್ಲಿ ನಡೆಯಲು ಅವಕಾಶವಾಗುವುದು. ನಾವು ಮಾಡುವ ಶುಭ, ಅಶುಭ ಕರ್ಮಗಳು ಪ್ರಕೃತಿಯ ಮೇಲೂ ಒಳ್ಳೇ ಹಾಗೂ ಕೆಟ್ಟ ಪರಿಣಾಮವನ್ನು ಬೀರಬಲ್ಲವು. ಲೋಕದಲ್ಲಿ ಏನೂ ಅನಾಹುತ ನಡೆಯದೆ ಶಾಂತಿ ಸುಭಿಕ್ಷೆಗಳು ಉಂಟಾಗಲು ಸತ್ಕರ್ಮಗಳೂ ಕಾರಣವಾಗುವವು. ನಮ್ಮ ಪ್ರತಿಯೊಂದು ಕೃತಿಯೂ ಪ್ರಕೃತಿಯ ಮೇಲೆ ಅವ್ಯಕ್ತವಾಗಿ ಪರಿಣಾಮಗಳನ್ನು ಉಂಟುಮಾಡು ವುದು. ಅಣುವಿಕಿರಣದಿಂದ ಆಗುವ ಪರಿಣಾಮವು ನಮ್ಮ ಸ್ಥೂಲ ದೃಷ್ಟಿಗೆ ಗೋಚರಿಸದಿದ್ದರೂ ಅದರಿಂದ ಆಗುವ ದೂರಗಾಮಿಗಳಾದ ಅನರ್ಥ ಪರಿಣಾಮಗಳನ್ನು ಎಲ್ಲರೂ ಅಂಗೀಕರಿಸುವರು. ಅದರಂತೆ ಸತ್ಕರ್ಮಗಳ ಪ್ರತಿಕ್ರಿಯೆಯೂ ಪ್ರಕೃತಿಯ ಮೇಲೆ ಆಗುವುದೆಂಬ ಶಾಸ್ತ್ರಕಾರರ ವಚನವನ್ನು ನಾವು ಒಪ್ಪದಿರಲು ಕಾರಣವಿಲ್ಲ. ಅಧರ್ಮ, ಅನ್ಯಾಯಗಳು ನಡೆಯು ವಲ್ಲಿಯೂ ಮಳೆ, ಬೆಳೆ ಬರುವುದಿಲ್ಲವೇ ಎಂದು ಕೆಲವರು ಆಕ್ಷೇಪಿಸಬಹುದು. ಡಾಕ್ಟರರ ಸಲಹೆಯನ್ನು ಮೀರಿ ನಡೆದರೂ ಅಪಥ್ಯ ವಸ್ತುಗಳನ್ನು ಭುಂಜಿಸಿದರೂ, ಕೆಲವರು ದೃಢಕಾಯರಾಗಿಯೇ ಇರುವುದಿಲ್ಲವೇ ಎಂಬುದಾಗಿಯೇ ಇದಕ್ಕೆ ನಾವು ಉತ್ತರ ಕೊಡಬೇಕಾಗುತ್ತದೆ. ಒಂದು ಕಾರ್ಯಕ್ಕೆ ಹಲವಾರು ಕಾರಣಗಳಿರುವವು. ಅಂತೆಯೇ ಲೋಕದಲ್ಲಿ ಮಳೆ ಬೆಳೆಗಳು ಬಂದು ಸುಭಿಕ್ಷೆ ನೆಲೆಸಲು ಪ್ರಕೃತಿಯಲ್ಲಿ ಇರುವ ಅನೇಕ ಕಾರಣಗಳಲ್ಲಿ ಸತ್‌ಕರ್ಮಾಚರಣೆಯೂ ಒಂದು ಎನ್ನುವುದರಲ್ಲಿ ಅನೌಚಿತ್ಯವೇನೂ ಇಲ್ಲ.

ಅಂತೂ ನಾವು ಮಾಡುವ ಸತ್‌ಕರ್ಮಗಳಿಂದ ಜಗತ್ತಿನ ಮೇಲೆ ಎರಡು

ವಿಧದ ಪರಿಣಾಮವಾಗುವುದೆಂದು ನಾವು ಒಪ್ಪಬಹುದು. ಒಂದು ಪ್ರಾಕೃತಿಕವಾದರೆ ಇನ್ನೊಂದು ಸಾಮಾಜಿಕ. ಶ್ರೀಹರಿಯ ಉದ್ದೇಶದಿಂದ ನಾವು ಮಾಡುವ ಯಜ್ಞರೂಪವಾದ ಸತ್‌ಕರ್ಮಗಳಿಂದ ದೈವೀಶಕ್ತಿಯು ಜಾಗ್ರತವಾಗಿ ನೀತಿ, ಶೀಲ, ಸದ್ಗುಣಗಳು ಬೆಳೆದು ಅನೀತಿ, ಭ್ರಷ್ಟಾಚಾರಗಳಿಗೆ ಅವಕಾಶವಿಲ್ಲ ವೆಂದಾದರೆ ಜಗತ್ತು ಸಹಜವಾಗಿಯೇ ಸಮೃದ್ಧಿಯ ಕಡೆಗೆ ಸಾಗುವುದು. ಇದು ಯಜ್ಞದಿಂದಾಗುವ ಸಾಮಾಜಿಕ ಪರಿಣಾಮ. ಸಕಾಲದಲ್ಲಿ ಮಳೆ ಬೆಳೆಗಳು ಬಂದು ಯಾವುದೇ ಭೌತಿಕ ಉಪದ್ರವಗಳಿಲ್ಲದೆ ಲೋಕದಲ್ಲಿ ಸುಭಿಕ್ಷೆಯೂ ಆಗುವುದು. ಇದು ಯಜ್ಞದಿಂದಾಗುವ ಪ್ರಾಕೃತಿಕ ಪರಿಣಾಮ. ಇಂದು ಯಜ್ಞದೃಷ್ಟಿ ಇಲ್ಲದೆ ಸ್ವಾರ್ಥಪ್ರವೃತ್ತಿಯೇ ನಮ್ಮಲ್ಲಿ ನೆಲೆಸಿರುವುದರಿಂದ ಇವೆರಡೂ ಸತ್ಪರಿಣಾಮಗಳಿಗೆ ನಾವು ಎರವಾಗಿದ್ದೇವೆ. ದೇವತೆಗಳಿಗೆ ಸತ್ಕರ್ಮಗಳನ್ನು ಅರ್ಪಿಸದೆ ಅವರಿಗೆ ಆಹಾರ ಸಮಸ್ಯೆಯನ್ನು ನಾವು ನಿರ್ಮಿಸಿರುವುದರಿಂದ ನಮಗೂ ಆಹಾರ ಸಮಸ್ಯೆ ಉಂಟಾಗಿದೆ.

ವಿಶ್ವಚಕ್ರದ ಪ್ರವರ್ತನೆಗಾಗಿ ದುಡಿಯುವುದು ಪ್ರಪಂಚದ ಘಟಕರಾಗಿರುವ ನಮ್ಮ ಅವಶ್ಯ ಕರ್ತವ್ಯವಾಗಿದೆ. ನಮ್ಮ ಸತ್‌ಕರ್ಮ ಸದ್‌ವ್ಯವಹಾರಗಳಿಂದ ಪ್ರಾಕೃತಿಕವಾಗಿಯೂ ಸಾಮಾಜಿಕವಾಗಿಯೂ ಉತ್ತಮ ವಾತಾವರಣವು ನೆಲೆಸುವಂತೆ ಪ್ರಯತ್ನಿಸಿ ಜಗಚ್ಚಕ್ರದ ಅಬಾಧಿತವಾದ ಮುನ್ನಡೆಗೆ ನಾವು ಸಹಕಾರಿಗಳಾಗಿ ಸೃಷ್ಟಿಕರ್ತನ ಸೇವೆಯನ್ನು ಸಲ್ಲಿಸಬೇಕು.

**ಏವಂ ಪ್ರವರ್ತಿತಂ ಚಕ್ರಂ ನಾನುವರ್ತಯತೀಹ ಯಃ।**

ಎಂದು ಪರಮಾತ್ಮನು ಈ ವಿಶ್ವಚಕ್ರದ ಪ್ರವರ್ತನೆಯ ಕಾರ್ಯದಲ್ಲಿ ಸಹಕಾರಿಯಾಗದೆ ತನ್ನ ಭೌತಿಕ ಸುಖದಲ್ಲಿಯೇ ಲೋಲುಪನಾದವನ ಜೀವನವು ವ್ಯರ್ಥವೆಂದು ನಿಂದಿಸಿರುವನು. ಪರಮಾತ್ಮನು ಈ ಜಗತ್ತಿಗೆ ನಮ್ಮನ್ನು ಬರೀ ಕೈಯಿಂದ ಕಳಿಸಿಲ್ಲ. ತಂದೆಯು ಮಗನಿಗೆ ಸರಿಯಾಗಿ ಬಂಡವಾಳ ನೀಡಿ ವ್ಯವಹಾರವನ್ನು ಆರಂಭಿಸುವುದಕ್ಕಾಗಿ ಇನ್ನೊಂದು ಊರಿಗೆ ಕಳಿಸುವಂತೆ ಭಗವಂತನೂ ನಮ್ಮನ್ನು ಈ ಪ್ರಪಂಚಕ್ಕೆ ಕಳಿಸಿದ್ದಾನೆ. ಅವನು ನಮಗೆ ನೀಡಿದ ಬಂಡವಾಳವೆಂದರೆ ಈ ಯಜ್ಞದೃಷ್ಟಿ:

**ಸಹಯಜ್ಞಾಃ ಪ್ರಜಾಃ ಸೃಷ್ಟ್ವಾ ।**
**ಅನೇನ ಪ್ರಸವಿಷ್ಯಧ್ವಮ್ ।**

ಈ ಯಜ್ಞದೃಷ್ಟಿಯನ್ನು ಉಪಯೋಗಿಸಿಕೊಂಡು ಐಹಿಕ, ಆಮುಷ್ಮಿಕ, ವೈಯಕ್ತಿಕ, ಸಾಮಾಜಿಕ ಸುಖ-ಹಿತಗಳನ್ನು ಪಡೆಯಿರಿ ಎಂದು ಪರಮಾತ್ಮನು ಇಲ್ಲಿಗೆ ನಮ್ಮನ್ನು ಕಳಿಸಿದ್ದಾನೆ. ಪರಮಾತ್ಮನು, ನಜ್ಜೀವರ ಆತ್ಮವಿಕಾಸಕ್ಕಾಗಿಯೇ ಈ ಸೃಷ್ಟಿಯನ್ನು ಏರ್ಪಡಿಸಿದ್ದಾನೆ. ಆತ್ಮನು ತನ್ನ ಸುಪ್ತವಾದ ಸುಂದರ ವ್ಯಕ್ತಿತ್ವವನ್ನು ಪಡೆಯಲಿ ಎಂಬ ಅಭಿಪ್ರಾಯದಿಂದಲೇ ಈ ಜಗತ್ತನ್ನು ಪರಮಾತ್ಮನು ನಿರ್ಮಿಸಿರುವನು. ಅದಕ್ಕಾಗಿ ಈ ಯಜ್ಞದೃಷ್ಟಿಯೆಂಬ ಪವಿತ್ರ ಸಾಧನವನ್ನು ನಮಗೆ ನೀಡಿರುವನು. ಈ ಸೃಷ್ಟಿಯ ಉದ್ದೇಶವನ್ನು, ಜೀವವಿಕಾಸದ ಬಗ್ಗೆ ಪರಮಾತ್ಮನಿಗೆ ಇರುವ ಈ ಸಂಕಲ್ಪವನ್ನು ನಾವು ಅರಿತುಕೊಂಡು ಅವನ ಉದ್ದೇಶಕ್ಕನುಗುಣವಾಗಿ ಈ ವಿಶ್ವವಿಕಾಸದ ಕಾರ್ಯದಲ್ಲಿ ನಾವೂ ಪಾಲುಗಾರರಾಗ ಬೇಕು. ಈ ಹೊಣೆಗಾರಿಕೆಯನ್ನು ತಿಳಿದುಕೊಳ್ಳದೆ ಸ್ವಾರ್ಥಮಾತ್ರ ಪರಾಯಣ ರಾಗಿ ಈ ಯಜ್ಞರೂಪವಾದ ಕರ್ತವ್ಯವನ್ನು ನಿರ್ವಹಿಸದೆ ನಾವು ದೂರ ಸರಿದರೆ ಅದು ದೇವವಿರೋಧಿಯೂ ವಿಶ್ವವಿಘಾತಕವೂ ಆದ ಪ್ರವೃತ್ತಿ ಎನಿಸುವುದು. ಪರಮಾತ್ಮನಿಂದ ಉಪಕಾರವನ್ನು ಪಡೆದೂ ಅವನ ಈ ವಿಶ್ವಕಾರ್ಯದಲ್ಲಿ ನಾವು ಭಾಗವಹಿಸದೆ ಇರುವುದು ಅಕ್ಷಮ್ಯ ಅಪರಾಧವೂ ಆಗುವುದು.

ಹೀಗೆ ಯಜ್ಞರೂಪವಾದ ಕರ್ತವ್ಯವು ಬಂಧಕವಲ್ಲವೆನ್ನುವುದರ ಜೊತೆಗೆ ಕೃತಜ್ಞತಾಭಾವದಿಂದಲೂ ಲೋಕದ ಪ್ರಾಕೃತಿಕ ಸಾಮಾಜಿಕ ವ್ಯವಸ್ಥೆಯ ರಕ್ಷಣೆಯ ದೃಷ್ಟಿಯಿಂದಲೂ ಇಂತಹ ಕರ್ತವ್ಯವನ್ನು ಆಚರಿಸುವುದು ಅತ್ಯಂತ ಆವಶ್ಯಕವೂ ಅನಿವಾರ್ಯವೂ ಆಗಿದೆ ಎಂಬುದನ್ನು ಇಲ್ಲಿ ಮನಗಾಣಿಸಲಾಗಿದೆ. ಮನುಕುಲದಲ್ಲಿ ಹುಟ್ಟಿದ ಪ್ರತಿಯೊಬ್ಬನೂ ಕರ್ಮವು ಬಂಧಕವೆಂದು ಹೆದರಿ ಕೂಡದೆ ಯಜ್ಞರೂಪವಾಗಿ ಭಗವತ್‌ಸೇವಾದೃಷ್ಟಿಯಿಂದ ಕರ್ತವ್ಯಗಳನ್ನು ಆಚರಿಸಲೇಬೇಕೆಂದು ಗೀತೆಯ ಪ್ರತಿಪಾದನೆ ಇದೆ.

## ದುಷ್ಕರ್ಮವು ಯಜ್ಞವಾಗದು

ಇಲ್ಲಿ ಒಂದು ಸಂಶಯ ಉದ್ಭವಿಸಬಹುದು. ಅಕೃತ್ಯಗಳನ್ನೂ ಪಾಪ

ಕಾರ್ಯಗಳನ್ನೂ ಈ ಯಜ್ಞಭಾವನೆಯಿಂದ ನಡೆಸಿ ಅದರಿಂದ ಬರಬಹುದಾದ ದುಃಖ ಅನರ್ಥಗಳನ್ನು ತಪ್ಪಿಸಿಕೊಳ್ಳಬಹುದೆ? ಯಜ್ಞರೂಪವಲ್ಲದ ಕರ್ಮವು ಬಂಧಕವೆನಿಸುವುದರಿಂದ ಪಾಪಕೃತ್ಯಗಳನ್ನು ಮಾನವನು ಯಜ್ಞರೂಪವಾಗಿಯೇ ಆಚರಿಸಿ ಅದರ ಲೇಪದಿಂದ ಮುಕ್ತನಾಗಿರಬಲ್ಲನೆ? ಎಂದು.

ಪಾಪಕೃತ್ಯಗಳನ್ನು ಯಜ್ಞರೂಪವಾಗಿ ಮಾಡಲು ಸಾಧ್ಯವೇ ಎಂಬುದನ್ನು ನಾವು ಮೊದಲಾಗಿ ವಿಮರ್ಶಿಸಬೇಕು. ರಾಗದ್ವೇಷಗಳ ತ್ಯಾಗ ಹಾಗೂ ಭಗವದ್ಭಕ್ತಿ ಇವೆರಡೂ ಯಜ್ಞದ ಅವಿಭಾಜ್ಯ ಅಂಶಗಳು. ಕರ್ಮವು ಯಜ್ಞರೂಪವಾಗಿರಲು ಈ ಎರಡರ ಸಮಾವೇಶವಾಗಲೇಬೇಕು. ಸುಲಿಗೆ, ಅತ್ಯಾಚಾರ, ವಂಚನೆಗಳಂತಹ ಅನಿಷ್ಟ ಕೃತ್ಯಗಳನ್ನು ರಾಗದ್ವೇಷಗಳಿಲ್ಲದೆ ಮಾಡಲು ಸಾಧ್ಯವೆ? ಭಗವಂತನಲ್ಲಿ ಭಕ್ತಿ ಇದ್ದರೆ ಭಗವಂತನ ನಿಯಮ ಆದೇಶಗಳಿಗೆ ವಿರುದ್ಧವಾದ ಅಕೃತ್ಯಗಳನ್ನು ಮಾಡಿಯೂ ಅದನ್ನು ಭಗವಂತನಿಗೆ ಸಮರ್ಪಿಸುವ ಅವಿವೇಕ ಔದ್ಧತ್ಯಗಳು ಬರಲಾರವು. ಶಾಸ್ತ್ರಾನುಗುಣಗಳಾದ ಲೋಕಹಿತಕಾರಿ ಕಾರ್ಯಗಳನ್ನೇ ನಾವು ಯಜ್ಞಭಾವನೆಯಿಂದ ಆಚರಿಸಬೇಕು. ಶಾಸ್ತ್ರವಿಹಿತಗಳಾದ ಈ ಸತ್ಕಾರ್ಯಗಳೂ ರಾಗದ್ವೇಷ ಮೂಲಕವಾಗಿ ಸ್ವಾರ್ಥಭಾವನೆಯಿಂದ ಆಚರಿಸಲ್ಪಟ್ಟರೆ ಬಂಧಕಗಳಾಗಿಯೇ ಪರಿಣಮಿಸುವವು. ಶಾಸ್ತ್ರನಿಷಿದ್ಧಗಳಾದ ದುಷ್ಕರ್ಮಗಳಂತೂ ಎಂದೆಂದಿಗೂ ಬಂಧಕಗಳೇ. ಅವುಗಳನ್ನು ಸ್ವಾರ್ಥದೃಷ್ಟಿ ಮತ್ತು ಯಜ್ಞದೃಷ್ಟಿ ಇವೆರಡು ಪ್ರಕಾರಗಳಿಂದ ಮಾಡಲು ಸಾಧ್ಯವೇ ಇಲ್ಲ ಎಂಬುದೇ ಗೀತೆಯ ಆಶಯವಾಗಿದೆ.

## ಕರ್ಮದ ವಿನಾಯತಿ

ಪ್ರತಿಯೊಬ್ಬರೂ ಹೀಗೆ ಶಾಸ್ತ್ರವಿಹಿತ ಕರ್ಮಗಳನ್ನು ಮಾಡಲೇಬೇಕಿದ್ದರೆ ಸಮಾಧಿಸ್ಥನ ಗತಿಯೇನು? ಸಮಾಧಿಸ್ಥರು ಹೊರಗಿನ ಪರಿವೆಯೇ ಇಲ್ಲದೆ ಹಲವು ದಿನಗಳವರೆಗೆ ಭಗವಂತನನ್ನು ಏಕಾಗ್ರತೆಯಿಂದ ಧ್ಯಾನ ಮಾಡುವರು. ಸೂರ್ಯೋದಯ, ಸೂರ್ಯಾಸ್ತಗಳ ಕಲ್ಪನೆಯೇ ಅವರಿಗೆ ಇರುವುದಿಲ್ಲ. ಕಾಲಕಾಲಗಳಲ್ಲಿ ಮಾಡಬೇಕಾದ ಯಾವುದೇ ಶಾಸ್ತ್ರೋಕ್ತ ಕಾರ್ಯಗಳನ್ನು ಆಚರಿಸಲು ಅವರಿಗೆ ಸಾಧ್ಯವೇ ಆಗಲಾರದು. ಅವರು ಕರ್ಮಬಾಹಿರರಾಗಿ

ನಿಂದಿತರೆನಿಸುವರೆ? ಈ ಪ್ರಶ್ನೆಯನ್ನು ಶ್ರೀಕೃಷ್ಣನು ಹೀಗೆ ಪರಿಹರಿಸಿದ್ದಾನೆ:

**ಯಸ್ತ್ವಾತ್ಮರತಿರೇವ ಸ್ಯಾ-**
**ದಾತ್ಮತೃಪ್ತಶ್ಚ ಮಾನವಃ ।**
**ಆತ್ಮನ್ಯೇವ ಚ ಸಂತುಷ್ಟಃ**
**ತಸ್ಯ ಕಾರ್ಯಂ ನ ವಿದ್ಯತೇ ॥**

''ಪರಮಾತ್ಮನಲ್ಲೇ ತನ್ಮಯನಾಗಿ ಅವನ ದರ್ಶನದಿಂದ ಅಪೂರ್ವವಾದ ಆನಂದವನ್ನು ಅನುಭವಿಸುತ್ತಿರುವ ಈ ಅಪರೋಕ್ಷಜ್ಞಾನಿಗೆ ಸಮಾಧಿಯ ಸ್ಥಿತಿಯಲ್ಲಿ ಯಾವ ಕರ್ತವ್ಯಗಳ ನಿರ್ಬಂಧವೂ ಇಲ್ಲ'' ಸಮಾಧಿಯಿಂದ ಕೆಳಗೆ ಇಳಿದನಂತರ ಆತನೂ ಕರ್ತವ್ಯದ ನಿಯಮಗಳಿಗೆ ಒಳಗಾಗುವನು. ಪ್ರಕೃತಿ ಸಂಬಂಧವನ್ನೇ ದಾಟಿದ ಮುಕ್ತಜೀವಿಗೂ ಸಮಾಧಿಯ ಅವಸ್ಥೆಯಲ್ಲೇ ಇರುವ ಅಪರೋಕ್ಷಜ್ಞಾನಿಗೂ ಕರ್ತವ್ಯದ ನಿರ್ಬಂಧವಿಲ್ಲ. ಉಳಿದ ನರರೆಲ್ಲರೂ ಭಗವತ್ ಸೇವಾರೂಪವಾದ ಕರ್ತವ್ಯವನ್ನು ಆಚರಿಸಲೇಬೇಕೆಂಬುದು ಗೀತೆಯ ಆಶಯವಾಗಿದೆ.

## ಜ್ಞಾನಿಗೂ ಕರ್ಮದ ನಿರ್ಬಂಧ

ಅಜ್ಞಾನದ ದೆಸೆಯಲ್ಲಿ ಮಾತ್ರ ಕರ್ಮದ ಪ್ರಸಕ್ತಿ ಇರುವುದು; ಜ್ಞಾನದ ದೆಸೆಯಲ್ಲಿ ಕರ್ಮದ ಆವಶ್ಯಕತೆಯೇ ಇಲ್ಲ ಎಂದು ಕೆಲವರ ಪ್ರತಿಪಾದನೆಯಿದೆ. ಗೀತೆಗೆ ಇದು ಸಮ್ಮತವಲ್ಲ. ನಿಷ್ಕಾಮಕರ್ಮದ ಆದರ್ಶವನ್ನು ತಮ್ಮ ಸ್ವಂತ ಆಚರಣೆಯಿಂದ ತೋರಿಸಬಲ್ಲವರೇ ಜ್ಞಾನಿಗಳು. ಕರ್ಮವನ್ನು ಯಜ್ಞರೂಪ ವಾಗಿ ನಡೆಸಲು ಆವಶ್ಯಕವಾದ ಮಾನಸಿಕ ಸ್ಥಿತಿಯನ್ನು ಅವರು ಮಾತ್ರ ಪಡೆದಿರುವರು. ಭಗವಂತನ ದರ್ಶನದಿಂದ ಅತಿಶಯವಾದ ಭಕ್ತಿಭಾವವೂ ಅವರಲ್ಲಿ ಮೂಡಿರುವುದರಿಂದ ಯಾವ ಲೌಕಿಕ ಕಾಮನೆಯೂ ಇಲ್ಲದೆ ಶುದ್ಧಭಾವದಿಂದ ಕರ್ತವ್ಯವನ್ನು ಮಾಡಲು ಅವರೇ ಸಮರ್ಥರು. ಅಂತಹ ಜ್ಞಾನಿಗಳಿಗೇ ಕರ್ಮವಿಲ್ಲವಾದರೆ ಪರಿಪೂರ್ಣ ಕರ್ಮದ ಆದರ್ಶವನ್ನು ಜಗತ್ತಿನ ಮುಂದೆ ಯಾರು ಇಡಬಲ್ಲರು? ನಿತ್ಯಮುಕ್ತನೂ ವಿಧಿನಿಷೇಧಗಳಿಗೆ ಅತೀತನೂ ಆದ ಭಗವಂತನೇ ಲೋಕ ವ್ಯವಸ್ಥಾಪನೆಗಾಗಿ, ಜಗತ್ತಿಗೆ ಕರ್ಮಯೋಗದ

ಉತ್ತಮ ಆದರ್ಶವನ್ನು ತೋರಿಸುವುದಕ್ಕಾಗಿ ಸ್ವತಃ ತಾನು ಕರ್ತವ್ಯವನ್ನು ಆಚರಿಸುವಾಗ ಉಳಿದವರ ಪಾಡೇನು?

**ನ ಮೇ ಪಾರ್ಥಾಸ್ತಿ ಕರ್ತವ್ಯಂ ತ್ರಿಷು ಲೋಕೇಷು ಕಿಂಚನ ।**
**ನಾನವಾಪ್ತಮವಾಪ್ತವ್ಯಂ ವರ್ತ ಏವ ಚ ಕರ್ಮಣಿ ॥**

''ನಾನು ಪರಿಪೂರ್ಣಕಾಮನಾಗಿದ್ದರೂ ನನಗೆ ಯಾವುದೇ ಕರ್ತವ್ಯದ ನಿರ್ಬಂಧವಿಲ್ಲದಿದ್ದರೂ ನಾನು ಕರ್ತವ್ಯವನ್ನು ಮಾಡುತ್ತಿರುವೆನು.'' ಅರ್ಜುನನೂ ಸಾಧಾರಣ ವ್ಯಕ್ತಿಯಲ್ಲ. ಇಂದ್ರದೇವರ ಅವತಾರನಾಗಿರುವ ಮಹಾನುಭಾವನಾದ ಅರ್ಜುನನೂ ಮಹಾಜ್ಞಾನಿಯೇ. ಅಪರೋಕ್ಷ ಜ್ಞಾನವಿಲ್ಲದೆ ದೇವತ್ವ ಲಭಿಸಲಾರದು. ಅಂತಹ ಜ್ಞಾನಿಗೇ ಶ್ರೀಕೃಷ್ಣನು ಕರ್ತವ್ಯದ ಆದೇಶವನ್ನು ಗೀತೆಯಲ್ಲಿ ನೀಡುತ್ತಿದ್ದಾನೆ. ಇದರಿಂದ ಕರ್ಮಯೋಗವು- ಜ್ಞಾನಿಗಳಿರಲಿ ಅಜ್ಞಾನಿಗಳಿರಲಿ-ಸಕಲ ವ್ಯಕ್ತಿಗಳಿಗೂ ಆವಶ್ಯಕವೆಂದೇ ಗೀತೆಯ ಆಶಯವಾಗಿದೆ. ಪರಮಾತ್ಮನು ನಿರ್ಮಿಸಿದ ಸಾಧನಕ್ಷೇತ್ರವಾದ ಈ ಪ್ರಪಂಚವು ಸತ್ಯವಾಗಿದೆ. ಈ ಸಾಧನಭೂಮಿ ಕೇವಲ ಭ್ರಮೆ ಅಲ್ಲ. ಜ್ಞಾನವು ಬಂದಕೂಡಲೇ ಸ್ವಪ್ನ ಪ್ರಪಂಚದಂತೆ ಈ ಜಗತ್ತು ಕರಗಿ ಹೋಗುವುದೂ ಇಲ್ಲ. ನಮ್ಮನ್ನು ಪರಮಾತ್ಮನ ಕಡೆಗೆ ಒಯ್ಯುವ ಸೇತುವೆಯೇ ಈ ಪ್ರಪಂಚವಾಗಿದೆ. ಆದುದರಿಂದ ಜ್ಞಾನವು ಬಂದಕೂಡಲೇ ಸ್ವಪ್ನರಾಜ್ಯದಂತೆ ಪ್ರಪಂಚದ ನಿವೃತ್ತಿಯೇ ಆಗುವುದರಿಂದ ಜ್ಞಾನಿಗಳಿಗೆ ಜಗತ್ತೇ ಕಾಣಲೊಲ್ಲದು; ಅವರು ಹೇಗೆ ಕರ್ಮವನ್ನು ಆಚರಿಸಬೇಕು ಎನ್ನುವ ಸಂದೇಹಕ್ಕೆ ಎಡೆಯೇ ಇರುವುದಿಲ್ಲ. ಜ್ಞಾನ ಹಾಗೂ ಅಜ್ಞಾನ ಈ ಎರಡೂ ದೆಸೆಯಲ್ಲಿ ಆಚರಣೆಯನ್ನು ವಿಧಿಸುವ ಗೀತೆಗೆ ಜಗತ್ತು ಹಾಗೂ ಕರ್ಮದ ಅಸತ್ಯತೆಯ ಕಲ್ಪನೆಯು ಎಂದಿಗೂ ಸಮ್ಮತವಲ್ಲ. ಈಶ್ವರನನ್ನು ನಿರಾಕರಿಸಿದಂತೆ ಸಾಧನರಂಗವಾದ ಜಗತ್ತನ್ನು ನಿರಾಕರಿಸುವುದೂ ನಾಸ್ತಿಕ್ಯವಾದವೆಂದೇ ಗೀತೆಯ ಅಭಿಪ್ರಾಯವಿದೆ:

**ಅಸತ್ಯಮಪ್ರತಿಷ್ಠಂ ತೇ**
**ಜಗದಾಹುರನೀಶ್ವರಮ್ ।**

ಪರಮಾತ್ಮನ ದರ್ಶನವಾದ ಕೂಡಲೇ ಜ್ಞಾನಿಗೆ ಜಗತ್ತೇ ಕಣ್ಮರೆಯಾಗುವುದಾದರೆ ಪರಮಾತ್ಮನ ವಿಚಾರವನ್ನು ಜನತೆಗೆ ಮುಟ್ಟಿಸುವ

ಪ್ರವಾದಿಗಳನ್ನೇ ನಾವು ಅಲ್ಲಗಳೆದಂತಾಗುವುದು. ಆತ್ಮದರ್ಶನವಾಗಿದ್ದರೆ ಜಗತ್ತು ಅವರಿಗೆ ಕಾಣಲಾರದಷ್ಟೆ? ಆದರೆ ಜ್ಞಾನಿಗಳೂ, ಜೀವನ್ಮುಕ್ತರೂ ಜಗತ್ತಿನಲ್ಲಿ ಇದ್ದು ಕರ್ತವ್ಯ ಮತ್ತು ಉಪದೇಶಗಳನ್ನು ನಡೆಸಿರುವುದರಿಂದ ಜ್ಞಾನದ ನಂತರವೂ ಜಗತ್ತಿಗೆ ಅಸ್ತಿತ್ವವಿದೆಯೆನ್ನುವುದನ್ನು ಒಪ್ಪಲೇಬೇಕು. ಜ್ಞಾನಿಗಳು ಉಳಿದವರಿಗೆ ಉತ್ತಮ ಆದರ್ಶವನ್ನು ತೋರಿಸುವುದಕ್ಕಾಗಿಯೂ ಮುಕ್ತಿಯಲ್ಲಿ ತಮ್ಮ ಸ್ವರೂಪಾನಂದದ ಹೆಚ್ಚಿನ ಅಭಿವ್ಯಕ್ತಿಗಾಗಿಯೂ ಕರ್ತವ್ಯವನ್ನು ಮುಕ್ತಿ ಪರ್ಯಂತವಾಗಿ ಆಚರಿಸುತ್ತಾರೆ. ಏಣಿಯ ಮೇಲಿನ ತುದಿಗೆ ತಲುಪಿದರೂ ಅಲ್ಲಿಯೇ ನಿಂತು ಚಿಕ್ಕ ಹುಡುಗರನ್ನು ಮೇಲೆ ಏರಿಸಲು ಪ್ರಯತ್ನಿಸುವಂತೆ ಜ್ಞಾನಿಗಳು ಕರ್ಮದ ಏಣಿಯಲ್ಲೇ ಇದ್ದು ನಮ್ಮನ್ನು ತಮ್ಮ ಬಳಿಗೆ ಕರೆದೊಯ್ಯಲು ಉಪಕ್ರಮಿಸುವರು.

## ಜ್ಞಾನಿ - ಅಜ್ಞಾನಿಗಳ ಅಂತರ

ಅಜ್ಞಾನಿಗಳಂತೆ ಜ್ಞಾನಿಗಳು ಕರ್ತವ್ಯವನ್ನು ಆಚರಿಸಿದರೂ ಅವರಿಬ್ಬರ ಕಾರ್ಯದಲ್ಲಿ ಬಹಳ ಅಂತರವಿರುವುದು. ಪರಮಾತ್ಮನ ಪರಮ ಸುಂದರ, ಮಂಗಳಮಯ ರೂಪವನ್ನು ಕಂಡ ಜ್ಞಾನಿಗಳಿಗೆ ಬೇರೆ ವಸ್ತುಗಳಲ್ಲಿ ಪ್ರೀತಿ, ಕಾಮನೆಗಳೇ ಉದಯಿಸಲಾರವು. ಅವರ ಪ್ರೇಮವೆಲ್ಲ ಪರಮಾತ್ಮನಲ್ಲೇ ಕೇಂದ್ರೀಕೃತವಾಗಿರುವುದು. ಆದುದರಿಂದ ಆಸಕ್ತಿ, ಕಾಮನೆಗಳು ಅವರ ಬಳಿ ಸುಳಿಯಲು ಸಾಧ್ಯವೇ ಇಲ್ಲ. ಹೀಗೆ ಅವರು ಪರಿಪೂರ್ಣ ರೀತಿಯಿಂದ ನಿಷ್ಕಾಮಕರ್ಮವನ್ನು ಆಚರಿಸಬಲ್ಲರು. ಹೊರಗಿಂದ ನೋಡುವಾಗ ಜ್ಞಾನಿ, ಅಜ್ಞಾನಿಗಳ ಕರ್ಮದಲ್ಲಿ ಭೇದವೇ ತೋರಲಾರದು. ಒಳಹೊಕ್ಕು ನೋಡಿದರೆ ಅವುಗಳಿಗೆ ವಿಶೇಷ ಅಂತರವಿರುವುದನ್ನು ಕಾಣಬಲ್ಲೆವು. ಎರಡು ಸರೋವರಗಳು ಮೇಲಿನಿಂದ ನೋಡುವಾಗ ಒಂದೇ ರೀತಿ ಇರಬಹುದು. ಆದರೆ ಒಳಗೆ ಇಳಿದರೆ ಒಂದರಲ್ಲಿ ನೀರಿಗಿಂತ ಹೆಚ್ಚು ಕೆಸರೇ ಇರಬಹುದು. ಇನ್ನೊಂದು ಆಳವಾದ ನೀರಿನಿಂದ ಸ್ವಚ್ಛಗಂಭೀರವಾಗಿ ಇರಬಹುದು. ಜ್ಞಾನಿ, ಅಜ್ಞಾನಿಗಳ ಸ್ಥಿತಿಯೂ ಹೀಗೆಯೇ. ಬಾಹ್ಯ ದೃಷ್ಟಿಯಲ್ಲಿ ಇಬ್ಬರ ಕ್ರಿಯೆಗಳಲ್ಲಿ ಹೋಲಿಕೆ ಇರಬಹುದು. ಈ ಹೊರಗಿನ ಕ್ರಿಯೆಯಿಂದ ಒಬ್ಬನ ವ್ಯಕ್ತಿತ್ವವನ್ನು ಅಳೆಯಲು ಸಾಧ್ಯವಿಲ್ಲ.

ಒಳಗೆ ಮನಸ್ಸಿನಲ್ಲಿ ಕೆಸರೇ ತುಂಬಿದ್ದರೆ ಬರಿ ಈ ಬಾಹ್ಯಕರ್ಮಗಳಿಂದ ಆತ ಮಹತ್ತ್ವವನ್ನು ಪಡೆಯಲಾರ. ಎಷ್ಟು ಕಾರ್ಯ ಮಾಡಿದೆವೆನ್ನುವುದಕ್ಕಿಂತ ಹೇಗೆ ಮಾಡಿದ್ದೇವೆ ಎಂಬುದು ಹೆಚ್ಚು ಮಹತ್ತ್ವದ್ದು. ದೊಡ್ಡ ಪ್ರಮಾಣದಿಂದ ದಾನದ ಸಂಭ್ರಮವನ್ನು ನಡೆಸುವ ಶ್ರೀಮಂತನಿಗಿಂತ ತನ್ನಲ್ಲಿರುವ ಅಲ್ಪ ಪದಾರ್ಥವನ್ನು ಶುದ್ಧಭಾವದಿಂದ ನೀಡುವ ಬಡವನ ದಾನವೇ ಹೆಚ್ಚು ತ್ಯಾಗಪೂರ್ಣವಾಗ ಬಲ್ಲದು. ವ್ಯಕ್ತಿಯ ಬಾಹ್ಯ ವ್ಯಾಪಾರಕ್ಕಿಂತ ಅವನ ಮನಸ್ಸಿನ ಹಿನ್ನೆಲೆಯನ್ನು ನೋಡಿ ಅವನ ಕರ್ಮವನ್ನು ನಾವು ಅಳೆಯಬೇಕು.

ಮಹಾಭಾರತದಲ್ಲಿ ಒಂದು ಮನೋಜ್ಞವಾದ ಕಥೆ ಇದೆ. ದುರ್ಭಿಕ್ಷೆಯ ಕಾಲದಲ್ಲಿ ಒಮ್ಮೆ ಆಹಾರದ ಕೊರತೆ ವಿಶೇಷವಾಗಿತ್ತು. ಆಗ ನಾಲ್ಕು ಜನರಿದ್ದ ಒಂದು ಬಡ ಕುಟುಂಬದ ಯಜಮಾನನು ಅನೇಕ ದಿನಗಳ ಉಪವಾಸದ ನಂತರ ಸ್ವಲ್ಪ ಹಿಟ್ಟನ್ನು ಸಂಗ್ರಹಿಸಿ ಒಂದು ದಿನ ಭೋಜನಕ್ಕೆ ಅಣಿಯಾಗಿದ್ದನು. ಆಗ ಧರ್ಮದೇವತೆಯು ಇವನ ನಿಷ್ಠೆಯನ್ನು ಪರೀಕ್ಷಿಸಲು ಅತಿಥಿಯಾಗಿ ಇವನ ಮನೆಗೆ ಆಗಮಿಸಿದನು. ಯಜಮಾನನು ಅವನನ್ನು ಸ್ವಾಗತಿಸಿ ಭೋಜನಕ್ಕೆ ಆಮಂತ್ರಿಸಿದನು. ಆತನು ತನ್ನ ಪಾಲಿನ ಅನ್ನವನ್ನು ನೀಡಿದರೂ ಈ ಅತಿಥಿಗೆ ತೃಪ್ತಿಯಾಗಲಿಲ್ಲ. ಯಜಮಾನನ ಪತ್ನಿ, ಮಗ, ಸೊಸೆ ಮೂವರೂ ತಮ್ಮ ಉಪವಾಸದ ಶ್ರಮವನ್ನು ಗಣನೆಗೆ ತಾರದೆ ತಮ್ಮ ಪಾಲಿನ ಆಹಾರವನ್ನು ಅಹಮಹಮಿಕೆಯಿಂದ ಅತಿಥಿಗೆ ಸಮರ್ಪಿಸಿದರು. ಧರ್ಮದೇವತೆಯು ಈ ಬಡ ಕುಟುಂಬದ ತ್ಯಾಗವನ್ನು ಕಂಡು ಸುಪ್ರಸನ್ನನಾಗಿ ಇವರನ್ನು ಅನುಗ್ರಹಿಸಿದನು. ಅವರು ಈ ಹಿಟ್ಟನ್ನು ದಾನಮಾಡುವಾಗ ಬಿಟ್ಟಿರುವ ನೀರಿನಲ್ಲಿ ತನ್ನ ಮೈಯನ್ನು ಅದ್ದಿಕೊಂಡಾಗ ಒಂದು ಮುಂಗುಸಿಯ ಅರ್ಧ ಭಾಗವು ಬಂಗಾರವಾಯಿತು. ಉಳಿದ ಅರ್ಧ ಭಾಗವೂ ಬಂಗಾರವಾಗಬೇಕೆಂದು, ರಾಜ ಮಹಾರಾಜರು ಮಾಡಿದ ಯಜ್ಞಗಳ ಅವಭೃಥದ ನೀರಿನಲ್ಲಿ ಮಿಂದರೂ ಆ ಭಾಗವು ಬಂಗಾರವಾಗಲಿಲ್ಲವಂತೆ. ಕರ್ಮದ ಬಾಹ್ಯ ಪ್ರಮಾಣಕ್ಕಿಂತಲೂ ಒಳಗಿನ ತ್ಯಾಗ ಹಾಗೂ ಶುದ್ಧ ಭಾವಗಳಿಂದಲೇ ಕರ್ಮದ ಮಹತ್ತ್ವವು ಹೆಚ್ಚುವುದು ಎನ್ನುವುದಕ್ಕೆ ಈ ಕಥೆಯು ನಿದರ್ಶನವಾಗಿದೆ. ಜ್ಞಾನಿಗಳು ಮಾಡುವ ಕರ್ಮವು ಸಾಮಾನ್ಯ ಜನರ ಕಾರ್ಯಗಳಿಗಿಂತ ಎಷ್ಟೋ ಪಾಲು ಮಿಗಿಲಾಗಿರುವುದು. ಜ್ಞಾನಿ,

ಅಜ್ಞಾನಿಗಳ ಈ ಅಂತರವನ್ನು ತಿಳಿದುಕೊಂಡು ನಾವು ಜ್ಞಾನಿಗಳ ದಾರಿಯಲ್ಲಿ ನಡೆಯಲು ತುಂಬು ಹೃದಯದ ಪ್ರಯತ್ನವನ್ನು ಮಾಡಬೇಕು.

## ಜ್ಞಾನ - ಕರ್ಮಗಳ ಸಮನ್ವಯ

ಪ್ರತಿಯೊಬ್ಬರೂ ಕರ್ಮವನ್ನು ಆಚರಿಸಬೇಕು; ಅದು ಇಲ್ಲದೆ ಮುಕ್ತಿಯನ್ನು ಪಡೆಯಲು ಸಾಧ್ಯವೇ ಇಲ್ಲವೆಂಬ ಮಾತಿನ ಬಗ್ಗೆ ಕೆಲವರು ಆಕ್ಷೇಪಿಸುವುದುಂಟು. ಮುಕ್ತಿಗೆ ಕರ್ಮಯೋಗ; ಜ್ಞಾನಯೋಗಗಳೆಂದು ಎರಡು ದಾರಿಗಳನ್ನು ಶಾಸ್ತ್ರವು ಹೇಳಿದೆ. ಸನಕಾದಿಗಳು ಜ್ಞಾನದಿಂದಲೂ ಜನಕಾದಿಗಳು ಕರ್ಮದಿಂದಲೂ ಮುಕ್ತಿಯನ್ನು ಪಡೆದಿರುವರು. ಹೀಗೆ ಇವೆರಡೂ ಸ್ವತಂತ್ರಮಾರ್ಗಗಳಿರುವಾಗ ಎಲ್ಲರೂ ಕರ್ಮವನ್ನು ಆಚರಿಸ ಬೇಕೆಂಬ ನಿರ್ಬಂಧವೇಕೆ? ಕರ್ಮವನ್ನು ಆಚರಿಸದೆಯೇ ಜ್ಞಾನಯೋಗ ದಿಂದಲೂ ಮುಕ್ತಿಯನ್ನು ಪಡೆಯಬಹುದಲ್ಲವೇ ಎಂಬುದೇ ಈ ಆಕ್ಷೇಪಣೆ.

ಇದನ್ನು ಶ್ರೀಮದಾಚಾರ್ಯರು ಗೀತಾತಾತ್ಪರ್ಯದಲ್ಲಿ ವಿವೇಚಿಸಿ ಪರಿಹಾರವನ್ನು ನೀಡಿರುವರು. ಜ್ಞಾನಯೋಗದಲ್ಲಿ ಕರ್ಮವೇ ಇಲ್ಲ ಎನ್ನುವುದಾದರೆ, ಕರ್ಮಯೋಗದಲ್ಲೂ ಜ್ಞಾನವು ಇಲ್ಲವೆನ್ನಬೇಕಾಗುವುದು. ಜ್ಞಾನವಿಲ್ಲದ ಶುಷ್ಕ ಕರ್ಮಾಚರಣೆಯಿಂದ ಮುಕ್ತಿಯನ್ನು ಪಡೆಯಲು ಸಾಧ್ಯವೆ? ಕರ್ಮಯೋಗದಲ್ಲಿ ಜ್ಞಾನವು ಸೇರಿಕೊಂಡಿರುವಂತೆ ಜ್ಞಾನಯೋಗದಲ್ಲಿ ಕರ್ಮದ ಸಮಾವೇಶವು ಇದ್ದೇ ಇರುವುದು. ಜ್ಞಾನಿಯಲ್ಲಿ ಕರ್ಮದ ಪ್ರಮಾಣವು ಹೆಚ್ಚಿದ್ದರೆ ಆತನನ್ನು ಕರ್ಮಯೋಗಿಯೆಂದೂ ಕರ್ಮದ ಪ್ರಮಾಣವು ಕಡಿಮೆ ಇರುವಾಗ ಆತನನ್ನು ಜ್ಞಾನಯೋಗಿಯೆಂದೂ ಕರೆಯಲಾಗುವುದು. ನೀರನ್ನು ತರಬೇಕೆಂದು ಕೇಳಿಕೊಂಡಾಗ ಒಂದು ಪಾತ್ರೆಯಲ್ಲಿ ನೀರನ್ನು ತರಲಾಗುತ್ತದೆ. 'ತಾನು ಪಾತ್ರೆಯನ್ನು ತರಲು ಹೇಳಿಲ್ಲ; ನೀರನ್ನು ಮಾತ್ರ ಕೇಳಿದಾಗ ನೀರಿನ ಜೊತೆಗೆ ಪಾತ್ರೆಯನ್ನು ಯಾಕೆ ತಂದಿರುವೆ' ಎಂದು ಯಾರಾದರೂ ಆಕ್ಷೇಪಿಸುವರೆ? ಪಾತ್ರೆಯು ಇಲ್ಲದೆ ನೀರನ್ನು ಹೇಗೆ ತರುವುದು? ಅದರಂತೆ ಕರ್ಮದ ಹಿನ್ನೆಲೆ ಇಲ್ಲದೆ ಜ್ಞಾನವೂ ಪ್ರಕಟವಾಗಲಾರದು. ಆತ್ಮದ ಆವಿರ್ಭಾವಕ್ಕೆ ಶರೀರದ ಹಿನ್ನೆಲೆಯು ಅವಶ್ಯವಿದ್ದಂತೆ, ಕರ್ಮವಿಲ್ಲದೆ ಜ್ಞಾನದ

ಪ್ರಾದುರ್ಭಾವವೂ ಇಲ್ಲ. ಕರ್ಮವಿಲ್ಲದ ಜ್ಞಾನವು ಹೆಳವನಂತಿದ್ದರೆ ಜ್ಞಾನವಿಲ್ಲದ ಕರ್ಮ ಕುರುಡೇ ಆಗಿರುವುದು. ಅವೆರಡರ ಸಮಾವೇಶವಿಲ್ಲದೆ ಜೀವನವು ಸರ್ವಾಂಗಸುಂದರವಾಗಲಾರದು. ಅಂತೂ ಜ್ಞಾನಯೋಗಿ ಇರಲಿ, ಕರ್ಮಯೋಗಿ ಇರಲಿ; ಜ್ಞಾನಿ ಇರಲಿ, ಅಜ್ಞಾನಿ ಇರಲಿ; ಎಲ್ಲರಿಗೂ ಕರ್ಮವು ಅವಶ್ಯಪ್ರಾಪ್ತವೆಂಬುದನ್ನು ಮನಗಾಣಿಸಿ, ಪೂರ್ತಿಯಾಗಿ ಕರ್ಮವನ್ನು ತ್ಯಜಿಸುವ ವಾದವನ್ನು ಅವ್ಯವಹಾರ್ಯವೂ ಅನರ್ಥಕಾರಿಯೂ ಎಂದು ಗೀತೆಯು ಪ್ರತಿಪಾದಿಸಿದೆ.

## ಸ್ವಧರ್ಮೇ ನಿಧನಂ ಶ್ರೇಯಃ

ಇನ್ನು ಅರ್ಜುನನ

> **ತತ್ಕಿಂ ಕರ್ಮಣಿ ಘೋರೇ ಮಾಂ**
> **ನಿಯೋಜಯಸಿ.... ।**

ಎಂಬ ಪ್ರಶ್ನೆ ಉಳಿದಿದೆ. ಕರ್ಮದ ಪ್ರಮಾಣವು ಕಡಿಮೆಯಾಗಿರುವ ಸನಕಾದಿಗಳ ಜ್ಞಾನಯೋಗದ ಮಾರ್ಗವಿರುವಾಗ ಯುದ್ಧದ ಈ ಕಠೋರ ಮಾರ್ಗವನ್ನು ಯಾಕೆ ತಾನು ಆರಿಸಬೇಕು? ಅರಣ್ಯದಲ್ಲಿ ಶಾಂತನಾಗಿದ್ದು ಜಪ, ತಪಸ್ಸು ಮುಂತಾದ ಕರ್ಮಗಳನ್ನು ಆಚರಿಸಿಕೊಂಡು ಹಾಯಾಗಿ ಯಾಕೆ ಇರಬಾರದು ಎಂದು ಅರ್ಜುನನು ಮಾಡಿದ ಪ್ರಶ್ನೆಗೆ ಉತ್ತರ ಕೊಡುವುದು ಉಳಿದಿದೆ.

ಇದಕ್ಕೆ ಗೀತೆಯ ಸಮಾಧಾನವು ಹೀಗಿದೆ : ಪ್ರತಿಯೊಬ್ಬನಿಗೂ ಅನೇಕ ಕರ್ತವ್ಯಮಾರ್ಗಗಳು ತೋರಬಹುದು. ಅವುಗಳಲ್ಲಿ ಯಾವುದು ತನ್ನ ಸ್ವಧರ್ಮ ವೆಂಬುದನ್ನು ಅರಿತುಕೊಂಡು ಆ ಮಾರ್ಗದಲ್ಲಿ ನಡೆಯುವುದರಲ್ಲೇ ಅವನ ಪುರುಷಾರ್ಥ ಅಡಗಿದೆ. ವ್ಯಕ್ತಿಯ ಸ್ವರೂಪ, ಯೋಗ್ಯತೆಯನ್ನು ಅನುಸರಿಸಿ ಕರ್ತವ್ಯಗಳೂ ಬೇರೆಬೇರೆಯಾಗಿರುತ್ತವೆ. ನಮ್ಮ ವ್ಯಕ್ತಿಸ್ವರೂಪಕ್ಕನುಸರಿಸಿ ನಾವು ಮಾಡಬೇಕಾದ ಕರ್ತವ್ಯವನ್ನು ನಿರ್ಧರಿಸಬೇಕು. ಶುಕ, ಸನಕಾದಿಗಳು ಜ್ಞಾನಯೋಗವನ್ನು ಅನುಸರಿಸುವುದೂ ಮನು, ಜನಕ ಮೊದಲಾದವರು ಕರ್ಮಯೋಗವನ್ನು ಅವಲಂಬಿಸಿರುವುದೂ ಅವರವರ ವ್ಯಕ್ತಿತ್ವವನ್ನು ಆಧರಿಸಿದ

ಸ್ವಧರ್ಮಗಳಿಗೆ ಅನುಸಾರವಾಗಿಯೇ ಆಗಿದೆ. ಅರ್ಜುನನದೂ ಜನಕಾದಿಗಳಂತೆ ಕರ್ಮಯೋಗಕ್ಕೆ ಮೀಸಲಾಗಿರಿಸಿದ್ದ ಜೀವನ. ಅವನ ವ್ಯಕ್ತಿತ್ವವೇ ಅಂತಹದು. ಶಮಪ್ರಧಾನವಾದ ಯತಿಧರ್ಮವನ್ನು ಸ್ವೀಕರಿಸಿ ನಡೆಯುವ ಸ್ವರೂಪವು ಅವನದಲ್ಲ. ಅವನು ಆಧಿಕಾರಿಕರೆಂದು ಪರಿಗಣಿಸಲಾದ ಜೀವರ ವರ್ಗದಲ್ಲಿ ಸೇರಿದವನು. ಲೋಕದಲ್ಲಿಯ ದೌಷ್ಟ್ಯ, ಅಧರ್ಮಗಳನ್ನು ನಿವಾರಿಸಿ, ಸಜ್ಜನರನ್ನು ಸಂರಕ್ಷಿಸಿ ಮುನ್ನಡೆಸುವ ಆಧಿಕಾರಿಕ ವ್ಯಕ್ತಿತ್ವವು ಅವನದಾಗಿದೆ. ತನ್ನ ವ್ಯಕ್ತಿತ್ವಕ್ಕೆ ಅನುಗುಣವಾದ ಕರ್ತವ್ಯವನ್ನು ಬಿಟ್ಟು ಬೇರೆ ದಾರಿಯಲ್ಲಿ ನಡೆದರೆ ಅದರಿಂದ ಅವನ ಪ್ರಗತಿಯಾಗಲಾರದು. ಹೀಗೆ ಪ್ರತಿಯೊಬ್ಬರ ವಿಷಯದಲ್ಲೂ ವ್ಯಕ್ತಿಯ ಸ್ವರೂಪವನ್ನು ಆಧರಿಸಿ ಕರ್ತವ್ಯವು ನಿರ್ಧರಿಸಲ್ಪಡುತ್ತದೆ.

ಅದರಂತೆ ಸಾಮಾಜಿಕ ಹೊಣೆಗಾರಿಕೆಯಿಂದ ಪ್ರಾಪ್ತವಾಗುವ ವರ್ಣಾಶ್ರಮೋಚಿತ ಕರ್ತವ್ಯಗಳನ್ನು ನಾವು ನಿಷ್ಠೆಯಿಂದ ಅನುಸರಿಸಬೇಕು. ತನ್ನ ನಿಜಸ್ವರೂಪವನ್ನು ಪರಿಶೀಲಿಸಿ ವ್ಯಕ್ತಿಧರ್ಮವನ್ನು ನಿರ್ಧರಿಸುವಂತೆ ಶಾಸ್ತ್ರಗಳಿಂದ ನಮ್ಮ ಸಾಮಾಜಿಕ ಜವಾಬ್ದಾರಿಯನ್ನು ಅರಿತು ಕ್ರಮಪ್ರಾಪ್ತವಾದ ನಮ್ಮ ವರ್ಣಧರ್ಮಗಳನ್ನು ತಿಳಿದು ಅದರಂತೆ ನಡೆಯಬೇಕು. ಈ ವ್ಯಕ್ತಿಧರ್ಮ, ವರ್ಣಧರ್ಮಗಳೆರಡೂ ಸ್ವಧರ್ಮಗಳಾಗಿದ್ದು ಈ ಎರಡೂ ದೃಷ್ಟಿಗಳಿಂದ ಯತಿಧರ್ಮದ ಬದಲು ಕ್ಷಾತ್ರಧರ್ಮವನ್ನು ಅರ್ಜುನನು ಪರಿಗ್ರಹಿಸಬೇಕಾಗಿದೆ. ಸಂನ್ಯಾಸಧರ್ಮವಾಗಲಿ ಅರಣ್ಯಕ್ಕೆ ಹೋಗಿ ವಾನಪ್ರಸ್ಥವೃತ್ತಿಯನ್ನು ಅವಲಂಬಿಸುವುದಾಗಲಿ ಶ್ರೇಷ್ಠವೇ ಇರಬಹುದು. ಆದರೆ ದುಷ್ಟನಿಗ್ರಹ ಹಾಗೂ ಧರ್ಮ ರಕ್ಷಣೆಯ ವಿಶಿಷ್ಟ ಹೊಣೆಗಾರಿಕೆಯನ್ನು ಹೊತ್ತ ಅರ್ಜುನನು ತನ್ನ ಈ ಕರ್ತವ್ಯವನ್ನು ತೊರೆದು ಶ್ರೇಷ್ಠ ಮಾರ್ಗವೆಂದು ಸಂನ್ಯಾಸಿ ಅಥವಾ ವಾನಪ್ರಸ್ಥನಾಗುವುದು ಉಚಿತವಾಗಲಾರದು. ಬೇರೆ ಅಧಿಕಾರ ಸ್ಥಾನಗಳಲ್ಲಿ ನಿಯುಕ್ತರಾದವರು ತಮ್ಮ ಕರ್ತವ್ಯದಲ್ಲಿ ಅಲಕ್ಷ್ಯ ಮಾಡಿ ಬೇರೆ ಎಷ್ಟೇ ಉಪಯುಕ್ತ ಕಾರ್ಯವನ್ನು ನಡೆಸಿದರೂ ಅದು ಪ್ರಶಂಸನೀಯವೆನಿಸುವುದಿಲ್ಲ. ಸೈನ್ಯ ಅಥವಾ ಆಡಳಿತದ ಕಾರ್ಯದಲ್ಲಿ ನಿಯುಕ್ತರಾದವರು ತಮ್ಮ ಕೆಲಸದ ವೇಳೆಯಲ್ಲಿ ಪವಿತ್ರ ಕಾರ್ಯವೆಂದು ಧಾರ್ಮಿಕ ಗ್ರಂಥಗಳ ಅಧ್ಯಯನದಲ್ಲೇ ತೊಡಗಿದರೆ ಅದು ಧರ್ಮವೆನಿಸಲಾರದು. ತನಗೆ ನಿಯೋಜಿಸಲ್ಪಟ್ಟ

ಕಾರ್ಯವನ್ನು ನಿಷ್ಠೆಯಿಂದ ಆಚರಿಸುವುದರಿಂದಲೇ ಮನುಷ್ಯನು ಶ್ರೇಷ್ಠ ವ್ಯಕ್ತಿಯಾಗಬಲ್ಲನು. ಹೊರತು ಅವನು ಯಾವ ಕಾರ್ಯ ಮಾಡುತ್ತಿದ್ದಾನೆಂಬು ದರಿಂದಲೇ ಅವನ ಮಹತ್ತ್ವವನ್ನು ನಿರ್ಧರಿಸಲಾರೆವು.

ಹೀಗೆಯೇ ವ್ಯಕ್ತಿಯ ವಿಶಿಷ್ಟ ಪರಿಸ್ಥಿತಿ, ಸಂದರ್ಭಗಳನ್ನು ಅನುಸರಿಸಿ ನಮ್ಮ ಕರ್ತವ್ಯವನ್ನು ವಿವೇಚಿಸುವ ಪ್ರಸಂಗವೂ ನಮ್ಮ ಜೀವನದಲ್ಲಿ ಬರುತ್ತದೆ. ನದಿಯಲ್ಲಿ ಒಬ್ಬನು ಮುಳುಗುತ್ತಿರುವಾಗ, ತೀರದಲ್ಲಿ ಜಪ ಮಾಡುತ್ತಿರುವವನು ಜಪವನ್ನು ಬಿಟ್ಟು ಮುಳುಗುವವನನ್ನು ಮೇಲಕ್ಕೆತ್ತಲು ಪ್ರಯತ್ನಿಸುವುದೇ ಧರ್ಮವೆನಿಸುವುದು. ಜಪವೇ ಶ್ರೇಷ್ಠವೆಂದು ಆತನು ಮೂಗು ಹಿಡಿದು ಕುಳಿತರೆ ಅದು ಸರಿಯೆನಿಸುವುದೆ? ದೇವರ ಗುಡಿಗೆ ಹೋಗುವುದೇನೋ ಒಳ್ಳೆಯ ಕಾರ್ಯವೇ; ಆದರೆ ಶಾಲೆಗೆ ಹೋಗುವುದನ್ನು ತಪ್ಪಿಸಿ ಹುಡುಗರು ದೇವರ ಗುಡಿಗೆ ಹೋದರೆ ಅದನ್ನು ಯಾರೂ ಅಭಿನಂದಿಸಲಾರರು. ಮಕ್ಕಳಿಗಾಗಿ, ಪತಿಗಾಗಿ ತಾನು ನಿರ್ವಹಿಸಬೇಕಾದ ಕೌಟುಂಬಿಕ ಕರ್ತವ್ಯಗಳನ್ನು ತೊರೆದು ಮಹಿಳೆಯರು ಸಮಾಜಸೇವೆಯೆಂದು ಹೊರಗೇ ಅಡ್ಡಾಡುತ್ತಿದ್ದರೆ ಅದು ಧರ್ಮ ಎನಿಸಲಾರದು.

ಮಹಾಭಾರತದಲ್ಲಿ ಧರ್ಮವ್ಯಾಧನ ಉಪಾಖ್ಯಾನದಲ್ಲಿ ಪ್ರತಿಯೊಬ್ಬನೂ ತನ್ನ ಈ ವೈಯಕ್ತಿಕ ಹೊಣೆಗಾರಿಕೆಯನ್ನು ಪಾಲಿಸುವುದರ ಆವಶ್ಯಕತೆಯನ್ನು ಒತ್ತಿಹೇಳಲಾಗಿದೆ. ತರುಣ ಬ್ರಾಹ್ಮಣ ಯುವಕನೊಬ್ಬನು ತನ್ನ ವೃದ್ಧ ತಾಯಿತಂದೆಗಳಿಗೆ ಸಲ್ಲಿಸಬೇಕಾದ ಸೇವಾಕಾರ್ಯವನ್ನು ನಿರ್ವಹಿಸದೆ ಯಾವ ರಕ್ಷಕರೂ ಇಲ್ಲದ ಅವರನ್ನು ಮನೆಯಲ್ಲೇ ಬಿಟ್ಟು ತಾನು ತಪಸ್ವಿಯಾಗಬೇಕೆಂದು ಅರಣ್ಯದಲ್ಲಿ ಇರುತ್ತಾನೆ. ಅನೇಕ ವರ್ಷಗಳವರೆಗೆ ತಪ್ಪಸ್ಸನ್ನು ಆಚರಿಸಿ ಉಗ್ರಶಕ್ತಿಯನ್ನು ಪಡೆಯುತ್ತಾನೆ. ಒಮ್ಮೆ ಒಂದು ಮರದ ಕೆಳಗೆ ಆತ ಕುಳಿತಿರುವಾಗ ಮೇಲಿರುವ ಹಕ್ಕಿಯು ಆತನ ಮೇಲೆ ತನ್ನ ಅಶುಚಿ ಪದಾರ್ಥವನ್ನು ಕೆಡಹಿತು. ಕೋಪಾವಿಷ್ಟನಾದ ಆತನು ಮುಖವೆತ್ತಿ ಕೆಂಗಣ್ಣಿನಿಂದ ಆ ಹಕ್ಕಿಯನ್ನು ನೋಡಿದ. ಕೂಡಲೇ ಅದು ಸುಟ್ಟು ಬೂದಿಯಾಯಿತು. ತನ್ನ ತಪಸ್ಸಿನ ಬಗ್ಗೆ ಈತನಲ್ಲಿ ಅಹಂಭಾವ ಉದಯಿಸಿತು. ಭಿಕ್ಷೆಗಾಗಿ ಗ್ರಾಮದಲ್ಲಿ ಸಂಚರಿಸುತ್ತ ಈ ತಪಸ್ವಿಯು ಒಂದು ಮನೆಯ ಮುಂದೆ ಬಂದು ನಿಂತನು. ಮನೆಯ ಗೃಹಿಣಿಯು

ಅತ್ಯಂತ ಸಾಧ್ವಿಯಾಗಿದ್ದಳು. ತಪಸ್ವಿಗೆ ಭಿಕ್ಷೆಯನ್ನು ನೀಡಬೇಕೆಂದು ಆಕೆ ಹೊರಟು ನಿಂತಾಗ ಬಳಲಿದ ತನ್ನ ಪತಿಯು ಹೊರಗಿನಿಂದ ಬರುವುದನ್ನು ಕಂಡಳು. ಪತಿಯನ್ನು ಉಪಚರಿಸಿ ಆತನ ಸೇವೆಯನ್ನು ಮಾಡುವ ಭರದಲ್ಲಿ ಈ ಅತಿಥಿಯನ್ನು ಆಕೆ ಮರೆತಳು. ಸ್ವಲ್ಪ ಹೊತ್ತಿನ ನಂತರ ಅತಿಥಿಯ ನೆನಪಾಗಿ ಭಿಕ್ಷೆ ಹಿಡಿದುಕೊಂಡು ಅವನ ಬಳಿಗೆ ಬಂದಳು. ಕೋಪಾಕ್ರಾಂತನಾದ ಅತಿಥಿ ತಪಸ್ವಿಯನ್ನು ಇವಳು ಎಷ್ಟು ಸಂತೈಸಿದರೂ ಅವನ ಸಿಟ್ಟು ಇಳಿಯಲಿಲ್ಲ.

ಆಕೆ, ''ನಾನೇನು ಅರಣ್ಯದಲ್ಲಿ ನೀನು ಬೂದಿಮಾಡಿದ ಹಕ್ಕಿಯಲ್ಲ'' ಎಂದು ನುಡಿದಳು. ಇದನ್ನು ಕೇಳಿ ಆ ತಪಸ್ವಿ ತಣ್ಣಗಾದ. ಅಲ್ಲಿಯ ಘಟನೆಯನ್ನು ಇವಳು ತಿಳಿದ ಬಗೆ ಹೇಗೆ? ಇವಳಿಗೆ ಈ ಜ್ಞಾನಶಕ್ತಿ ಹೇಗೆ ಬಂದಿತು? ಎಂದು ಅಚ್ಚರಿಗೊಂಡು ಇವಳನ್ನು ಬೇಡಿದಾಗ, ಧರ್ಮವ್ಯಾಧನ ಬಳಿ ಹೋಗಲು ತಿಳಿಸಿದಳು. ಧರ್ಮವ್ಯಾಧನು ಮಾಂಸವನ್ನು ಮಾರುತ್ತಿದ್ದನು. ಅವನ ಈ ವ್ಯಾಪಾರವನ್ನು ಕಂಡು ಅವನ ಬಳಿ ಹೋಗಲು ಈ ತಪಸ್ವಿ ಹಿಂಜರಿದಾಗ, ಧರ್ಮವ್ಯಾಧನೇ 'ಸಾಧ್ವೀಮಣಿಯಿಂದ ಕಳಿಸಲ್ಪಟ್ಟವನಲ್ಲವೇ ನೀನು?' ಎಂದು ಈತನ ಪೂರ್ವಾಪರವನ್ನು ಹೇಳಲು, ಇವನಿಗೆ ಮತ್ತೂ ವಿಸ್ಮಯವಾಯಿತು. ಧರ್ಮವ್ಯಾಧನು ತಾನು ಮಾಡುವ ವ್ಯಾಪಾರದ ನೀತಿ, ಸೇವಾಭಾವಗಳನ್ನು ಆತನಿಗೆ ವಿವರಿಸಿ, ತನ್ನ ವೃದ್ಧ ತಂದೆತಾಯಿಗಳ ಸೇವೆಯನ್ನು ತಾನು ಮಾಡುವ ವಿಧಾನವನ್ನು ಅವನಿಗೆ ಪ್ರತ್ಯಕ್ಷವಾಗಿ ತೋರಿಸಿದನು. ತಂದೆತಾಯಿಗಳ ಬಗ್ಗೆ ತಾನು ಮಾಡಬೇಕಾದ ಕರ್ತವ್ಯವನ್ನು ಬಿಟ್ಟು ಅರಣ್ಯಕ್ಕೆ ಬಂದಿರುವ ಈ ತಪಸ್ವಿಗಿಂತ ಹೆಚ್ಚಿನ ಸಿದ್ಧಿಯನ್ನು, ಯೋಗ್ಯತೆಯನ್ನು ಪತಿಯ ಬಗ್ಗೆ, ತಂದೆತಾಯಿಯರ ಬಗ್ಗೆ ತಮ್ಮ ವೈಯಕ್ತಿಕ ಕರ್ತವ್ಯವನ್ನು ನಿಷ್ಠೆಯಿಂದ, ಭಗವದ್ಭಕ್ತಿಯಿಂದ ಸಲ್ಲಿಸುತ್ತಲೇ ತಮ್ಮ ವ್ಯವಹಾರವನ್ನು ನಡೆಸುತ್ತಿರುವ ಸಾಧ್ವಿ ಹಾಗೂ ಧರ್ಮವ್ಯಾಧರು ಪಡೆದಿರುವರು. ಯಾರೂ ತಾವು ಮಾಡಬೇಕಾದ ವೈಯಕ್ತಿಕ ಹಾಗೂ ಸಾಮಾಜಿಕ ಕರ್ತವ್ಯಗಳನ್ನು ಬಿಟ್ಟು ಬೇರೆ ಯಾವುದೇ ಎಷ್ಟೇ ಶ್ರೇಷ್ಠವಾದ ಕಾರ್ಯಗಳನ್ನು ಮಾಡಿದರೂ ಅವರು ಅದರಿಂದ ಶ್ರೇಯಸ್ಸನ್ನು ಪಡೆಯಲಾರರು. ಧರ್ಮವ್ಯಾಧನ ಕಥೆಯಲ್ಲಿ ಕಂಡುಬರುವ ತಪಸ್ವಿ ಬ್ರಾಹ್ಮಣನು ಈ ಮಾತಿಗೆ ಒಳ್ಳೆಯ ನಿದರ್ಶನನಾಗಿದ್ದಾನೆ. ಪ್ರತಿಯೊಬ್ಬರೂ ತಮ್ಮ ತಮ್ಮ ವ್ಯಕ್ತಿಧರ್ಮ,

ವರ್ಣ-ಧರ್ಮಗಳನ್ನು ಅರಿತುಕೊಂಡು ತಮ್ಮ ಹೊಣೆಗಾರಿಕೆಯನ್ನು ಭಕ್ತಿಯಿಂದ, ಶ್ರದ್ಧೆಯಿಂದ ನಿರ್ವಹಿಸುವುದರಲ್ಲೇ ಅವರ ಜೀವನದ ಸಿದ್ಧಿ ಇದೆ.

**ಸ್ವಧರ್ಮೇ ನಿಧನಂ ಶ್ರೇಯಃ ।**
**ಪರಧರ್ಮೋ ಭಯಾವಹಃ ।**

ಅರ್ಜುನನಸದು ಕರ್ಮಯೋಗಿಯ ವ್ಯಕ್ತಿತ್ವ. ಅದರಲ್ಲೂ ಕ್ಷತ್ರಿಯನಾಗಿ ಲೋಕ ರಕ್ಷಣೆಯ ಜವಾಬ್ದಾರಿಯನ್ನು ಹೊತ್ತವ. ಇಂತಹ ಧರ್ಮಯುದ್ಧದಲ್ಲಿ ಪ್ರಮುಖ ಭಾಗವನ್ನು ವಹಿಸಿ ಕರ್ತವ್ಯವನ್ನು ಪೂರೈಸದೆ ಶಮಪ್ರಧಾನವಾದ ಯತಿಧರ್ಮವನ್ನು ಆಚರಿಸಲು ಅವನಿಗೆ ಅಧಿಕಾರ ಏನಿದೆ? ನೀರಿಗಿಂತ ಹಾಲು ಶ್ರೇಷ್ಠವೇನೋ ನಿಜ. ಆದರೆ ಮೀನನ್ನು ನೀರಿನಿಂದ ತೆಗೆದು ಹಾಲಿನಲ್ಲೇ ಇಟ್ಟರೆ ಅದು ಬದುಕಬಹುದೆ? ಅದರಂತೆ ಮಾನವನು ತನ್ನ ವ್ಯಕ್ತಿಧರ್ಮ, ವರ್ಣಧರ್ಮ, ಪ್ರಾಸಂಗಿಕ ಧರ್ಮಗಳನ್ನು ಪರಿಶೀಲಿಸಿ ತನ್ನ ಸ್ವಧರ್ಮವನ್ನು ನಿರ್ಧರಿಸಿ ಆ ಮಾರ್ಗದಿಂದಲೇ ನಡೆಯಬೇಕು.

ಒಬ್ಬನು ತನಗೆ ಒಪ್ಪಿಗೆಯಾಗುವ ಪತ್ನಿಯನ್ನು ಆರಿಸಬಲ್ಲ. ತನಗೆ ಬೇಡವಾದಾಗ ಪತ್ನಿಯನ್ನು ತೊರೆಯಲೂ ಸಾಧ್ಯವಾಗಬಹುದು. ಆದರೆ ತನ್ನ ತಾಯಿಯ ಬಗ್ಗೆ ಹೀಗೆ ನಡೆಯಬಲ್ಲನೆ? ಈ ತಾಯಿ ಚೆನ್ನಾಗಿಲ್ಲ; ಸುಂದರಳಾಗಿಲ್ಲ; ತನಗೆ ಬೇರೆ ತಾಯಿ ಬೇಕೆಂದು ಬದಲಿಸಲು ಸಾಧ್ಯವೆ? ನಾವು ಹುಟ್ಟುವಾಗಲೇ ನಮ್ಮ ತಾಯಿ ಸಿದ್ಧಳಾಗಿರುತ್ತಾಳೆ. ಅವಳನ್ನೇ ತಾಯಿಯೆಂದು ಸ್ವೀಕರಿಸಿ ಪುತ್ರರಾಗಿ ನಮ್ಮ ಸೇವೆ, ಕರ್ತವ್ಯಗಳನ್ನು ನಾವು ಮಾಡಬೇಕಾಗುತ್ತದೆ. ಧರ್ಮದ ಬಗ್ಗೆಯೂ ಇದೇ ರೀತಿಯನ್ನು ನಾವು ಅನುಸರಿಸಬೇಕು. ನಾವು ಹುಟ್ಟುವಾಗಲೇ ನಮ್ಮ ಧರ್ಮವೂ ನಿರ್ಧರಿತವಾಗಿರುತ್ತದೆ. ನಮ್ಮ ಸೇವೆಯನ್ನು ಪಡೆಯಲು ಅದು ಸಿದ್ಧವಾಗಿರುವುದು. ಅದನ್ನು ಬದಲಿಸುವ ಗೋಜಿಗೇ ನಾವು ಹೋಗಬಾರದು. ನಮಗೆ ಪ್ರಾಪ್ತವಾದ ಧರ್ಮವನ್ನು ನಿಷ್ಠೆಯಿಂದ ಅನುಷ್ಠಾನ ಮಾಡಬೇಕು. ಇದನ್ನೇ ವರ್ಣಧರ್ಮವೆನ್ನಲಾಗುವುದು.

## ವರ್ಣವಿಭಾಗದ ವೈಶಿಷ್ಟ್ಯ

ಪ್ರಾಚೀನರು ಈ ವರ್ಣಧರ್ಮವನ್ನು ಯಾಕೆ ಏರ್ಪಡಿಸಿದ್ದಾರೆ? ಅದರ

ಮಹತ್ತ್ವವೇನು? ಎಂಬುದನ್ನು ನಾವು ಸ್ವಲ್ಪ ವಿಚಾರ ಮಾಡುವಾ. ರಾಷ್ಟ್ರದಲ್ಲಿ ವ್ಯಕ್ತಿಗೆ ತನ್ನ ತನ್ನ ಕಸುಬುಗಳ ಬಗ್ಗೆ ನಿರ್ಬಂಧ ಬೇಕೆ? ಬೇಡವೆ? ಇದೊಂದು ದೊಡ್ಡ ಪ್ರಶ್ನೆಯಾಗಿದೆ. ವ್ಯಕ್ತಿಸ್ವಾತಂತ್ರ್ಯವಾದಿಗಳು ವ್ಯಕ್ತಿಗೆ ಏನೂ ನಿರ್ಬಂಧವಿರಬಾರದು, ತಾನು ಬಯಸಿದ ವೃತ್ತಿಯನ್ನು ನಡೆಸಲು ಪ್ರತಿಯೊಬ್ಬನಿಗೂ ಅನಿರ್ಬಂಧ ಅಧಿಕಾರವಿರಬೇಕೆಂದು ವಾದಿಸುವರು. ಹೀಗೆ ವ್ಯಕ್ತಿಗೆ ಅತಿಯಾದ ಸ್ವಾತಂತ್ರ್ಯವನ್ನು ನೀಡುವುದರಿಂದ ದೇಶದ ಸರ್ವಾಂಗೀಣ ಉನ್ನತಿಗೆ ಧಕ್ಕೆಯಾಗಬಹುದು. ಲಾಭದಾಯಕ ಕಸುಬುಗಳ ಕಡೆಗೇ ಎಲ್ಲರೂ ಧಾವಿಸುವುದರಿಂದ ಕೆಲವು ಕಸುಬುಗಳೇ ನಿಂತುಹೋಗಬಹುದು. ಆಹಾರ ಪದಾರ್ಥಗಳನ್ನು ಬೆಳೆಸುವ ಬದಲು ಲಾಭದಾಯಕಗಳೆಂದು ತಂಬಾಕು ಮೊದಲಾದದ್ದನ್ನೇ ಬೆಳೆದರೆ ಇದು ಸ್ವಾತಂತ್ರ್ಯದ ದುರುಪಯೋಗವೇ ಆಗುವುದು. ರಾಷ್ಟ್ರದ ಎಲ್ಲ ಕಸುಬು, ವೃತ್ತಿಗಳಲ್ಲಿ ಸಮತೋಲನವು ತಪ್ಪುವುದು. ಅನಾವಶ್ಯಕ ಸ್ಪರ್ಧೆ, ಘರ್ಷಣೆಗಳಿಗೆ ಅವಕಾಶವಾಗುವುದು. ಕೆಲವು ಕಸುಬುಗಳ ವಿಷಯದಲ್ಲಿ ಬಹಳ ಸ್ಪರ್ಧೆ ಒತ್ತಡಗಳಿದ್ದರೆ, ಕೆಲವು ಕಸುಬುಗಳ ಕಡೆಗೆ ಜನರ ಸುಳಿವೇ ಇರುವುದಿಲ್ಲವೆನ್ನುವ ಪರಿಸ್ಥಿತಿಯು ನಿರ್ಮಾಣವಾಗುವುದು. ಇಂದು ಮೆಡಿಕಲ್, ಇಂಜಿನಿಯರಿಂಗ್ ಶಿಕ್ಷಣದ ಬಗ್ಗೆ ಬಿರುಸಿನ ಸ್ಪರ್ಧೆ ಇದ್ದರೆ ಆರ್ಟ್ಸ್, ಸೈನ್ಸ್ ಮುಂತಾದವುಗಳ ಅಭ್ಯಾಸದ ಬಗ್ಗೆ ಯಾವುದೇ ಆಸೆ, ಆಸಕ್ತಿ ಸಮಾಜದಲ್ಲಿ ಉಳಿದಿಲ್ಲ. ದೇಶದ ಎಲ್ಲ ಅಂಗಗಳೂ ಸಮಪ್ರಮಾಣದಿಂದ ಅಭಿವೃದ್ಧಿಯನ್ನು ಹೊಂದುವ ಸಾಮಾಜಿಕ ವ್ಯವಸ್ಥೆಯು ಆವಶ್ಯಕ.

ಇದಕ್ಕಾಗಿ ಬಲಾತ್ಕಾರದಿಂದ ಅವರವರ ಕಸುಬನ್ನು ನಿರ್ಧರಿಸಬೇಕೆನ್ನುವ ವಾದವೂ ಇದೆ. ಸರಕಾರವು ಜನರಲ್ಲಿ ಕಸುಬುಗಳನ್ನು ಹಂಚಿ ಕಡ್ಡಾಯವಾಗಿ ಅದನ್ನು ಮಾಡಿಸಬೇಕು. ಯಾವ ವೃತ್ತಿ, ಉದ್ಯೋಗಗಳೂ ಸ್ಥಗಿತವಾಗದಂತೆ ವ್ಯವಸ್ಥಿತವಾದ ನಿರ್ಬಂಧವನ್ನು ಹಾಕಿ ಸಮಷ್ಟಿಗಾಗಿ ವ್ಯಕ್ತಿಯ ಸ್ವಾತಂತ್ರ್ಯವನ್ನು ನಿರ್ಬಂಧಿಸಿದರೆ ತಪ್ಪೇನಿಲ್ಲವೆಂದು ಈ ವಾದದ ಸಮರ್ಥನೆಯಾಗಿದೆ. ಕೆಲವು ದೇಶಗಳಲ್ಲಿ ಈ ರೀತಿ ಜನರನ್ನು ಅವರ ಇಚ್ಛೆಯ ವಿರುದ್ಧವಾಗಿ ಬಲಾತ್ಕಾರದಿಂದ ದುಡಿಸುತ್ತಾರೆ. ಇದರಲ್ಲೂ ಕೆಲವು ತೊಡಕುಗಳಿವೆ. ಒಬ್ಬನು ಬೆಳೆದು ಶಿಕ್ಷಿತನಾಗಿ ಅವನ ಒಲವು, ಅಭಿರುಚಿ, ಆಸಕ್ತಿಗಳು ರೂಪುಗೊಂಡ ಮೇಲೆ ಅವನನ್ನು

ಇಂತಹದೇ ಕಸುಬನ್ನು ಮಾಡಬೇಕೆಂದು ನಿರ್ಬಂಧಿಸುವುದರಿಂದ ಆ ವ್ಯಕ್ತಿಗೆ ಬಹಳ ಆಘಾತವಾಗುವುದು. ತನ್ನ ಅಭಿರುಚಿಗೆ ವಿರುದ್ಧವಾದ ಕಸುಬುಗಳ ಬಗ್ಗೆ ತನ್ನನ್ನು ಹೊಂದಿಸಿಕೊಳ್ಳಲು ಅವನಿಂದ ಆಗುವುದಿಲ್ಲ. ಜನರಿಗೆ ಕಸುಬುಗಳನ್ನು ಹಂಚಿಕೊಡುವಾಗ ಅನೇಕ ರೀತಿಯ ಅನ್ಯಾಯ, ಪಕ್ಷಪಾತಗಳಿಗೂ ಅವಕಾಶ ವಾಗುವುದು. ಅಂತೂ ಇಂತಹ ನಿರ್ಬಂಧದಿಂದ ವ್ಯಕ್ತಿತ್ವದ ದಮನಕ್ಕೆ ಅವಕಾಶ ವಾಗುವುದು.

ಆದ್ದರಿಂದ ಬಾಲ್ಯದಿಂದಲೇ ರಾಷ್ಟ್ರಕ್ಕೆ ಆವಶ್ಯಕಗಳಾದ ಭಿನ್ನ ಭಿನ್ನ ಕಸುಬು, ಉದ್ಯೋಗಗಳಿಗೆ ಅನುಗುಣವಾಗುವಂತೆ ವ್ಯಕ್ತಿಯನ್ನು ಸಿದ್ಧಪಡಿಸುವುದೇ ಯೋಗ್ಯ ಉಪಾಯವಾಗಿದೆ. ಮುಂದೆ ಮಾಡಬೇಕಾದ ಉದ್ಯೋಗಗಳಿಗೆ ಅನುಕೂಲವಾದ ಮನೋಭಾವನೆ ಹಾಗೂ ಶಿಕ್ಷಣವನ್ನು ಬಾಲ್ಯದಿಂದಲೇ ವ್ಯಕ್ತಿಯಲ್ಲಿ ರೂಪಿಸಲು ಏರ್ಪಡಿಸಿದರೆ ಆಗ ಈ ಬಲಾತ್ಕಾರಕ್ಕೆ ಎಡೆಯಿರುವು ದಿಲ್ಲ. ವ್ಯಕ್ತಿಯು ಪ್ರಬುದ್ಧನಾದಾಗಲೇ ಅವನ ಕರ್ತವ್ಯವೂ ಸಿದ್ಧವಾಗಿ, ಅದಕ್ಕೆ ಬೇಕಾದ ಶಿಕ್ಷಣ, ಸಂಸ್ಕಾರಗಳೂ ಅವನಲ್ಲಿ ರೂಪುಗೊಂಡಿದ್ದಾದರೆ ಸ್ಪರ್ಧೆ ಬಲಾತ್ಕಾರಗಳಿಗೆ ಅವಕಾಶವೇ ಇರುವುದಿಲ್ಲ.

ಯಾರಿಗೆ ಯಾವ ಸಂಸ್ಕಾರವನ್ನು ನೀಡಬೇಕು ? ಯಾವ ಕಸುಬಿಗಾಗಿ ಯಾರನ್ನು ಆರಿಸಿ ಸಿದ್ಧಗೊಳಿಸಬೇಕು ? ಎಂಬ ಪ್ರಶ್ನೆಯನ್ನು ನಾವು ಯೋಗ್ಯ ರೀತಿಯಿಂದ ಬಗೆಹರಿಸಬಹುದು. ವ್ಯಕ್ತಿಯ ಪರಂಪರೆಯ ಸಂಸ್ಕಾರ, ಅವನು ಬೆಳೆಯುತ್ತಿರುವ ಕುಟುಂಬದ ವಾತಾವರಣ ಇವನ್ನು ನೋಡಿ ಅದಕ್ಕೆ ಅನುಗುಣವಾದ ಕಸುಬುಗಳನ್ನು ನಾವು ನಿರ್ಧರಿಸಿದರೆ ಆ ವ್ಯಕ್ತಿಗೆ ಏನೂ ಅನ್ಯಾಯವನ್ನು ಮಾಡಿದಂತಾಗುವುದಿಲ್ಲ. ಪರಂಪರೆ ಹಾಗೂ ರಕ್ತಸಂಬಂಧವು ವ್ಯಕ್ತಿತ್ವದ ರಚನೆಯಲ್ಲಿ ಪ್ರಮುಖ ಸಾಧನವಾಗಿದೆಯೆನ್ನುವುದನ್ನು ಎಲ್ಲರೂ ಒಪ್ಪಿರುವರು. ಆನುವಂಶಿಕ ಗುಣವು ಪರಂಪರೆಯಲ್ಲಿ ಬಂದ ಕರ್ಮಗಳಿಗೆ ಅವನನ್ನು ಸಹಜವಾಗಿಯೇ ಹೊಂದಿಸುವುದು. ಬಾಲ್ಯದಿಂದಲೂ ಅದೇ ಕಸುಬನ್ನು ನಡೆಸುವ ಕುಟುಂಬಪರಿಸರದಲ್ಲೇ ಅವನು ಬೆಳೆಯುವುದರಿಂದ ಅದಕ್ಕೆ ಬೇಕಾದ ಶಿಕ್ಷಣ, ಸಂಸ್ಕಾರಗಳು ಅನಾಯಾಸವಾಗಿ ಅವನಲ್ಲಿ ಮೂಡುವವು. ಒಬ್ಬ ಸಮಗಾರನ ಮಗನ ನೈಪುಣ್ಯವನ್ನು ಆ ವೃತ್ತಿಯನ್ನು ಕಲಿತ

ಇತರರು ಖಂಡಿತವಾಗಿಯೂ ಪಡೆಯಲಾರರು. ಅಂತೂ ವ್ಯಕ್ತಿಯು ಹುಟ್ಟಿರುವ ಪರಂಪರೆ, ಆವನು ಬೆಳೆದಿರುವ ವಾತಾವರಣ ಇವೆರಡೂ ವ್ಯಕ್ತಿಯ ಮನೋಧರ್ಮವನ್ನು ರೂಪಿಸಿ ಅವನ ಕರ್ತವ್ಯದ ನಿರ್ಧಾರಶಕ್ತಿಗಳೆನಿಸುವವು. ತನ್ನ ಕಸುಬುಗಳಿಗೆ ಬೇಕಾದ ಶಿಕ್ಷಣವನ್ನು ವಯಸ್ಸಾದ ಮೇಲೆ ಪಡೆಯುವುದಲ್ಲ. ಮಗುವಾಗಿರುವಾಗಲೇ ಅವನಿಗೆ ಶಿಕ್ಷಣ ಆರಂಭವಾಗಬೇಕು. ಮನೆಯೇ ಆತನಿಗೆ ಶಿಕ್ಷಣಶಾಲೆಯಾಗಬೇಕು. ಹೀಗೆ ದೇಶದ ವಿವಿಧ ಆವಶ್ಯಕತೆಗಳಿಗೆ ಅನುಗುಣವಾಗಿ ಮಕ್ಕಳ ಮನಸ್ಸನ್ನೇ ಅನುರೂಪವಾದ ರೀತಿಯಲ್ಲಿ ಅಣಿಗೊಳಿಸಿ ದೇಶದ ಎಲ್ಲ ಕಸುಬುಗಳನ್ನು ಯಾವುದೇ ಒತ್ತಾಯವಿಲ್ಲದೆ ಉಳಿಸಿ, ಅಭಿವೃದ್ಧಿಪಡಿಸಿ ದೇಶದಲ್ಲಿ ಸಮತೋಲನವನ್ನು ಕಾಪಾಡುವ ಸಾಮಾಜಿಕ ವ್ಯವಸ್ಥೆಯನ್ನು ವರ್ಣಧರ್ಮದ ಮೂಲಕ ನಮಗೆ ಪ್ರಾಚೀನರು ಒದಗಿಸಿಕೊಟ್ಟಿದ್ದಾರೆ. ಶಾಸ್ತ್ರೋಕ್ತವಾದ ವರ್ಣ ವ್ಯವಸ್ಥೆಯು ಕೇವಲ ಸಂಕುಚಿತ ದೃಷ್ಟಿಯಿಂದ ಸ್ಥಾಪಿತವಾಗಿರದೆ ಲೌಕಿಕ ಹಾಗೂ ಆಧ್ಯಾತ್ಮಿಕ ಇವೆರಡೂ ಉದ್ದೇಶಗಳಿಂದ, ದೂರದೃಷ್ಟಿಯಿಂದ ನಿರ್ಮಿಸಲ್ಪಟ್ಟಿದೆ. ಯಾವ ವ್ಯಕ್ತಿಯು ತನ್ನ ಪರಂಪರಾಪ್ರಾಪ್ತವಾದ ಕರ್ತವ್ಯವನ್ನು ಉತ್ತಮ ರೀತಿಯಿಂದ, ಭಗವದ್ಭಕ್ತಿಯಿಂದ ಆಚರಿಸುವನೋ ಅವನ ವ್ಯಕ್ತಿತ್ವವೇ ಶ್ರೇಷ್ಠವಾದುದು. ಕೇವಲ ಜಾತಿಯಿಂದ ಒಬ್ಬನ ಶ್ರೇಷ್ಠತ್ವ, ಕನಿಷ್ಠತ್ವವನ್ನು ನಿರ್ಧರಿಸಲಾಗುವುದಿಲ್ಲ. ಭಕ್ತಿ, ಜ್ಞಾನ, ಸದ್ಗುಣಗಳು ಸಾರ್ವವರ್ಣಿಕಗಳು. ಇವುಗಳನ್ನು ಅಳವಡಿಸಿಕೊಂಡು ತನ್ನ ಕರ್ತವ್ಯವನ್ನು ಯೋಗ್ಯರೀತಿಯಿಂದ ಆಚರಿಸಿದಲ್ಲಿ, ಅವನು ಯಾವ ಜಾತಿಯಲ್ಲಿದ್ದರೂ ಶ್ರೇಷ್ಠ ವ್ಯಕ್ತಿಯೆಂದು ಪರಿಗಣಿಸಲ್ಪಡುವನು. ಇದೇ ವ್ಯಕ್ತಿಯ ಪರಮಧರ್ಮ.

**ಸ್ವವಿಹಿತವೃತ್ತ್ಯಾ ಭಕ್ತ್ಯಾ ಭಗವದಾರಾಧನಂ ಪರಮೋ ಧರ್ಮಃ।**

- ಗೀತಾಭಾಷ್ಯ

ಭಗವದ್ಭಕ್ತಿ, ಸ್ವಧರ್ಮಾಚರಣೆ, ಸದ್ಗುಣಗಳು ಇವೇ ವ್ಯಕ್ತಿತ್ವದ ಅಳತೆಗೋಲು. ಬ್ರಾಹ್ಮಣ ಋಷಿಗಿಂತ ಸ್ವಧರ್ಮನಿಷ್ಠರಾದ ಸಾಧ್ವಿ ಸ್ತ್ರೀ ಹಾಗೂ ಬೇಡರವನು ಶ್ರೇಷ್ಠರೆನಿಸಿದರು. ಜಾಬಾಲಿ ಮುನಿಗೆ ವ್ಯಾಪಾರಿ ತುಲಾಧಾರನು ಉಪದೇಶ ನೀಡುವನು :

ಸ್ವಕರ್ಮಣಾ ತಮಭ್ಯರ್ಚ್ಯ ಸಿದ್ಧಿಂ ವಿಂದತಿ ಮಾನವಃ ।

ಪರಂಪರಾಪ್ರಾಪ್ತವಾದ ವರ್ಣಾಶ್ರಮಧರ್ಮಾನುಸಾರವಾಗಿ ವಿಹಿತ ಕರ್ಮಗಳನ್ನು ಆಚರಿಸುವುದೇ ಪರಮಾತ್ಮನ ಪೂಜೆ. ಮಂಗಳಾರತಿ ಹಚ್ಚಿ ಷೋಡಶೋಪಚಾರ ಪೂಜೆಯನ್ನು ಸಲ್ಲಿಸಿದರೂ ಸ್ವಕರ್ಮಾಚರಣೆಯ ಈ ಮಹಾಪೂಜೆಯನ್ನು ಸಲ್ಲಿಸದಿದ್ದರೆ ಭಗವಂತನು ಪ್ರಸನ್ನನಾಗಲಾರ. ಭಗವದ್ವೇಷಿಗಳಾಗಿ ಲೋಕವ್ಯವಸ್ಥಾಭಂಜಕರಾದ ದುರ್ಯೋಧನಾದಿ ದುಃಶಕ್ತಿಗಳನ್ನು ನಿಗ್ರಹಿಸುವುದು ಕ್ಷತ್ರಿಯನ ಪರಮಕರ್ತವ್ಯ. ಇಂತಹ ದೇಶರಕ್ಷಣೆಯ ಸ್ವಧರ್ಮವನ್ನು ಕರ್ಮಯೋಗಿಯೂ ಕ್ಷತ್ರಿಯನೂ ಆದ ಅರ್ಜುನನು ಅವಶ್ಯವಾಗಿ ಆಚರಿಸಬೇಕೆಂದು ಶ್ರೀಕೃಷ್ಣನು ಬೋಧಿಸಿ, ಯುದ್ಧದಿಂದ ವ್ಯತಿರಿಕ್ತಗಳಾದ ಬೇರೆ ಕಾರ್ಯಗಳನ್ನು ಯಾಕೆ ಮಾಡಬಾರದೆಂಬ ಅರ್ಜುನನ ಬಲವಾದ ಸಂಶಯವನ್ನು ಪರಿಹರಿಸಿದ್ದಾನೆ.

## ಕಾಮ, ಆತ್ಮದ ಪ್ರಬಲ ವೈರಿ

ಕರ್ತವ್ಯಾಕರ್ತವ್ಯ ವಿಷಯದಲ್ಲಿ ಅರ್ಜುನನ ಸಂಶಯಗಳಿಗೆಲ್ಲ ಪರಿಹಾರ ದೊರಕಿದೆ. ಈ ಕರ್ತವ್ಯದ ಜ್ಞಾನವಿದ್ದರೂ ಪಾಪಕೃತ್ಯವನ್ನು ಮಾಡಬಾರದೆಂದು ತಿಳಿದಿದ್ದರೂ ಜನರು ಆ ಕಡೆ ಯಾಕೆ ಎಳೆಯಲ್ಪಡುತ್ತಾರೆ? ಇಚ್ಛೆಯಿಲ್ಲದಿದ್ದರೂ ಯಾವುದೋ ಒಂದು ಪ್ರಬಲ ಶಕ್ತಿಯ ಒತ್ತಡಕ್ಕೆ ಮಣಿದು ದುಷ್ಟಕಾರ್ಯಗಳು ನಮ್ಮಿಂದ ಸಂಭವಿಸುತ್ತವೆ. ಹೀಗೆ ನಮ್ಮನ್ನು ಬಲಾತ್ಕಾರದಿಂದ ಅಧೋಗತಿಗಿಳಿಸುವ ಆ ದುಷ್ಟಶಕ್ತಿ ಯಾವುದು ಎಂದು ಅರ್ಜುನನು ಕೇಳುವನು :

ಅಥ ಕೇನ ಪ್ರಯುಕ್ತೋಽಯಂ
ಪಾಪಂ ಚರತಿ ಪೂರುಷಃ ।

ನಮ್ಮೆಲ್ಲರ ಪರವಾಗಿ ಅರ್ಜುನನು ಈ ಪ್ರಶ್ನೆಯನ್ನು ಮಾಡುತ್ತಿರುವನೆಂದು ನಮಗನಿಸುತ್ತದೆ. ತಿಳಿದೂ ತಿಳಿದೂ ನಾವು ಯಾಕೆ ಅಕೃತ್ಯವನ್ನು ಮಾಡುತ್ತಿರುವೆವೆಂಬುದನ್ನು ಪರಿಶೀಲಿಸಿ ನಮ್ಮ ಮೇಲೆ ಆಕ್ರಮಣವನ್ನು ಎಸಗುವ ದುಃಶಕ್ತಿಯ ಪರೀಕ್ಷಣವನ್ನು ಮಾಡುವುದರಿಂದ ಅದನ್ನು ಎದುರಿಸುವ ಶಕ್ತಿಯು ನಮಗೆ ಪ್ರಾಪ್ತವಾಗುವುದು. ಕಾಮವೇ ಈ ಪ್ರಬಲ ದುಃಶಕ್ತಿಯಾಗಿದ್ದು ಅದೇ

ನಮ್ಮ ಪರಮಶತ್ರುವಾಗಿದೆ ಎಂದು ಶ್ರೀಕೃಷ್ಣನು ನಿರೂಪಿಸುತ್ತಾನೆ. ಇಲ್ಲಿ ಕಾಮವೆಂದರೆ ನಮ್ಮನ್ನು ಜೀವನದ ಉತ್ತುಂಗ ಶಿಖರಕ್ಕೆ ಏರಿಸಬಲ್ಲ ಉದಾತ್ತ ಆಕಾಂಕ್ಷೆಯಲ್ಲ. ನಮ್ಮನ್ನು ಸಂಸಾರದ ಕತ್ತಲ ಗುಹೆಯಲ್ಲಿ ಕೆಡಹಬಲ್ಲ ತುಚ್ಛ ಆಶೆ- ಲಾಲಸೆಗಳನ್ನು ಇಲ್ಲಿ 'ಕಾಮ' ಎನ್ನುವ ಶಬ್ದದಿಂದ ಕರೆಯಲಾಗಿದೆ. ನಮ್ಮ ಎಲ್ಲ ದುಷ್ಟ ವೃತ್ತಿಗಳಿಗೆ ಈ ಕಾಮವೇ ಮೂಲವಾಗಿದೆ. ಕಾಮ ಮತ್ತು ಅದರಿಂದ ಉದ್ಭವಿಸುವ ಕ್ರೋಧ ಇವೆರಡರಿಂದಲೇ ಎಲ್ಲ ಅವ್ಯವಹಾರಗಳೂ ನಡೆಯುವವು. ತಮ್ಮ ದುರಾಶೆಗಳನ್ನು ಪೂರೈಸಲು ಸುಖ-ಸಂಪತ್ತುಗಳ ಲಾಲಸೆಯಿಂದ ಹೀನಕೃತ್ಯಗಳನ್ನು ಜನರು ಎಸಗುವರು. ಈ ಲಾಲಸೆಯನ್ನು ಪೂರೈಸಲು ಅಡೆತಡೆಯಾದಾಗ ಕೋಪವು ಉಕ್ಕಿಬಂದು ಅದರ ಆವೇಶದಲ್ಲಿ ಹಿಂಸಾಕೃತ್ಯಗಳನ್ನು ನಡೆಸುವರು. ಪ್ರತಿಯೊಂದು ದುರ್ವ್ಯವಹಾರದ ಹಿಂದೆ ಕಾಮದ ಕೈವಾಡ ಇದ್ದೇ ಇರುವುದು. ಸ್ವಕರ್ತವ್ಯದ ಕಡೆಗೆ ಆಸ್ಥೆ ಇರುವವನು ಈ ಮಹಾವೈರಿಯನ್ನು ನಿಗ್ರಹಿಸಲು ಸರ್ವಪ್ರಯತ್ನ ಮಾಡಬೇಕು.

ಪ್ರತಿಹತವಾದ ಕಾಮವು ಕ್ರೋಧಕ್ಕೆ ಕಾರಣವಾಗುವುದರಿಂದ

**ಕಾಮ ಏಷ ಕ್ರೋಧ ಏಷಃ ।**

ಎಂಬುದಾಗಿ ಕಾಮವನ್ನು ಕ್ರೋಧವೆಂದು ಕರೆದಿದ್ದಾರೆ. ಅಪೇಕ್ಷಿಸಿದ ಭೋಗ್ಯವಸ್ತುಗಳನ್ನು ಬೇಕಾದಂತೆ ಪೂರೈಸಿ ಕಾಮವನ್ನು ತಣಿಸಲು ಸಾಧ್ಯವಿಲ್ಲ. ಇದು;

**ಮಹಾಶನೋ ಮಹಾಪಾಪ್ಮಾ ।**

ಎಷ್ಟು ನೀಡಿದರೂ ಅದನ್ನು ಸ್ವಾಹಾಕಾರ ಮಾಡಿ ಇನ್ನೂ ಹೆಚ್ಚು ಪ್ರಜ್ವಲಿತವಾಗುವುದು. ಕಟ್ಟಿಗೆಯನ್ನು ಹಾಕಿ ಬೆಂಕಿಯನ್ನು ತಣಿಸಲು ಶಕ್ಯವಾಗಬಹುದೆ?

**ನ ಜಾತು ಕಾಮಃ ಕಾಮಾನಾ**
**ಮುಪಭೋಗೇನ ಶಾಮ್ಯತಿ ।**

''ಕಾಮೋಪಭೋಗವೆಷ್ಟು ಮಾಡಿದರೂ ಅದರಿಂದ ನಮ್ಮ ಕಾಮನೆ ತಣಿಯುವುದಿಲ್ಲ''

ದೀರ್ಘಕಾಲದವರೆಗೆ ಸುಖಭೋಗದ ಪರಮಾವಧಿಯನ್ನು ಅನುಭವಿಸಿದ ಯಯಾತಿ ರಾಜನ ಉದ್ಗಾರವಿದು! ಮುಪ್ಪು ಹೊಂದಿದ ಮೇಲೂ ಪುನಃ ತಾರುಣ್ಯವನ್ನು ಪಡೆದು ಬಹುಕಾಲದವರೆಗೆ ರಾಜಭೋಗವನ್ನು ಪಡೆದರೂ ತನ್ನ ಕಾಮನೆಯು ಹಿಂಗದೆ ಮತ್ತಷ್ಟು ಪ್ರವೃದ್ಧವಾಗಿರುವುದನ್ನೇ ಆತನು ಕಂಡನು. ಕಾಮದ ಉಪಾಸನೆಯಿಂದಲ್ಲ, ಅದರ ನಿಗ್ರಹದಿಂದಲೇ ನಾವು ಅದನ್ನು ಹಿಡಿತದಲ್ಲಿ ಇಟ್ಟುಕೊಳ್ಳಬಲ್ಲೆವೆಂಬ ಸತ್ಯವು ಅವನಿಗೆ ಗೋಚರವಾಯಿತು.

ಮುಂಬಯಿ ನಗರದಲ್ಲಿ ಹೋದ ವರ್ಷ ದಂಪತಿಗಳಿಬ್ಬರು ಆತ್ಮಹತ್ಯೆ ಮಾಡಿಕೊಂಡರು. ಮನೆ, ಸಂಬಳ ಎಲ್ಲವೂ ಅನುಕೂಲವಿತ್ತು. ಅವರು ತಮ್ಮ ಆತ್ಮಹತ್ಯೆಗೆ ಕೊಟ್ಟ ಕಾರಣವಿಂತಿದೆ : 'ತಮಗೆ air-conditioned ಕೋಣೆಯನ್ನು ಕಟ್ಟಿಕೊಳ್ಳಲು ಬೇಕಾದ ಆರ್ಥಿಕ ಅನುಕೂಲತೆಯಿಲ್ಲವೆಂಬ ನಿರಾಶೆಯಿಂದ ಜೀವನದಲ್ಲಿ ಜಿಗುಪ್ಸೆ ಉಂಟಾಗಿ ತಾವು ಆತ್ಮಹತ್ಯೆ ಮಾಡಿಕೊಳ್ಳುವೆವು' ಎಂದು ಅವರು ಬರೆದಿಟ್ಟಿದ್ದರು. ವಿಷಯಭೋಗ ಸೌಕರ್ಯಗಳು ಹೆಚ್ಚಿದಷ್ಟು ನಮ್ಮ ಸುಖಲೋಲುಪತೆಯು ಹೆಚ್ಚಿ ನಾವು ಎಷ್ಟು ಅತೃಪ್ತಿ, ದುರ್ಬಲತೆಯನ್ನು ಹೊಂದಬಲ್ಲೆವು ಎಂಬುದಕ್ಕೆ ಇದು ಸರಿಯಾದ ನಿದರ್ಶನ. ಈ ಆತ್ಮಹತ್ಯೆಯು ೨೦ನೇ ಶತಮಾನದ ಜನರ ಮನಃಸ್ಥಿತಿಯನ್ನು ವ್ಯಕ್ತಪಡಿಸುತ್ತದೆ. ಭೋಗಾನುಭವದ ಬಗ್ಗೆ ವೈಜ್ಞಾನಿಕ ಸೌಕರ್ಯಗಳು ಹೆಚ್ಚಿದಷ್ಟೂ ನಮ್ಮ ಆಶೆ-ಅಪೇಕ್ಷೆಗಳು ಮತ್ತೂ ವಿಸ್ತಾರಗೊಳ್ಳುತ್ತ ಜೀವನದಲ್ಲಿ ಅತೃಪ್ತಿ, ಅಶಾಂತಿಗಳು ನೆಲೆಸುವವು. ಪಾಶ್ಚಾತ್ಯ ದೇಶದಲ್ಲಿ ಒಬ್ಬ ರಾಜನಿದ್ದನು. ದಿನದಲ್ಲಿ ಎಷ್ಟು ಸಲ ತಿಂದರೂ ಆತನಿಗೆ ತೃಪ್ತಿ ಇಲ್ಲ. ಇನ್ನೂ ತಿನ್ನಬೇಕೆಂಬ ಆಶೆ. ಪರಿಮಿತವಾದ ಹೊಟ್ಟೆಗೆ ಅವನ ಆಶೆಯನ್ನು ಪೂರೈಸಲು ಆಗಲಿಲ್ಲ. ಕೊನೆಗೆ ವೈದ್ಯರ ಸಹಾಯವನ್ನು ಪಡೆದು ದಿನವೂ ಇಪ್ಪತ್ತು ಮೂವತ್ತು ಸಲ ತಾನು ಉಂಡದ್ದನ್ನು ವಾಂತಿ ಮಾಡಿಸಿ ತಿರುಗಿ ತಿನ್ನುತ್ತಿದ್ದಂತೆ. ಕಾಮನೆಯ ಚಾಪಲ್ಯವು ನಮ್ಮನ್ನು ಈ ರೀತಿ ಕುಣಿಸುತ್ತದೆ. ಒಂದು ಪ್ರಸಿದ್ಧ ವಚನವಿದೆ. 'ಮೊದಲು ಮನುಷ್ಯನು ಮದ್ಯವನ್ನು ಕುಡಿಯಲು ಉಪಕ್ರಮಿಸುತ್ತಾನೆ. ಆಮೇಲೆ ಮದ್ಯವೇ ಮನುಷ್ಯನನ್ನು ಕುಡಿಯುತ್ತದೆ'. ಅರ್ಥಾತ್ ಅಂತಹ ದುಶ್ಚಟಕ್ಕೆ ತಾನು ಪೂರ್ಣ ಬಲಿಯಾಗಿ ತನ್ನ ಸ್ವಾತಂತ್ರ್ಯವನ್ನೇ ಕಳೆದುಕೊಳ್ಳುತ್ತಾನೆ. ಹೀಗೆ ನಮ್ಮ

ಅಪೇಕ್ಷೆಯನ್ನೆಲ್ಲ ಪೂರೈಸಿಕೊಂಡು ನಾವು ನಮ್ಮ ಕಾಮವನ್ನು ಹಿಂಗಿಸಿಕೊಳ್ಳಬಹುದೆಂದು ಸರ್ವಥಾ ಭಾವಿಸಬಾರದು. ವಿಷಯಭೋಗಗಳಿಂದ ಕಾಮವು ಮತ್ತೂ ಪೆಡಂಭೂತವಾಗಿ ಕೊಬ್ಬಿ ನಮ್ಮನ್ನು ಪೂರ್ಣವಾಗಿ ಪಾದಾಕ್ರಾಂತಗೊಳಿಸುವುದು. ಆಹಾರವನ್ನು ನೀಡಿ ಉದರಾಗ್ನಿಯನ್ನು ತಣಿಸಬಹುದಾದರೂ ಕಾಮಾಗ್ನಿಯನ್ನು ತೃಪ್ತಿಪಡಿಸಲು ಸಾಧ್ಯವಿಲ್ಲ. ಆದ್ದರಿಂದಲೇ-

**ದುಷ್ಪೂರೇಣಾನಲೇನ ಚ ।**

ಎಂದು ಗೀತೆಯಲ್ಲಿ ಕಾಮವನ್ನು ವರ್ಣಿಸಲಾಗಿದೆ.

## ಕಾಮದ ಆಕ್ರಮಣ ವಿಧಾನ

**ಧೂಮೇನಾವ್ರಿಯತೇ ವಹ್ನಿಃ**
**ಯಥಾದರ್ಶೋ ಮಲೇನ ಚ ।**
**ಯಥೋಲ್ಬೇನಾವೃತೋ ಗರ್ಭ-**
**ಸ್ತಥಾ ತೇನೇದಮಾವೃತಮ್ ॥**

ಎಲ್ಲ ಜೀವರೂ ಈ ಕಾಮದ ಪ್ರಭಾವಕ್ಕೆ ಬಲಿಯಾದವರೇ. ಕೆಲವರು ಕಡಿಮೆ, ಕೆಲವರು ಹೆಚ್ಚು. ಅಂತೂ ಈ ಕಾಮದ ಸೆಳೆತಕ್ಕೆ ಸಿಲುಕದ ವ್ಯಕ್ತಿಯೇ ಇಲ್ಲವೆನ್ನಬಹುದು. ಬೆಂಕಿಗೆ ಹೊಗೆಯಂತೆ ಕೆಲವರಿಗೆ ಕಾಮದ ಆವರಣವಿರುತ್ತದೆ. ಆ ಕಾಮದ ಹೊಗೆಯ ಮಧ್ಯದಲ್ಲೂ ಅವರ ವ್ಯಕ್ತಿತ್ವದ ಪ್ರಭೆಯು ಪ್ರಕಾಶಮಾನವಾಗಿ ಕಾಣಬಹುದಾಗಿದ್ದರೂ ಅದು ಕಾಮದಿಂದಾಗಿ ಸ್ವಲ್ಪಮಟ್ಟಿಗಾದರೂ ಮಸುಕಾಗಿ ಇರುತ್ತದೆ. ಮಣ್ಣು ಹಿಡಿದ ಕನ್ನಡಿಯಂತೆ ಕೆಲವರು ಇನ್ನೂ ಹೆಚ್ಚು ಕಾಮದ ಆವರಣಕ್ಕೆ ತುತ್ತಾದರೆ, ಗರ್ಭಕ್ಕೆ ಅದರ ಹೊರಗಿನ ಚರ್ಮದ ಆವರಣದಂತೆ ಕೆಲವರನ್ನು ಕಾಮವು ಪೂರ್ತಿಯಾಗಿ ಮುಚ್ಚಿಬಿಡುವುದು. ಹೀಗೆ ಕಾಮವು ವ್ಯಕ್ತಿ ವೈಚಿತ್ರ್ಯದಿಂದ ಎಲ್ಲ ಜೀವರ ಮೇಲೂ ಆಕ್ರಮಣವನ್ನು ನಡೆಸುತ್ತಿರುವುದು.

**ಧೂಮೇನಾವ್ರಿಯತೇ ವಹ್ನಿಃ ।**

ಕಾಮವು ನಮ್ಮನ್ನು ಆವರಿಸಿದಾಗ ನಮಗೆ ಭಗವಂತನ ಸ್ವರೂಪವೇ ಗೋಚರವಾಗಲಾರದು. ಭಗವಂತನ ಈ ಸ್ವರೂಪಕ್ಕೆ ಈ ಕಾಮ, ಅಜ್ಞಾನಗಳಿಂದ ಏನೂ ಹಾನಿ, ಪರಿಣಾಮಗಳಾಗದಿದ್ದರೂ ನಮಗೆ ಆಗಬಹುದಾದ ಪರಮಾತ್ಮನ

ದರ್ಶನವನ್ನು ಇದು ತಡೆಹಿಡಿಯಬಲ್ಲದು. ಮೋಡ ಮುಸುಕಿದಾಗ ಸೂರ್ಯನ ಪ್ರಭಾವಲಯಕ್ಕೆ ಏನೂ ಚ್ಯುತಿ ಇರುವುದಿಲ್ಲ. ಸುತ್ತಲೂ ಹೊಗೆಯು ಮುತ್ತಿದಾಗಲೂ ಬೆಂಕಿಯ ಶಕ್ತಿ, ಪ್ರಕಾಶಗಳು ಅಬಾಧಿತವಾಗಿಯೇ ಇರುವವು. ಆದರೆ ನಾವು ಮಾತ್ರ ಆ ಬೆಳಕನ್ನು ಅನುಭವಿಸದಂತೆ ಮಾಡುವಲ್ಲಿ ಈ ಮೋಡ, ಹೊಗೆಗಳು ಯಶಸ್ವಿಗಳಾಗುವವು. ಅದರಂತೆಯೇ ಈ ಕಾಮದಿಂದ ಪರಮಾತ್ಮನಿಗೆ ಏನೂ ಸಂಭವಿಸದಿದ್ದರೂ ನಮಗೆ ಮಾತ್ರ ಭಗವಂತನು ಹೊಗೆ ತುಂಬಿದ ಬೆಂಕಿಯಂತೆ ಅಗೋಚರನಾಗುವನು. ಇದು ಕಾಮದಿಂದ ಭಗವಂತನ ವಿಷಯದಲ್ಲಿ ನಮಗೆ ಆಗಬಹುದಾದ ಅನಾಹುತ.

**ಯಥಾದರ್ಶೋ ಮಲೇನ ಚ ।**

ಅದರಂತೆ ಕಾಮದಿಂದ ನಮ್ಮ ಅಂತಃಕರಣವು ಮಲಿನವಾಗುವುದು. ವಸ್ತುವನ್ನು ಯಥಾವತ್ತಾಗಿ ತೋರಿಸುವ ಅದರ ಶಕ್ತಿ ಕುಂಠಿತವಾಗುವುದು. ಸ್ವಚ್ಛವಾದ ಕನ್ನಡಿಯೇ ನಮಗೆ ವಸ್ತುವನ್ನು ತೋರಿಸಬಲ್ಲದು. ಕೊಳೆಹಿಡಿದ ಕನ್ನಡಿಯಲ್ಲಿ ವಸ್ತುವು ಪ್ರತಿಬಿಂಬಿತವಾಗಲಾರದು. ಅಂತಃಕರಣದ ಸ್ಥಿತಿಯೂ ಹೀಗೆಯೇ. ಕಾಮದಿಂದ ಆವೃತವಾದಾಗ ಅದರ ಅಭಿವ್ಯಕ್ತಿಶಕ್ತಿಯೇ ನಷ್ಟಪ್ರಾಯವಾಗುವುದು.

**ಯಥೋಲ್ಬೇನಾವೃತೋ ಗರ್ಭಃ ।**

ಕಾಮದ ಹಿಡಿತಕ್ಕೆ ಒಳಗಾದ ಜೀವನು ಏನೂ ಮಾಡಲಾರದೆ ತೊಳಲಾಡುವ ಪರಿಸ್ಥಿತಿಯಲ್ಲಿರುತ್ತಾನೆ. ಗರ್ಭದಲ್ಲಿ ಶಿಶುವು, ಸುತ್ತಲೂ ಆವರಣವಿರುವುದರಿಂದ ಕೈಕಾಲುಗಳನ್ನು ಅಲುಗಾಡಿಸಲು ಸಮರ್ಥವಾಗದೆ ಕ್ಲೇಶಪಡುತ್ತಿರುತ್ತದೆ. ಕಾಮದ ಆಕ್ರಮಣಕ್ಕೆ ತುತ್ತಾದ ಜೀವನಿಂದಲೂ ಯಾವ ಉದ್ದಿಷ್ಟ ಕಾರ್ಯವೂ ನೆರವೇರಲಾರದು. ಗರ್ಭಸ್ಥ ಶಿಶುವಿನಂತೆ ಅವನು ಯಾವ ವ್ಯಾಪಾರದಲ್ಲೂ ಅಸಮರ್ಥನಾಗುತ್ತಾನೆ.

ಹೀಗೆ ಈ ಶ್ಲೋಕದಲ್ಲಿ ಬೇರೆಬೇರೆ ಮಟ್ಟದ ಜನರು ಹೇಗೆ ಕಾಮದ ಉಪದ್ರವಕ್ಕೆ ಒಳಗಾಗುವರೆಂಬುದನ್ನು ಹಾಗೂ ಒಬ್ಬನೇ ವ್ಯಕ್ತಿಯು ಸ್ವರೂಪ, ಅಂತಃಕರಣ, ಪರಮಾತ್ಮ ಈ ಮೂರು ವಿಷಯಗಳ ಬಗ್ಗೆ ಕಾಮದಿಂದ ಯಾವ

ರೀತಿಯ ಅನಾಹುತಕ್ಕೆ ತುತ್ತಾಗುವನೆಂಬುದನ್ನೂ ಸುಂದರವಾದ ರೀತಿಯಲ್ಲಿ ವಿವರಿಸಲಾಗಿದೆ.

**ವಿದ್ಧ್ಯೇನಮಿಹ ವೈರಿಣಂ ।**

ಈ ಆಂತರಿಕ ಶತ್ರುವನ್ನು ಪ್ರಪ್ರಥಮವಾಗಿ ನಾವು ನಿಗ್ರಹಿಸಬೇಕು.

## ಜ್ಞಾನವು ಕಾಮನಿಗ್ರಹದ ಸಾಧನ

ಇಂದ್ರಿಯ, ಮನಸ್ಸುಗಳಂತಹ ದುರ್ಗಗಳಲ್ಲಿ ನಿಂತು ನಮ್ಮ ಮೇಲೆ ಆಭಿಯೋಗವನ್ನು ನಡೆಸುವ ಕಾಮ, ಕ್ರೋಧಗಳನ್ನು ಹತ್ತಿಕ್ಕಲು ಇಂದ್ರಿಯ ಗಳನ್ನು ಮೊದಲಾಗಿ ನಾವು ಸ್ವಾಧೀನಪಡಿಸಿಕೊಳ್ಳಬೇಕು. ಕಾಮ, ಕ್ರೋಧಗಳನ್ನು ಉಚ್ಚಾಟನೆಗೊಳಿಸುವುದಕ್ಕೆ ಇಂದ್ರಿಯಗಳನ್ನು ಹಿಡಿತದಲ್ಲಿ ಇಟ್ಟುಕೊಳ್ಳುವುದೇ ಪ್ರಥಮೋಪಾಯವಾಗಿದೆ. ಇಂದ್ರಿಯಗಳನ್ನು ಗೆದ್ದು ಕಾಮ, ಕ್ರೋಧಗಳನ್ನು ನಿರ್ನಾಮಗೊಳಿಸುವ ಈ ಆಧ್ಯಾತ್ಮಿಕ ಯುದ್ಧದಲ್ಲಿ ಜ್ಞಾನವೇ ಆಯುಧ ವಾಗಿರುವುದು. ಶಾಸ್ತ್ರೀಯವಾದ ಜ್ಞಾನದಿಂದ ನಮ್ಮ ವ್ಯಕ್ತಿತ್ವ ಹಾಗೂ ಇತಿ-ಮಿತಿಗಳ ಅರಿವುಂಟಾಗಿ ನಮ್ಮ ಕರ್ತವ್ಯಗಳ ಸ್ಮರಣೆಯುಂಟಾಗಿ ಕ್ರಮಕ್ರಮವಾಗಿ ಇಂದ್ರಿಯದ ಮೇಲೆ ಪ್ರಭುತ್ವವನ್ನು ಸ್ಥಾಪಿಸಲು ನಮಗೆ ಸಾಧ್ಯವಾಗುವುದು. ಬುದ್ಧಿ ಮನಸ್ಸನ್ನು ಕೆರಳಿಸುವುದು, ಮನಸ್ಸು ಇಂದ್ರಿಯವನ್ನು ಕೆರಳಿಸುವುದು; ಇದರಿಂದ ಕಾಮ, ಕ್ರೋಧಾದಿರೂಪಗಳಾದ ವಿವಿಧ ಪ್ರವೃತ್ತಿಗಳು ಉಂಟಾಗುವವು. ಈ ಇಂದ್ರಿಯ, ಮನಸ್ಸು, ಬುದ್ಧಿಗಳಿಗೂ ಅವುಗಳಿಗೆ ಮೂಲವಾದ ಪ್ರಕೃತಿ ಮುಂತಾದ ತತ್ತ್ವಗಳಿಗೂ ಪ್ರಚೋದಕ ಶಕ್ತಿಗಳಾದ ದೇವತೆಗಳನ್ನು ಅರಿತುಕೊಂಡು ಆ ಎಲ್ಲ ದೈವೀಶಕ್ತಿಗಳಿಗೂ ನಿಯಾಮಕನಾದ, ಸರ್ವೋತ್ತಮನಾದ ಪರಮಾತ್ಮನನ್ನು ಅರಿತುಕೊಂಡರೆ ಇಂದ್ರಿಯಗಳನ್ನು ಗೆಲ್ಲುವುದು ನಮಗೆ ಲೀಲಾಜಾಲವಾಗುವುದು. ಆಯಾಯ ಪದಾರ್ಥಗಳ ಮೂಲಭೂತ ಶಕ್ತಿಯನ್ನು ಅರಿತುಕೊಂಡಿರುವುದರಿಂದಲೇ ಮಾನವನಿಗೆ ಪ್ರಕೃತಿಯ ಮೇಲೆ ವಿಶೇಷ ಹಿಡಿತವಿದೆ. ತನಗೆ ಬೇಕಾದಂತೆ ಪ್ರಕೃತಿಯನ್ನು ಬಳಸಲು ಆತನು ಸಮರ್ಥನಾಗಿದ್ದಾನೆ. ಈ ಪ್ರಕೃತಿ ಹಾಗೂ ಇಂದ್ರಿಯಗಳ ಪ್ರಚೋದಕವಾದ ಮೂಲಭೂತ ಚೇತನಶಕ್ತಿಗಳನ್ನು ನಾವು

ಅರಿತುಕೊಳ್ಳುವುದರಿಂದ ಪ್ರಕೃತಿ ಹಾಗೂ ಇಂದ್ರಿಯಗಳ ಮೇಲೆ ವಿಶೇಷ ಅಧಿಕಾರವನ್ನು ಚಲಾಯಿಸಲು ನಮಗೆ ಸಾಧ್ಯವಾಗುವುದು. ಪ್ರಕೃತಿ ಹಾಗೂ ಇಂದ್ರಿಯಗಳಲ್ಲಿ ಸಾಕಷ್ಟು ವಿಧಾಯಕ ಶಕ್ತಿಯು ಹುದುಗಿದೆ. ಆದರೆ ಅದು ವ್ಯರ್ಥವಾಗಿ ಹರಿದುಹೋಗುವುದೇ ಹೆಚ್ಚು. ಪ್ರಾಕೃತಿಕ ಸಂಪತ್ತಿನ ಅಪವ್ಯಯದಂತೆ ನಮ್ಮ ಇಂದ್ರಿಯ ಶಕ್ತಿಯ ಅಪವ್ಯಯವೂ ದೊಡ್ಡದಾದ ಸಾರ್ವಜನಿಕ ಹಾನಿಯೆಂದೇ ಭಾವಿಸಬೇಕು ಹರಿದು ಹೋಗುತ್ತಿರುವ ನೀರಿನ ಸದುಪಯೋಗವಾಗಲು ಅಣೆಕಟ್ಟುಗಳನ್ನು ಕಟ್ಟಿ ನೀರಿನ ಪ್ರವಾಹವನ್ನು ನಿಯಂತ್ರಿಸಿ ಅದನ್ನು ಯೋಗ್ಯ ರೀತಿಯಿಂದ ಬಳಸುವ ಪ್ರಯತ್ನ ನಡೆಯುವಂತೆ, ನಮ್ಮ ಐಂದ್ರಿಯಕ ಶಕ್ತಿಗಳ ನಿಯಂತ್ರಣದ ಕಡೆಗೂ ನಾವು ಗಮನ ನೀಡಬೇಕು. ಅವುಗಳನ್ನು ನಾವು ಸರಿಯಾಗಿ ನಿಯಂತ್ರಿಸಿ ನಮ್ಮ ಶಾರೀರಿಕ ಹಾಗೂ ಮಾನಸಿಕ ಶಕ್ತಿಗಳ ಕಣಕಣಗಳೂ ಯೋಗ್ಯ ವಿಧಾಯಕ ಕಾರ್ಯದಲ್ಲಿ ಉಪಯೋಗಿಸಲ್ಪಡುವಂತಹ ಕ್ರಮಬದ್ಧ ಜೀವನವು ನಮ್ಮದಾಗಿರಬೇಕು.

ಪ್ರತಿಯೊಂದು ಜಡವಸ್ತುವಿನಿಂದಲೂ ಅದರದರ ಪ್ರಾಕೃತಿಕ ಸ್ವಭಾವಕ್ಕನುಗುಣವಾಗಿ ವಿವಿಧ ಕಾರ್ಯಗಳು ನಡೆಯಲು ಎರಡು ತರಹದ ಜೀವನಶಕ್ತಿಗಳು ಆ ಪದಾರ್ಥಗಳ ಒಳಗೆ ಇದ್ದು ಪ್ರಚೋದಕಗಳಾಗಿವೆ. ದೇವತೆಗಳು ಹಾಗೂ ಸರ್ವೋತ್ತಮನಾದ ಪರಮಾತ್ಮ ಇವೇ ಆ ಎರಡು ತತ್ತ್ವಗಳು. ಎಲ್ಲ ಜಡಪದಾರ್ಥಗಳ ಒಳಗೆ ಇದ್ದು ಜಗಚ್ಚಾಲಕನಾದ ಶ್ರೀಹರಿಯ ನಿಯಂತ್ರಣದಲ್ಲಿ ಆಯಾಯ ವಸ್ತುಗಳಿಗೆ ಕಾರ್ಯಚಾಲನೆಯನ್ನು ನೀಡುವ ಈ ದೇವತೆಗಳನ್ನು ಅಭಿಮಾನಿಗಳೆಂದೂ ಜಗತ್ತಿನ ಮುಖ್ಯ ಸೂತ್ರಚಾಲಕನಾಗಿ, ಸರ್ವವ್ಯಾಪಕನಾಗಿ ಈ ದೇವತೆಗಳ ಹಾಗೂ ಸಕಲ ಜಡ- ಜೀವರ ಚಾಲನ- ಪಾಲನಗಳನ್ನು ನಡೆಸುವ ಶ್ರೀಮನ್ನಾರಾಯಣನನ್ನು ಅಂತರ್ಯಾಮಿಯೆಂದೂ ಕರೆಯಲಾಗಿದೆ. ಈ ಅಭಿಮಾನಿ ಹಾಗೂ ಅಂತರ್ಯಾಮಿ ದೇವತೆಗಳನ್ನು ತಿಳಿದು ಅವರನ್ನು ಒಲಿಸಿಕೊಳ್ಳುವುದರಿಂದ ಜಗತ್ತಿನ ಮೇಲೆಯೇ ಯೋಗ್ಯ ಹಿಡಿತವನ್ನು ನಾವು ಸಾಧಿಸಿಕೊಳ್ಳಬಹುದು. ಚಂದ್ರ, ಸೂರ್ಯ, ವರುಣ, ಯಮ, ಇಂದ್ರ, ಶಿವ, ವಾಯು, ಬ್ರಹ್ಮ ಮುಂತಾದ ದೇವತೆಗಳ ಶಕ್ತಿ, ಗುಣ, ಸ್ವರೂಪಗಳನ್ನೂ ಅವರಲ್ಲಿ ಪರಸ್ಪರವಾಗಿ ಇರುವ ಅಂತರ ಹಾಗೂ ಒಂದು ದೈವೀಶಕ್ತಿ ಇನ್ನೊಂದು

ದೈವೀಶಕ್ತಿಯನ್ನು ನಿಯಂತ್ರಿಸುವ ವಿಧಾನವನ್ನೂ ಅರಿತುಕೊಳ್ಳಬೇಕು. ಇದನ್ನೇ ದೇವತಾತಾರತಮ್ಯವೆಂದು ಹೇಳಲಾಗಿದೆ. ಪ್ರಾಕೃತಿಕ ವಸ್ತುಗಳಲ್ಲಿರುವ ಅನ್ಯೋನ್ಯ ಸಂಬಂಧಕ್ಕೆ, ಒಳಗಿರುವ ದೈವೀಶಕ್ತಿಗಳ ಪರಸ್ಪರ ಸಂಬಂಧವೂ ಕಾರಣವಾಗಿದೆ. ಒಂದು ಜಡವಸ್ತುವಿನಿಂದ ಇನ್ನೊಂದು ಪದಾರ್ಥವು ಹುಟ್ಟುವುದು. ಒಂದು ಇನ್ನೊಂದನ್ನು ನಿಯಂತ್ರಿಸುವುದು. ಇವುಗಳಿಗೆಲ್ಲ ಆಯಾಯ ಪದಾರ್ಥ, ಸ್ವಭಾವಗಳು ಕಾರಣವಾದಂತೆ ಒಳಗಿರುವ ಅಭಿಮಾನಿ ದೇವತೆಗಳ ಶಕ್ತಿತಾರತಮ್ಯ ಹಾಗೂ ಪರಸ್ಪರ ಸಂಬಂಧಗಳೂ ಕಾರಣವಾಗಿವೆ. ನಮ್ಮ ಜೀವನವು ವ್ಯವಸ್ಥಿತವಾಗಲು ವಿಷಯಪದಾರ್ಥಗಳು, ನಮ್ಮ ಶರೀರ, ಇಂದ್ರಿಯ, ಬುದ್ಧಿ, ಮನಸ್ಸು ಮುಂತಾದವುಗಳಲ್ಲಿ ಹುದುಗಿರುವ ದೇವತಾತತ್ತ್ವಗಳನ್ನೂ ಅವುಗಳ ತಾರತಮ್ಯಗಳನ್ನೂ ಅಂತರ್ಯಾಮಿಯಾದ ಸರ್ವೋತ್ತಮವಸ್ತುವನ್ನೂ ಅರಿತು ಅವುಗಳನ್ನು ಒಲಿಸಿಕೊಳ್ಳಬೇಕು. ಆಗ ಬುದ್ಧಿಯು ಮನಸ್ಸನ್ನೂ ಮನಸ್ಸು ಇಂದ್ರಿಯಗಳನ್ನೂ ಕೆರಳಿಸಲಾರವು. ಈ ದೈವೀಶಕ್ತಿಗಳ ಅನುಗ್ರಹ, ಸಹಕಾರ ಗಳಿಂದಲೇ ಕಾಮಕ್ರೋಧಾದಿ ಆಸುರೀಶಕ್ತಿಗಳನ್ನು ಬಲವಾಗಿ ಎದುರಿಸಿ ಸದೆಬಡಿಯಲು ನಾವು ಸಮರ್ಥರಾಗುವೆವು. ಈ ಪರಾವರ ದೇವತಾ ತತ್ತ್ವಜ್ಞಾನವೇ ಕಾಮಕ್ರೋಧಾದಿ ದುಃಶಕ್ತಿಗಳ ದಮನಕ್ಕಾಗಿ ನಾವು ಉಪ ಯೋಗಿಸಬೇಕಾದ ದಿವ್ಯಾಯುಧವಾಗಿದೆ. ಈ ಭೂತ, ಭೌತಿಕ ವಸ್ತುಗಳನ್ನು ನಿಯಂತ್ರಿಸುವ ದಿವ್ಯಚೇತನರ ಜ್ಞಾನ, ಭಕ್ತಿ ಹಾಗೂ ಅವರ ಒಲವನ್ನು ಹೊಂದಿ ವಿಶಿಷ್ಟವಾದ ಆತ್ಮಬಲ ಹಾಗೂ ಕರ್ತವ್ಯದ ಪ್ರಜ್ಞೆಯನ್ನು ನಾವು ಪಡೆದರೆ ಕಾಮಕ್ರೋಧಾದಿ ಶತ್ರುಗಳು ನಮ್ಮ ಮೇಲೆ ಹೇಗೆ ಅಭಿಯೋಗ ಮಾಡಬಲ್ಲವು? ದೇವತೆಗಳ ಜ್ಞಾನ, ಭಕ್ತಿಗಳಿಲ್ಲದೆಯೇ ಕಣ್ಣಮುಂದೆ ಇರುವ ಜಡವಸ್ತುಗಳನ್ನು ಮಾತ್ರ ನಂಬಿ ನೀತಿ, ಸದ್ಗುಣ, ಸದಾಚಾರ, ಕರ್ತವ್ಯಗಳಿಂದ ನಾವು ಬಾಹಿರರಾಗಿ ಫಲಿಭವಾಗಿ ನಮ್ಮ ಆಂತರಿಕ ಶತ್ರುಗಳಿಗೆ ಬಲಿಯಾಗುತ್ತಿರುವೆವು.

ಏವಂ ಬುದ್ಧೇಃ ಪರಂ ಬುದ್ಧ್ವಾ
ಸಂಸ್ತಭ್ಯಾತ್ಮಾನಮಾತ್ಮನಾ ।
ಜಹಿ ಶತ್ರುಂ ಮಹಾಬಾಹೋ
ಕಾಮರೂಪಂ ದುರಾಸದಮ್ ॥

ದೇವತೆಗಳ ಹಾಗೂ ಭಗವಂತನ ತತ್ತ್ವಜ್ಞಾನದ ದಿವ್ಯಾಯುಧದಿಂದ ನಮ್ಮ ಆಂತರಿಕ ಶತ್ರುಗಳ ಜೊತೆಗೆ ಹೋರಾಟ ನಡೆಸಿ ನಾವು ವಿಜಯಿಗಳಾಗಿ ನಮ್ಮ ಸ್ವಧರ್ಮಗಳನ್ನೆಲ್ಲ ಸರಿಯಾಗಿ ತಿಳಿದು ಭಗವತ್ ಜ್ಞಾನಪೂರ್ವಕವಾಗಿ ಈ ಕರ್ತವ್ಯಮಾರ್ಗದಲ್ಲಿ ಮುನ್ನಡೆಯಲೇಬೇಕೆಂದು ಈ ಮೂರನೆಯ ಅಧ್ಯಾಯದಲ್ಲಿ ಭಗವಂತನು ವಿವರಿಸಿದ್ದಾನೆ.

## ಗೀತಾಧರ್ಮದ ಪ್ರಾಚೀನತೆ

ಗೀತೆಯು ನಿರೂಪಿಸಿದ ಈ ಕರ್ಮಯೋಗದ ಸಂದೇಶವು ಕೃಷ್ಣನಿಗಿಂತ ಪೂರ್ವದಲ್ಲಿ ಇರಲಿಲ್ಲ; ಇದು ಹೊಚ್ಚಹೊಸದಾಗಿ ನಿರೂಪಿಸಲ್ಪಟ್ಟಿದೆ ಎಂದು ಕೆಲವರು ಭಾವಿಸಿದ್ದಾರೆ. ವೇದಗಳು ಕರ್ಮವನ್ನು ಮಾತ್ರ ಪ್ರತಿಪಾದಿಸಿದ್ದಾದರೆ, ಉಪನಿಷತ್ತು ಕೇವಲ ಜ್ಞಾನದ ನಿರೂಪಣೆಯನ್ನು ಮಾಡಿದೆ. ಇವೆರಡರಿಂದಲೂ ಬೇರೆಯಾದ ಮೂರನೆಯ ಮಾರ್ಗವನ್ನು ಗೀತೆಯು ಬೋಧಿಸಿದೆಯೆಂದು ಇವರ ಅಭಿಪ್ರಾಯವಾಗಿದೆ. ಆದರೆ ಶ್ರೀಕೃಷ್ಣಪರಮಾತ್ಮನೇ

**ಸ ಏವಾಯಂ ಮಯಾ ತೇಽದ್ಯ**
**ಯೋಗಃ ಪ್ರೋಕ್ತಃ ಪುರಾತನಃ ।**

''ಪ್ರಾಚೀನವಾದ ಕರ್ಮಯೋಗದ ಸಂದೇಶವನ್ನೇ ನಿನಗೆ ನಾನು ಉಪದೇಶಿಸುತ್ತಿದ್ದೇನೆ'' ಎಂದು ಸ್ವತಃ ತಿಳಿಸಿರುವನು. ಆಸಕ್ತಿರಹಿತವೂ ಭಕ್ತಿ ಸಹಿತವೂ ಆದ ಈ ಕರ್ಮದ ಪದ್ಧತಿಯನ್ನು ತಾನು ಮೊದಲು ಸೂರ್ಯನಿಗೂ ಆತನು ಮನುವಿಗೂ ಮನುವು ಇಕ್ಷ್ವಾಕುವಿಗೂ ನಿರೂಪಿಸಿರುವುದಾಗಿಯೂ ಈ ಪರಂಪರೆಯನ್ನು ಮುಂದೆ ಬಹಳ ಮಂದಿ ರಾಜರ್ಷಿಗಳು ನಡೆಸಿಕೊಂಡು ಬಂದಿರುವರೆಂದೂ ಪರಮಾತ್ಮನು ಸ್ಪಷ್ಟವಾಗಿ ಹೇಳಿರುವನು. ಆದುದರಿಂದ ಗೀತೆಯ ವಿಚಾರ ಹೊಸದೇನೂ ಅಲ್ಲ. ವೇದೋಪನಿಷತ್ತುಗಳ ಅಭಿಪ್ರಾಯವನ್ನೇ ಗೀತೆಯ ರೂಪದಿಂದ ಶ್ರೀಕೃಷ್ಣನು ಹೊರಗೆಡಹಿರುವನು.

**ಕುರ್ವನ್ನೇವೇಹ ಕರ್ಮಾಣಿ**
**ಜಿಜೀವಿಷೇಚ್ಛತಂ ಸಮಾಃ ।**

ಏವಂ ತ್ವಯಿ ನಾನ್ಯಥೇತೋऽಸ್ತಿ
ನ ಕರ್ಮ ಲಿಪ್ಯತೇ ನರೇ ॥

ಎಂದು ಈಶಾವಾಸ್ಯೋಪನಿಷತ್ತಿನಲ್ಲಿ ಸಮಗೆ ಬಂಧಕವಾಗದಂತೆ ಕರ್ತವ್ಯವನ್ನು ಆಚರಿಸುವ ಪದ್ಧತಿಯನ್ನು ಸಂಕ್ಷಿಪ್ತವಾಗಿ ಹೇಳಲಾಗಿದೆ. ಅದರ ವಿವರಣೆಯನ್ನೇ ಗೀತೆಯಲ್ಲಿ ನಾವು ಕಾಣುವೆವು. ಸೂರ್ಯನಿಗೆ, ಮನುವಿಗೆ, ಬಂದಿರುವ ಈ ಉಪದೇಶವನ್ನು ಮನುಕುಲದಲ್ಲಿ ಹುಟ್ಟಿದ ನಾವೆಲ್ಲರೂ ಹೊಣೆಗಾರಿಕೆಯಿಂದ ಅನುಸರಿಸಬೇಕು. ಮಾನವರ ಆದಿಜನಕನೇ ಕರ್ಮ ಯೋಗದ ವಿಚಾರವನ್ನು ಮಾನವನಿಗೆ ಉಪದೇಶಿಸಿರುವುದನ್ನು ನಾವು ಗಮನದಲ್ಲಿಟ್ಟುಕೊಳ್ಳಬೇಕು. ಮೊದಲನೇ ಮಾನವನಿಂದಾರಂಭಿಸಿಯೇ ಈ ಕರ್ಮಯೋಗದ ಸಂದೇಶವು ಪ್ರಪಂಚದಲ್ಲಿ ಪ್ರವಾಹಿತವಾಗಿದ್ದು ಮಾನವರೆಲ್ಲರೂ ಇಡೀ ಲೋಕದ ಹಿತ ಹಾಗೂ ವ್ಯವಸ್ಥೆಯ ದೃಷ್ಟಿಯಿಂದ ಸಮಾಜದ ವ್ಯವಸ್ಥಾ ಸೂತ್ರದಂತಿರುವ ಅತ್ಯಂತ ಪ್ರಾಚೀನವಾದ ಈ ಕರ್ಮಯೋಗದ ಮಾರ್ಗವನ್ನು ಅನುಸರಿಸುವುದು ಅವಶ್ಯವಿದೆಯೆಂಬುದರಲ್ಲಿ ಸಂದೇಹವೇ ಉಳಿಯಲಾರದು.

## ಭಗವಂತನ ಅವತಾರ ಮತ್ತು ಅದರ ಉದ್ದೇಶ

ಶ್ರೀಕೃಷ್ಣನು ತಾನು ಕರ್ಮಯೋಗದ ಉಪದೇಶವನ್ನು ಸೂರ್ಯನಿಗೆ ಮಾಡಿರುವೆನೆಂದು ಹೇಳಿರುವನು. ದ್ವಾಪರಯುಗದಲ್ಲಿ ಇರುವ ಕೃಷ್ಣನು ಸೃಷ್ಟಿಯ ಆದಿಯಲ್ಲಿ ಸೂರ್ಯನಿಗೆ ಹೇಗೆ ಉಪದೇಶ ಮಾಡಿದನು ಎಂದು ಸಹಜವಾಗಿ ಏಳಬಹುದಾದ ಪ್ರಶ್ನೆಯನ್ನು ಶ್ರೀಕೃಷ್ಣನು ತನ್ನ ಅವತಾರದ ವಿಚಾರವನ್ನು ವಿವರಿಸಿ ಪರಿಹರಿಸುತ್ತಾನೆ.

ಜೀವನಿಗೆ ಅನೇಕ ಜನ್ಮಗಳೂ ಪರಮಾತ್ಮನಿಗೆ ಅನೇಕ ಅವತಾರಗಳೂ ಇವೆ. ತನ್ನ ಒಂದು ಜನ್ಮವನ್ನೇ ತನ್ನ ಸಮಗ್ರ ಜೀವನವೆಂದು ನಾವು ಭಾವಿಸಬಾರದು. ಧರ್ಮಾಚರಣೆಯನ್ನು ಮಾಡಿಕೊಂಡಿದ್ದರೂ ಜೀವನದಲ್ಲಿ ಬಹಳ ದುಃಖ ಕಷ್ಟಗಳನ್ನು ಅನೇಕರು ಅನುಭವಿಸುತ್ತಾರೆ. ಅಧರ್ಮಶೀಲರಾಗಿ ಸ್ವೇಚ್ಛಾಚಾರಿಗಳಾಗಿದ್ದರೂ ಜೀವನದ ಸಕಲ ಸುಖ, ಭೋಗ, ವಿಲಾಸಗಳನ್ನು

ಪಡೆಯುವವರೂ ಇದ್ದಾರೆ. ಆದ್ದರಿಂದ ಧರ್ಮಾಚರಣೆಯೇ ಯಾಕೆ ಬೇಕು ಎಂದು ಕೆಲವರು ಪ್ರಶ್ನಿಸುತ್ತಾರೆ. ತನ್ನ ಒಂದು ಜನ್ಮವೇ ತನ್ನ ಇಡೀ ಜೀವನವೆಂಬ ಭಾವನೆಯಿಂದಲೇ ಇಂತಹ ಪ್ರಶ್ನೆಗಳು ಉದ್ಭವಿಸುವವು. ಕಳ್ಳನೂ ಕಳ್ಳತನ ಮಾಡಿದ ಒಂದೆರಡು ದಿನಗಳನ್ನು ಸುಖಸಂತೋಷಗಳಲ್ಲೇ ಕಳೆಯಬಹುದು. ಔಷಧೋಪಚಾರ ಮಾಡಿದ ಒಂದೆರಡು ದಿನಗಳಲ್ಲಿ ಅದರ ಲಾಭವು ದೊರಕದೆ ಇರಬಹುದು. ಕೆಲವೇ ದಿನಗಳ ಅನುಭವದಿಂದ ಒಂದರ ಲಾಭ-ಹಾನಿಗಳನ್ನು ಯಾರೂ ನಿರ್ಧರಿಸುವುದಿಲ್ಲ. ಪ್ರತಿಯೊಂದರ ಒಳ್ಳೆಯ ಹಾಗೂ ಕೆಟ್ಟ ಪರಿಣಾಮಗಳನ್ನು ಕಾಣಲು ನಾವು ಅನೇಕ ದಿನಗಳವರೆಗೆ ಪ್ರತೀಕ್ಷೆಯನ್ನು ಮಾಡಬೇಕಾಗುತ್ತದೆ. ಧರ್ಮ-ಅಧರ್ಮಗಳ ಬಗ್ಗೆಯೂ ಇದೇ ಮಾತು ಅನ್ವಯಿಸುತ್ತದೆ. ಆತ್ಮನ ವಿಶಾಲ ದೀರ್ಘಜೀವನದಲ್ಲಿ ಒಂದು ಜನ್ಮ ಎಂದರೆ ಒಂದು ದಿವಸವಿದ್ದ ಹಾಗೆ. ಕೇವಲ ಒಂದು ಜನ್ಮದ ಆಗುಹೋಗುಗಳಿಂದಲೇ ತನ್ನ ಎಲ್ಲ ಧರ್ಮ, ಕರ್ಮಗಳ ಫಲಿತಾಂಶಗಳನ್ನು ಅಳೆಯಬಾರದು. ತನ್ನ ಜೀವನದ ಒಂದು ಅಂಶವನ್ನು ಮಾತ್ರ ನೋಡಿ ತಾತ್ಕಾಲಿಕ ಸುಖದುಃಖಗಳಿಂದ ನಾವು ಮಾಡುವ ನಿರ್ಧಾರವು ಎಂದಿಗೂ ಸತ್ಯವಾಗಿರಲಾರದು. ಅಪೂರ್ಣವಾದ ಚಿತ್ರ ಹಾಗೂ ಶಿಲ್ಪಗಳು ವಿಕೃತವಾಗಿಯೇ ತೋರಬಹುದು. ಅಂತೆಯೇ ನಮ್ಮ ಜೀವನದ ಅಪೂರ್ಣ ದರ್ಶನದಿಂದಲೇ ಧರ್ಮ-ಅಧರ್ಮಗಳ ವಾಸ್ತವಿಕ ಪರಿಣಾಮಗಳನ್ನು ನಾವು ನಿರ್ಧರಿಸಲಾರೆವು. ಜೀವನು ಅನಾದಿಯಾಗಿದ್ದು ಒಂದು ದೈಹಿಕ ಜೀವನವು ಜೀವಾತ್ಮರ ಅನಂತವಾದ, ವಿಸ್ತಾರವಾದ ಜೀವನದ ಒಂದು ಭಾಗ ಮಾತ್ರವಾಗಿದೆಯೆಂದು ಶಾಸ್ತ್ರವು ಸಾರಿದೆ. ಈ ದೃಷ್ಟಿಯಿಂದ ನಮ್ಮ ಜೀವನವನ್ನೂ ಕರ್ತವ್ಯಾಕರ್ತವ್ಯಗಳನ್ನೂ ನಾವು ಪರೀಕ್ಷಿಸಿದರೆ ಜೀವನದ ಸುಖದುಃಖಗಳ ಸರಿಯಾದ ಅರ್ಥವು ನಮಗೆ ಆಗುವುದು. ತಾತ್ಕಾಲಿಕ ಸುಖದುಃಖಗಳಿಂದ ವಿಚಲಿತರಾಗದೆ ಧರ್ಮಮಾರ್ಗದಲ್ಲಿ ಮುನ್ನಡೆಯುವ ಧೀರಭಾವವೂ ನಮಗೆ ಪ್ರಾಪ್ತವಾಗುವುದು.

ಹೀಗೆ ಜೀವನಿಗೆ ಅನೇಕ ಜನ್ಮಗಳಿರುವಂತೆ ಪರಮಾತ್ಮನಿಗೂ ಅನೇಕ ಜನ್ಮಗಳಿವೆ. ಪರಮಾತ್ಮನ ಈ ಜನ್ಮವನ್ನು ಅವನ ಅವತಾರವೆಂದು ಕರೆಯಲಾಗು ವುದು. ಅವನು ಯಾವುದೇ ವಿಕಾರ, ಬಂಧನಗಳಿಗೆ ಒಳಗಾಗದೆ ಸ್ವೇಚ್ಛೆಯಿಂದ

ಜಗತ್ತಿನಲ್ಲಿ ಪ್ರಾದುರ್ಭವಿಸುವನು. ತನ್ನ ಪ್ರಾದುರ್ಭಾವದ ಹಿಂದುಮುಂದು ಗಳನ್ನು ಯಾವಾಗಲೂ ಭಗವಂತನು ಅರಿತಿರುವನು. ನಮಗಾದರೋ ನಮ್ಮ ಜನ್ಮದ ಪೂರ್ವಾಪರಗಳು ಗೊತ್ತಿರುವುದಿಲ್ಲ. ಹಿಂದೇನು ? ಮುಂದೇನು ? ಎಂಬುದನ್ನೇನೂ ತಿಳಿಯದೆ ಪರವಶರಾಗಿ ಪುಣ್ಯಪಾಪಗಳ ಹಿಡಿತಕ್ಕೆ ಸಿಲುಕಿ ಜಗತ್ತಿನ ಹುಟ್ಟುಸಾವುಗಳ ಚಕ್ರದಲ್ಲಿ ತಿರುಗುತ್ತಿರುವೆವು. ಇದೇ ಭಗವಂತನ ಹಾಗೂ ನಮ್ಮ ಪ್ರಾದುರ್ಭಾವಗಳಲ್ಲಿ ಇರುವ ಅಂತರವಾಗಿದೆ.

ತಾನ್ಯಹಂ ವೇದ ಸರ್ವಾಣಿ
ನ ತ್ವಂ ವೇತ್ಥ ಪರಂತಪ ।

ಸರ್ವಜ್ಞನೂ ಸ್ವತಂತ್ರನೂ ಆದ ಪರಮಾತ್ಮನ ಅವತಾರದ ಉದ್ದೇಶ ಏನೆಂಬುದನ್ನು ಶ್ರೀಕೃಷ್ಣನೇ ಸ್ವತಃ ವಿವರಿಸುತ್ತಾನೆ. ನಾವು ಯಾವುದೇ ಕಾರ್ಯವನ್ನು ಒಂದು ಪ್ರಯೋಜನದ ಅಪೇಕ್ಷೆಯಿಂದ ನೆರವೇರಿಸುವೆವು. ಪರಮಾತ್ಮನು ಇದೇ ರೀತಿ ಪ್ರಯೋಜನದ ಅಪೇಕ್ಷೆಯಿಂದ ಕಾರ್ಯವನ್ನು ಮಾಡಿದಲ್ಲಿ ಅವನ ಪೂರ್ಣತೆಗೆ ಭಂಗ ಬರುವುದು. ಯಾವುದಾದರೂ ಒಂದನ್ನು ಪಡೆಯಬೇಕೆಂಬ ಬಯಕೆಯು ಅದನ್ನು ಹೊಂದಿರದ ಅಪೂರ್ಣ ವ್ಯಕ್ತಿಯಲ್ಲೇ ಮೂಡಬಲ್ಲದು. ಸರ್ವವನ್ನೂ ಹೊಂದಿ ಪರಿಪೂರ್ಣ ವ್ಯಕ್ತಿಯಾದ ಭಗವಂತನಲ್ಲಿ ಯಾವ ಬಯಕೆಯೂ ಉಂಟಾಗಲು ಅವಕಾಶವಿಲ್ಲ. ಹೀಗಾಗಿ ಯಾವ ಪ್ರಯೋಜನದ ಆಶೆಯಿಂದ ಪರಮಾತ್ಮನು ಪ್ರವರ್ತಿಸುವನು? ಎಂಬ ಸಂದೇಹವು ಉದ್ಭವಿಸುವುದು ಸಹಜವಾಗಿದೆ. ಈ ಸಂದೇಹಕ್ಕೆ ಪರಿಹಾರವನ್ನು ಒದಗಿಸುವ ರೀತಿಯಲ್ಲಿ ತನ್ನ ಅವತಾರದ ಉದ್ದೇಶವನ್ನು ಸ್ವಾಮಿಯು ನಿರೂಪಿಸಿದ್ದಾನೆ. ಪೂರ್ಣನಾದ ಪರಬ್ರಹ್ಮನಲ್ಲಿ ಸ್ವಪ್ರಯೋಜನದ ಅಪೇಕ್ಷೆಯು ಇಲ್ಲದಿದ್ದರೂ ಕರುಣಾಪೂರ್ಣನಾದ ಆತನು ಪರರ ಉದ್ಧಾರ, ಅನುಗ್ರಹಗಳನ್ನು ಬಯಸಿ ಅದಕ್ಕಾಗಿ ಪ್ರವರ್ತಿಸಬಹುದು. ನಾವು ಪರರ ಉಪಕಾರಕ್ಕಾಗಿ ಶ್ರಮಿಸುವಾಗಲೂ ಅಂತರ್ಯದಲ್ಲಿ ಸ್ವಂತದ ಪ್ರಯೋಜನದ ಆಶೆಯು ಇದ್ದೇ ಇರುವುದು. ಸಾಮಾನ್ಯ ಜನರಲ್ಲಿ ಕ್ಷುದ್ರ ಸ್ವಾರ್ಥದ ಆಶೆಯಿದ್ದರೆ ಮಹಾತ್ಮರಲ್ಲಿ ಭಗವಂತನ ಅನುಗ್ರಹವನ್ನು ಹೊಂದಿ ಆತ್ಮೋನ್ನತಿಯನ್ನು ಪಡೆಯುವ ಮಹೋನ್ನತ ಆಕಾಂಕ್ಷೆ ಇರುತ್ತದೆ. ಅಂತೂ ಪ್ರತಿಯೊಬ್ಬರೂ ಯಾವುದಾದರೂ

ತುಚ್ಛ ಅಥವಾ ಉಚ್ಚ ಆಕಾಂಕ್ಷೆಯಿಂದ ಪ್ರೇರಿತರಾಗಿಯೇ ಪ್ರತಿಯೊಂದು ಕಾರ್ಯವನ್ನು ಕೈಗೊಳ್ಳುವರು. ಸ್ವಪ್ರಯೋಜನದ ಅಪೇಕ್ಷೆಯ ಲವಲೇಶವೂ ಇಲ್ಲದೆ ಕೇವಲ ಅನ್ಯರ ಕಲ್ಯಾಣದ ಕಾಮನೆಯಿಂದಲೇ ಪ್ರವೃತ್ತವಾಗುವ ಏಕೈಕ ವಸ್ತುವು ಜಗತ್ತಿನಲ್ಲಿ ಇರುವುದಾದರೆ ಅದು ಕರುಣಾನಿಧಿಯಾದ ಪರಬ್ರಹ್ಮ ಒಂದೇ. ಅವನ ಲೀಲಾವತಾರವಾಗಲಿ ಸೃಷ್ಟಿಯಾಗಲಿ ಕೇವಲ ಕರುಣೆಯಿಂದ ಪ್ರೇರಿತವಾದುದು. ಅಲ್ಲಿ ಸ್ವಂತದ ಬಯಕೆ ಏನೂ ಇರುವುದಿಲ್ಲ. ಜಗತ್ತಿನಲ್ಲಿ ಇರುವ ಸತ್‌ಚೇತನರ ಉದ್ಧಾರಕ್ಕಾಗಿಯೇ ಪರಮಾತ್ಮನ ಅವತಾರ. ಧರ್ಮದ ಗ್ಲಾನಿಯೂ ಅಧರ್ಮದ ಅಭ್ಯುತ್ಥಾನವೂ ಆದಾಗ ದುಷ್ಟರ ನಿಗ್ರಹದಿಂದಲೂ ಸಾಧುಜನತೆಯ ರಕ್ಷಣೆಯಿಂದಲೂ ಧಾರ್ಮಿಕ ಶಕ್ತಿಯನ್ನು ಪ್ರಜ್ವಲಿತಗೊಳಿಸುವುದಕ್ಕಾಗಿಯೇ ತಾನು ಅವತರಿಸುವುದಾಗಿ ಪರಮಾತ್ಮನು ನಿರೂಪಿಸಿದ್ದಾನೆ:

ಯದಾ ಯದಾ ಹಿ ಧರ್ಮಸ್ಯ
ಗ್ಲಾನಿರ್ಭವತಿ ಭಾರತ ।
ಅಭ್ಯುತ್ಥಾನಮಧರ್ಮಸ್ಯ
ತದಾತ್ಮಾನಂ ಸೃಜಾಮ್ಯಹಮ್ ॥

ಪರಿತ್ರಾಣಾಯ ಸಾಧೂನಾಂ
ವಿನಾಶಾಯ ಚ ದುಷ್ಕೃತಾಮ್ ।
ಧರ್ಮಸಂಸ್ಥಾಪನಾರ್ಥಾಯ
ಸಂಭವಾಮಿ ಯುಗೇ ಯುಗೇ ॥

ಪರಮಾತ್ಮನು ಭೂಮಿಯಲ್ಲಿ ಅವತರಿಸದೆ ತನ್ನ ಸ್ಥಾನದಲ್ಲಿ ಇದ್ದೇ ತನ್ನ ಅಖಂಡ ಇಚ್ಛಾಶಕ್ತಿಯಿಂದಲೇ ದುಷ್ಟರನ್ನು ನಿಗ್ರಹಿಸಬಲ್ಲ. ಆದರೂ ಭೂಮಿಗಿಳಿದು ಸಾಮಾನ್ಯ ಮಾನವರೊಡನೆ ಬೆರೆತು ತನ್ನ ಲೀಲಾಕಾರ್ಯಗಳನ್ನು ನಡೆಸಿರುವನು. ಇದರಲ್ಲೂ ನಮ್ಮನ್ನು ತರಬೇತಿಗೊಳಿಸುವ ಅವನ ಉದ್ದೇಶವು ಅಡಗಿದೆ. ಮಗುವನ್ನು ಕಂಕುಳಲ್ಲಿ ಇಟ್ಟುಕೊಂಡು ತಾಯಿ ವೇಗವಾಗಿ ನಡೆಯಬಲ್ಲಳು. ಆದರೆ ಅವಳು ಹಾಗೆ ನಡೆದರೆ ಮಗು ನಡೆಯನ್ನು ಕಲಿಯುವುದೆಂದು? ಆದ್ದರಿಂದ ತಾಯಿ ತನ್ನ ವೇಗವನ್ನು ಕುಗ್ಗಿಸಿ ಮಗುವಿನ ಹೆಜ್ಜೆಗೆ ಸರಿಯಾಗಿ ತನ್ನ ಹೆಜ್ಜೆಯನ್ನಿಟ್ಟು ನಿಧಾನವಾಗಿ ನಡೆದು ಮಗುವಿಗೆ

ತರಬೇತಿಯನ್ನು ನೀಡುವಳು. ಪರಮಾತ್ಮನ ಅವತಾರ ಕಾರ್ಯದಲ್ಲೂ ಈ ಮಾತೆಯ ಅಂತಃಕರಣವೇ ಹರಿದಿದೆ. ತಾನು ಧರೆಗಿಳಿದು ಮಾನವನಾಗಿ ವ್ಯವಹರಿಸಿ, ಮಾನವರಾಗಿ ನಾವು ಹೇಗೆ ನಡೆಯಬೇಕೆಂಬುದನ್ನು ಪರಮಾತ್ಮನು ನಮಗೆ ಕಲಿಸಿಕೊಡುತ್ತಿದ್ದಾನೆ. ನಮಗೆ ಜೀವನದ ಶಿಕ್ಷಣವನ್ನು ನೀಡುವುದಕ್ಕಾಗಿಯೇ ಪರಮಾತ್ಮನ ಅವತಾರ. ಇದನ್ನು ಭಾಗವತದಲ್ಲಿ ಹೀಗೆ ನಿರೂಪಿಸಲಾಗಿದೆ:

**ಮರ್ತ್ಯಾವತಾರಸ್ತ್ವಿಹ ಮರ್ತ್ಯಶಿಕ್ಷಣಂ ।**

"ಮಾನವನಿಗೆ ಶಿಕ್ಷಣ ನೀಡುವುದೇ ಭಗವಂತನ ಮಾನವಾವತಾರದ ಪ್ರಯೋಜನ."

ಪರಮಾತ್ಮನು ತನ್ನ ಅವತಾರದಲ್ಲಿ ದುಷ್ಟರನ್ನು ಯಾಕೆ ನಿಗ್ರಹಿಸುತ್ತಾನೆ? ರಾಗದ್ವೇಷಾದಿಗಳು ಇಲ್ಲದ ಭಗವಂತನು ಇಂತಹ ಹಿಂಸಾಕೃತ್ಯದಲ್ಲಿ ಯಾಕೆ ಪ್ರವೃತ್ತನಾಗುವನು? ಸಾಮಾನ್ಯ ಜನರಲ್ಲಿ ದೇಹಾಭಿಮಾನ ಇರುವುದರಿಂದ ರಾಗದ್ವೇಷಾದಿಗಳು ಉದಯಿಸಿ ನಿಗ್ರಹ, ಅನುಗ್ರಹಗಳನ್ನು ಅವರು ಮಾಡಬಲ್ಲರು. ರಾಜನು ತನ್ನನ್ನು ಹೊಗಳಿದವರಿಗೆ ಪುರಸ್ಕಾರವನ್ನೂ ತೆಗಳಿದವರಿಗೆ ಶಿಕ್ಷೆ, ದಂಡಗಳನ್ನೂ ವಿಧಿಸುವುದು ಪ್ರಕೃತಿ ಬಂಧನಕ್ಕೆ ಒಳಗಾದ ಆತನಿಗೆ ಸಹಜವೇ ಆಗಿದೆ. ಆದರೆ ಪ್ರಕೃತಿಗೆ ಅತೀತನೂ ರಾಗದ್ವೇಷಾದಿ ದೂರನೂ ಆದ ಪರಮಾತ್ಮನೇ ಅಧಿಕಾರಿಗಳು, ರಾಜರು ಮುಂತಾದ ಸಾಮಾನ್ಯ ವ್ಯಕ್ತಿಗಳಂತೆ ತನ್ನ ಭಕ್ತರನ್ನು ಅನುಗ್ರಹಿಸುವುದೂ ತನ್ನ ವಿರೋಧಿಗಳನ್ನು ದಂಡಿಸುವುದೂ ಹೇಗೆ ಸಮಂಜಸವೆನಿಸುವುದು? ಎಂದು ಕೆಲವರು ಪ್ರಶ್ನಿಸುತ್ತಾರೆ. ಭಾಗವತದ ಏಳನೇ ಸ್ಕಂದದಲ್ಲಿ ಈ ಪ್ರಶ್ನೆಯನ್ನು ವಿವೇಚಿಸಿದ್ದಾರೆ:

**ಸರ್ವಾತ್ಮನಃ ಸಮದೃಶೋ ಹ್ಯದ್ವಯಸ್ಯಾನಹಂಕೃತೇಃ ।**
**ತತ್‌ಕೃತಂ ಮತಿವೈಷಮ್ಯಂ ನಿರವದ್ಯಸ್ಯ ನ ಕ್ವಚಿತ್ ॥**

ಪ್ರಕೃತಿಗೆ ಅತೀತನಾದ ಪರಮಾತ್ಮನಿಗೆ ರಾಗದ್ವೇಷಾದಿ ಮನೋವಿಕಾರಗಳ ಲವಲೇಶವೂ ಇರುವುದಿಲ್ಲ. ಸ್ತೋತ್ರ, ನಿಂದೆಗಳಿಂದ ನಮ್ಮಂತೆ ಅವನಲ್ಲಿ ಯಾವುದೇ ವಿಕಾರ ವಿಪರಿಣಾಮಗಳು ಸಂಭವಿಸುವುದಿಲ್ಲ. ತನ್ನ ಸ್ತೋತ್ರ

ಪೂಜೆಗಳಿಗೆ ಮರುಳಾಗಿಯಾಗಲಿ ತನ್ನ ನಿಂದೆಯಿಂದ ವಿಭ್ರಾಂತನಾಗಿಯಾಗಲಿ ಪರಮಾತ್ಮನು ಶಿಕ್ಷೆರಕ್ಷೆಗಳನ್ನು ವಿಧಿಸುತ್ತಿಲ್ಲ. ಸತ್ಯವನ್ನು ತಿಳಿದು ಆ ತತ್ತ್ವಜ್ಞಾನದ ತಳಹದಿಯಲ್ಲಿ ತಮ್ಮ ಜೀವನವನ್ನು ನಡೆಸುವವರೇ ಸಂತರು ಹಾಗೂ ಭಕ್ತರು. ಈ ಸತ್ಯವನ್ನು ತೆಗಳಿ ವಿಪರ್ಯಯವನ್ನು ಜಗತ್ತಿನಲ್ಲಿ ಹರಡಿ ಲೋಕವ್ಯವಸ್ಥೆಯನ್ನು ಹಾಳುಗೆಡಹುವ ರಾಜಸ, ತಾಮಸ ಜೀವಗಳೇ ಭಗವದ್ದ್ರೋಹಿಗಳು. ಪರಮಾತ್ಮನು ದೇವತೆಗಳನ್ನು ಹಾಗೂ ತನ್ನ ಭಕ್ತರನ್ನು ಸಂರಕ್ಷಿಸುವುದೆಂದರೆ ಸಾತ್ವಿಕ ಶಕ್ತಿಯನ್ನು ಬಲಗೊಳಿಸಿದಂತೆ. ಅಸುರರನ್ನು ನಿಗ್ರಹಿಸುವಲ್ಲಿ ರಾಜಸ, ತಾಮಸ ದುಃಶಕ್ತಿಗಳ ದಮನವೇ ನಡೆಯುತ್ತದೆ. ಸ್ವಾರ್ಥಪೂರ್ಣವಾದ ಮಮತೆ, ಅಭಿಮಾನಗಳಿಂದ ಪರಮಾತ್ಮನ ಶಿಕ್ಷಾರಕ್ಷಾ ವ್ಯಾಪಾರಗಳು ನಡೆಯುತ್ತಿಲ್ಲ. ಜಗತ್ತಿನ ಸೃಷ್ಟಿಯ ಉದ್ದೇಶಕ್ಕೆ ಸಹಾಯವಾಗುವಂತೆ ಪ್ರಪಂಚದ ಸ್ಥಿತಿ, ವಿಕಾಸಗಳಿಗೆ ಅನುಗುಣಗಳಾಗುವ ಸಾತ್ತ್ವಿಕ ವಿಧಾಯಕ ಶಕ್ತಿಯನ್ನು ಪೋಷಿಸಿ ಪ್ರತಿರೋಧಕ ಶಕ್ತಿಗಳನ್ನು ಅಡಗಿಸುವುದೇ ಪರಮಾತ್ಮನ ಅವತಾರ ವ್ಯಾಪಾರದ ಗುರಿಯಾಗಿದೆ. ಇಲ್ಲಿ ರಾಗದ್ವೇಷಗಳಿಗೆ ಎಡೆಯೆಲ್ಲಿ? ತನ್ನ ಸ್ವಾರ್ಥಸಾಧನೆಯ ಸಂಕುಚಿತ ವೃತ್ತಿಗೆ ಇಲ್ಲಿ ಅವಸರವೇ ಇಲ್ಲ. ಭಾಗವತದಲ್ಲಿ ಹೀಗೆ ಹೇಳಿದ್ದಾರೆ:

> ಸತ್ವಂ ಸುರಾನೀಕಮಿವೈಧಯತ್ಯಜಃ
> ರಜಸ್ತಮಸ್ಕಾನ್ ಪ್ರಹಿಣೋತ್ಯುರುಕ್ರಮಃ ॥

ಪರಮಾತ್ಮನ ವ್ಯಾಪಾರವನ್ನು ಈ ದೃಷ್ಟಿಯಿಂದ ನೋಡಿದಾಗ ಅವನಲ್ಲಿ ಯಾವ ವೈಷಮ್ಯ, ಪಕ್ಷಪಾತಗಳನ್ನೂ ಎಣಿಸಲು ಸಾಧ್ಯವಿಲ್ಲ. ಕೆಲವು ವ್ಯಕ್ತಿಗಳು ತಮ್ಮ ಇತಿಮಿತಿಗಳನ್ನು ಮೀರಿ ಪೆಡಂಭೂತಗಳಂತೆ, ಲೋಕಕ್ಷೋಭಕಾರಕ ಅನಿಷ್ಟ ಶಕ್ತಿಗಳಾಗಿ ಸ್ವೇಚ್ಛಾಚಾರದಿಂದ ವರ್ತಿಸಿ ಲೋಕ ವ್ಯವಸ್ಥೆಯ ತಳಹದಿಯನ್ನೇ ಅಲುಗಾಡಿಸುತ್ತಾರೆ ಶರೀರದ ಒಂದು ಭಾಗದಲ್ಲಿ ಬೆಳೆದ ಕ್ಯಾನ್ಸರ್ ರೋಗವು ಇಡೀ ಶರೀರವನ್ನೇ ಕಲುಷಿತಗೊಳಿಸುವಂತೆ ಅಂತಹ ವ್ಯಕ್ತಿಗಳು ತಮ್ಮ ದಾನವಬಲದಿಂದ ಇಡೀ ಜಗತ್ತನ್ನೇ ಕದಡಿಸುತ್ತಾರೆ. ಪ್ರಪಂಚ ವನ್ನು ಉಳಿಸಲು ಇಂತಹ ದುಃಶಕ್ತಿಗಳ ದಮನವು ಅನಿವಾರ್ಯವೇ ಆಗಿರು ವುದು. ಶರೀರದ ಒಂದು ಭಾಗವು ತನ್ನ ಮಿತಿಯನ್ನು ಮೀರಿ ಉಬ್ಬಿ ಬೆಳೆದಾಗ ಶಸ್ತ್ರಚಿಕಿತ್ಸೆಯು ಅನಿವಾರ್ಯವಾಗುವಂತೆ ಲೋಕಮರ್ಯಾದೆಯನ್ನು

ಅತಿಕ್ರಮಿಸಿ, ತಮ್ಮ ಪಾಪವೀ ದುಃಶಕ್ತಿಯಿಂದ ಮುನ್ನಡೆಯುವ ಈ ಅಸುರ ವ್ಯಕ್ತಿಗಳ ದಮನವೂ ಹಿಂಸೆಯಾಗಿರದೆ ಜಗತ್ತನ್ನು ಉಳಿಸಲು ದೇವರು ನಡೆಸಿರುವ ಶಸ್ತ್ರ ಚಿಕಿತ್ಸೆಯೆಂದೇ ಹೇಳಬೇಕಾಗುವುದು. ಆಶೆ, ರೋಷಗಳಿಂದ ಮಾಡುವ ಹಿಂಸೆಗೂ ಜಗದ್‌ವ್ಯವಸ್ಥೆಗಾಗಿ ಮಾಡುವ ನಿಗ್ರಹಕಾರ್ಯಕ್ಕೂ ಇರುವ ಮಹಾ ಅಂತರವನ್ನು ನಾವು ಗ್ರಹಿಸಿಕೊಂಡರೆ ಭಗವಂತನ ಅವತಾರ ಕಾರ್ಯದ ಬಗ್ಗೆ ಶಂಕಾಶಂಕೆಗಳು ನಮ್ಮಲ್ಲಿ ಒಡಮೂಡಲಾರವು.

ಅಂತೂ ಈ ಭಗವದ್ಗೀತೆಯು ಕೃಷ್ಣಾವತಾರದಲ್ಲೇ ಪ್ರಪ್ರಥಮವಾಗಿ ಪ್ರಕಟವಾದುದಲ್ಲವೆಂದೂ ಪರಮಾತ್ಮನಿಂದಲೇ ಅತಿ ಪ್ರಾಚೀನ ಕಾಲದಲ್ಲಿ ಉಪದಿಷ್ಟವಾದ ಅಮರ ಸಂದೇಶವೆಂದೂ ಭಗವಂತನು ನಿರೂಪಿಸಿ 'ತಾನು ಸಂಪ್ರದಾಯಕ್ಕೆ ವ್ಯತಿರಿಕ್ತವಾದ ಹೊಸ ಮಾರ್ಗವನ್ನು ತುಳಿಯುತ್ತಿರುವೆನೆ?' ಎಂದು ಅರ್ಜುನನಿಗೆ ಮೂಡಬಹುದಾದ ಸಂಶಯವನ್ನು ನಿವಾರಿಸಿ, ಈ ಕರ್ಮ ಯೋಗದಲ್ಲಿ ಅತಿಶಯವಾದ ಶ್ರದ್ಧೆ, ಅಭಿರುಚಿಗಳನ್ನು ಉತ್ಪಾದಿಸಿರುವನು.

## ಜೀವ ಮತ್ತು ಪರಮಾತ್ಮರಲ್ಲಿಯ ಅಂತರ

ಗೀತೆಯ ಈ ಭಾಗದಲ್ಲಿ ಜೀವರು ಮತ್ತು ಪರಮಾತ್ಮನಿಗಿರುವ ಅಂತರವನ್ನು ಸ್ಪಷ್ಟವಾಗಿ ನಿರೂಪಿಸಲಾಗಿದೆ. ಜೀವನಿಗೆ ಅನೇಕ ಜನ್ಮಗಳಿದ್ದರೂ ಅವುಗಳ ಪೂರ್ವಾಪರಗಳನ್ನು ಆತನು ತಿಳಿಯಲಾರ. ಆ ಜನ್ಮಗಳ ವಿಷಯದಲ್ಲಿ ಆತನಿಗೆ ಸ್ವಾತಂತ್ರ್ಯವೂ ಇಲ್ಲ. ಈ ಜನ್ಮ-ಮರಣಗಳಲ್ಲಿ ಅನೇಕ ಸುಖ-ದುಃಖಗಳ ಅನುಭವವೂ ಜೀವನಿಗೆ ಇದೆ. ಆದರೆ ಪರಮಾತ್ಮನ ಅವತಾರಗಳೆಲ್ಲ ಇದಕ್ಕೆ ತೀರ ವಿರುದ್ಧವಾಗಿವೆ. ಪರಮಾತ್ಮನು ಸ್ವೇಚ್ಛೆಯಿಂದಲೇ ಈ ಅವತಾರಗಳನ್ನು ಪರಿಗ್ರಹಿಸುತ್ತಾನೆ. ಆದ್ದರಿಂದ ಅವನಿಗೆ ದುಃಖಸಂಬಂಧಗಳೇನೂ ಇಲ್ಲ. ಕೇವಲ ಲೋಕಹಿತದ ಉದ್ದೇಶದಿಂದ ಭಗವಂತನ ಈ ಅವತಾರಕಾರ್ಯವಿರುವುದು. ಈ ವ್ಯವಹಾರದಲ್ಲಿ ಆತನ ಜ್ಞಾನ, ಆನಂದ ಮುಂತಾದ ದಿವ್ಯ ಸದ್ಗುಣ, ಸತ್‌ಶಕ್ತಿಗಳಿಗೆ ಯಾವ ರೀತಿಯ ಚ್ಯುತಿ, ಅಭಾವಗಳೂ ಇರುವುದಿಲ್ಲ. ಜೀವರ ಜನ್ಮ ಹಾಗೂ ಪರಮಾತ್ಮನ ಅವತಾರ ಇವುಗಳಲ್ಲಿರುವ ಈ ಅಂತರದಿಂದ ಜೀವ-ಪರಮಾತ್ಮರಿಗಿರುವ ಸ್ವಾಭಾವಿಕ ಭೇದ ವ್ಯತ್ಯಾಸಗಳನ್ನು ನಾವು

ಅರಿತುಕೊಳ್ಳಬಹುದು. ಈ ಭೇದವನ್ನು ಪ್ರತಿಪಾದಿಸುವುದೇ ಇಲ್ಲಿಯ ಗೀತೆಯ ಆಶಯವಾಗಿದೆ. ಜೀವ, ಪರಮಾತ್ಮರಿಗೆ ಇರುವ ಈ ಭೇದವನ್ನು ತಿಳಿದು ಶ್ರೀಹರಿಯ ಈ ದಿವ್ಯಲೀಲೆಯನ್ನೂ ಮಹಾಶಕ್ತಿಯನ್ನೂ ಅರಿತುಕೊಂಡಲ್ಲಿ, ಅದರಿಂದ ಮುಕ್ತಿಯ ಮಹಾಫಲವನ್ನು ಪಡೆಯಬಹುದೆಂದು ಭಗವಂತನು ಬೋಧಿಸುತ್ತಾನೆ.

**ವೀತರಾಗಭಯಕ್ರೋಧಾ ಮನ್ಮಯಾ ಮಾಮುಪಾಶ್ರಿತಾಃ।**
**ಬಹವೋ ಜ್ಞಾನತಪಸಾ ಪೂತಾ ಮದ್ಭಾವಮಾಗತಾಃ॥**

ಇಲ್ಲಿ ಜ್ಞಾನಿಗಳನ್ನು ''ಮನ್ಮಯಾಃ'' ಅಂದರೆ ಭಗವನ್ಮಯರೆಂದು ಕರೆಯಲಾಗಿದೆ. ಭಗವನ್ಮಯರೆಂದರೆ ಭಗವಂತನಿಂದ ಅಭೇದವನ್ನು ಹೊಂದಿದವರೆಂದು ಅರ್ಥವಲ್ಲ. ''ಮಾಮುಪಾಶ್ರಿತಾಃ'' ಎಂದು ಮುಂದಿನ ಪಾದದಲ್ಲೇ ಭಗವಂತನನ್ನು ಆಶ್ರಯಿಸಿಕೊಂಡವರೆಂದು ಜ್ಞಾನಿಗಳಿಗೂ ಪರಮಾತ್ಮನಿಗೂ ಭೇದವನ್ನು ನಿರೂಪಿಸಲಾಗಿದೆ. ಯಾರಿಗೆ ಭಗವಂತನೇ ಪ್ರಧಾನನಾಗಿರುವನೋ ಯಾರು ಜೀವನದಲ್ಲಿ ಭಗವಂತನಿಗೆ ಪ್ರಮುಖವಾದ ಸ್ಥಾನವನ್ನು ನೀಡಿರುವರೋ ಪ್ರತಿಯೊಂದು ವಸ್ತುವಿನ ಪ್ರವೃತ್ತಿ, ಸತ್ತೆಗಳಲ್ಲೂ ಶ್ರೀಹರಿಯ ವ್ಯಾಪಾರವಿಧಾನಗಳನ್ನೇ ಯಾರು ಕಾಣುವರೊ, ಅಂತಹವರೇ ಭಗವನ್ಮಯರು.

**ಶರವತ್ತನ್ಮಯೋ ಭವೇತ್ ।**

ಎಂದು ಉಪನಿಷತ್ತಿನಲ್ಲಿ ಒಂದು ವಾಕ್ಯವಿದೆ. ಬಾಣವನ್ನು ಒಂದು ಗುರಿಗೆ ಪ್ರಯೋಗಿಸಿದರೆ ಅದು ತನ್ಮಯವಾಗುವುದೆಂದರೆ ಆ ಗುರಿಯಲ್ಲೇ ಬಾಣವು ದೃಢವಾಗಿ ನಿರೂಢವಾಗುವುದೆಂದೇ ಅರ್ಥವಾಗುವುದು. ಅದರಂತೆ ನಾವು ಭಗವನ್ಮಯರಾಗುವುದೆಂದರೆ ಭಗವನ್ನಿಷ್ಠರೆಂದೇ ಅಭಿಪ್ರಾಯವಾಗುವುದು. ಇಂತಹ ಭಗವನ್ನಿಷ್ಠೆಯಿಂದ ''ಮದ್ಭಾವಂ'' ಅಂದರೆ ಪರಮಾತ್ಮನಲ್ಲಿ ಸಂಸ್ಥಿತಿರೂಪವಾದ ಮುಕ್ತಿಯನ್ನು ಪಡೆಯಬಹುದು.

## ಜ್ಞಾನಿಗಳು ಮತ್ತು ತ್ರೈವಿದ್ಯರು

ಇನ್ನು ಮುಂದೆ ಕರ್ಮಯೋಗದಲ್ಲಿ ಪೂರ್ಣತೆಯನ್ನು ಪಡೆದ ಜ್ಞಾನಿಗಳಿಗೂ ಇತರರಿಗೂ ಇರುವ ವ್ಯತ್ಯಾಸವನ್ನು ಗೀತೆಯು ವಿವರಿಸುತ್ತದೆ. ಜ್ಞಾನಿಗಳು

ಭಗವಂತನನ್ನೇ ಅನನ್ಯವಾಗಿ ಪೂಜಿಸುವರು. ಅವರಿಗೆ ಯಾರಿಂದಲೂ ಯಾವ ಲೌಕಿಕ ಪ್ರಯೋಜನಗಳ ಅಭಿಲಾಷೆಯೂ ಇರುವುದಿಲ್ಲ. ಅವರು ತಮ್ಮ ಲೌಕಿಕ ಆಶೆಗಳನ್ನು ಪೂರೈಸುವುದಕ್ಕಾಗಿ ಇತರ ದೇವತೆಗಳ ಬೆನ್ನು ಹಿಡಿಯಲಾರರು. ಸರ್ವೋತ್ತಮವಾದ ಪರವಸ್ತುವು ಒಂದೇ ಎಂಬ ದೃಢನಿಷ್ಠೆಯಿಂದ ಶ್ರೀಹರಿಯನ್ನೇ ಶರಣೆನ್ನುವರು. ಇಂತಹವರನ್ನು ಭಾಗವತರೆಂದು ಕರೆಯಲಾಗುತ್ತದೆ. ಶ್ರೀಭೀಮಸೇನನು ಇಂತಹ ಪರಮಭಾಗವತರಲ್ಲಿ ಅಗ್ರಗಣ್ಯನು. ಈ ಭಗವನ್ನಿಷ್ಠೆಯ ಅಚಲ ನಿರ್ಧಾರವು ಭೀಮಸೇನನ ಜೀವನದಲ್ಲಿ ಪೂರ್ಣವಾಗಿ ಪ್ರತಿಬಿಂಬಿತವಾಗಿರುವುದನ್ನು ನಾವು ಕಾಣಬಹುದು. ಧನುರ್ವಿದ್ಯೆಯ ಅಭ್ಯಾಸವು ಭೀಮಸೇನನಿಗೆ ಏನೂ ರುಚಿಸಲಿಲ್ಲ. ಅದರಲ್ಲಿ ಏನೂ ಅಭಿರುಚಿಯನ್ನು ಭೀಮಸೇನನು ತೋರಿಸಲಿಲ್ಲ. ಶತ್ರುವಧೆ ಮುಂತಾದ ಸ್ವಾರ್ಥ ಸಾಧನೆಗಾಗಿ ಅಗ್ನಿ, ವಾಯು ಮುಂತಾದ ದೇವತೆಗಳನ್ನು ಬೇಡುವ ಪ್ರಸಂಗಗಳು ಧನುರ್ಧಾರಿಗೆ ನಿರಂತರವಾಗಿ ಬರುತ್ತವೆ. ಭೀಮಸೇನನಿಗೆ ಇದು ಇಷ್ಟವಿಲ್ಲ. ತನ್ನ ಲೌಕಿಕ ಕಾಮನೆಗಳನ್ನು ಈಡೇರಿಸಿಕೊಳ್ಳಲು ದೇವತೆಗಳನ್ನು ಯಾಚಿಸುವಂತಹ ಪ್ರಸಂಗಗಳನ್ನು ಯಾಕೆ ತಂದುಕೊಳ್ಳಬೇಕೆಂದು ಆಲೋಚಿಸಿ ಧನುರ್ವಿದ್ಯೆಯಲ್ಲಿ ವಿಶೇಷ ಉತ್ಸಾಹವನ್ನು ತೋರಿಸಲಿಲ್ಲ. ಮಂತ್ರ ಪ್ರಾರ್ಥನೆಗಳ ಆಶ್ರಯವನ್ನು ಅಪೇಕ್ಷಿಸದೆ ತನ್ನ ಬಾಹುಬಲವನ್ನೇ ಅವಲಂಬಿಸಿ ಗದೆ ಮುಂತಾದ ಆಯುಧಗಳಿಂದಲೇ ಶತ್ರುನಿಗ್ರಹಕಾರ್ಯವನ್ನು ಸಾಧಿಸಿದನು. ಏಕಚಕ್ರನಗರದಲ್ಲಿ ಉಳಿದ ಪಾಂಡವರು ತಮ್ಮ ಜೀವನನಿರ್ವಾಹಕ್ಕಾಗಿ ಭಿಕ್ಷೆಯನ್ನು ಬೇಡುವಂತಹ ದೀನವೃತ್ತಿಯೂ ಭೀಮಸೇನನಿಗೆ ರುಚಿಸಲಿಲ್ಲ. ಸ್ವಕರ್ತವ್ಯನಿಷ್ಠನಾದವನು ದೀನಜೀವನವನ್ನು ಯಾಕೆ ನಡೆಸಬೇಕು? ಕರ್ತವ್ಯವನ್ನು ಸರಿಯಾಗಿ ಪಾಲಿಸುತ್ತಿದ್ದವನಿಗೆ ತನಗೆ ಬೇಕಾಗುವುದನ್ನು ಸಮಾಜದಿಂದ ಪಡೆಯಲು ಸಹಜವಾಗಿಯೇ ಅಧಿಕಾರವಿದೆ. ಆದ್ದರಿಂದ

> ಭಿಕ್ಷಾಮಟಂಶ್ಚ ಹುಂಕಾರಾತ್
> ಕರವತ್ ವೈಶ್ಯತೋಽಗ್ರಹೀತ್ ।

ತನ್ನ ಹುಂಕಾರನಾದದ ಬಲದಿಂದಲೇ ರಾಜನು ಕಪ್ಪಕಾಣಿಕೆಗಳನ್ನು ಸ್ವೀಕರಿಸುವಂತೆ ಜನರಿಂದ ತನಗೆ ಬೇಕಾಗುವಷ್ಟು ಆಹಾರ ಪದಾರ್ಥಗಳನ್ನು

ಯಾವ ಯೋಚನೆ, ಯಾಚನೆಗಳಿಲ್ಲದೆ ಗೌರವಪೂರ್ಣ ರೀತಿಯಿಂದಲೇ ಪಡೆಯುತ್ತಿದ್ದನು. ಹೀಗೆ ಮಾನವರಲ್ಲೂ ದೇವತೆಗಳಲ್ಲೂ ತನ್ನ ಲೌಕಿಕ ಅಪೇಕ್ಷೆಯನ್ನು ಪೂರೈಸುವುದಕ್ಕಾಗಿ ಯಾವುದನ್ನೂ ಬೇಡದೆ ಧೀರಜೀವನವನ್ನು ಬಾಳಿದ ವೀರಭಾಗವತನೆಂದು ಭೀಮಸೇನನನ್ನು ಕರೆಯಬಹುದು. ಪರಮಾತ್ಮನ ಚರಣಗಳಲ್ಲಿ ಮಾತ್ರ ಅವನ ತಲೆ ಬಾಗಬಲ್ಲದು. ತನ್ನ ಸ್ವಾರ್ಥಕ್ಕಾಗಿ ಎಲ್ಲರ ಮುಂದೆ ತಲೆ ತಗ್ಗಿಸಿಕೊಂಡು ನಡೆಯುವ ಹೀನಜೀವನವನ್ನು ಭಗವದ್ ಭಕ್ತನು ನಡೆಸಬಾರದೆಂದು ಭೀಮಸೇನನು ತೋರಿಸಿದ್ದಾನೆ.

ಪರಮಾತ್ಮನಲ್ಲಿಯೂ ಕೂಡ ಲೌಕಿಕ ಅಪೇಕ್ಷೆಯನ್ನು ತಣಿಸುವುದಕ್ಕಾಗಿ ಭೀಮಸೇನನ ಶಿರವು ಮಣಿಯದು. ಮಹಾಭಾರತ ಯುದ್ಧದಲ್ಲಿ ಅಶ್ವತ್ಥಾಮನು ದ್ರೋಣಾಚಾರ್ಯರ ನಿಧನದ ಉದ್ವೇಗದಿಂದ. ಪ್ರತೀಕಾರದ ಭರದಲ್ಲಿ ಪಾಂಡವಸೈನ್ಯದಲ್ಲಿ ಎಲ್ಲ ಅಸ್ತ್ರಗಳಿಗಿಂತಲೂ ವೀರ್ಯವತ್ತರವೂ ಅಮೋಘವೂ ಆದ ನಾರಾಯಣಾಸ್ತ್ರವನ್ನು ಪ್ರಯೋಗಿಸಿದನು. ಅದನ್ನು ಯಾವ ಅಸ್ತ್ರದಿಂದಲೂ ಪ್ರತಿಭಟಿಸಲು ಸಾಧ್ಯವಿರಲಿಲ್ಲ. ಪ್ರತಿಯೊಬ್ಬನನ್ನೂ ಆಹುತಿ ತೆಗೆದುಕೊಳ್ಳುವ ಅಪಾರ ಶಕ್ತಿಯು ಅದರಲ್ಲಿ ಇತ್ತು. ಆದರೆ ಶಸ್ತ್ರವನ್ನು ಕೆಳಗಿಟ್ಟು ತಲೆಬಾಗಿಸಿ ಗೌರವಿಸಿದರೆ ಆತನಿಗೆ ಆ ಭಯಂಕರ ಅಸ್ತ್ರವು ಏನೂ ಮಾಡಲಾರದು. ಕೃಷ್ಣನ ಸಲಹೆಯಂತೆ ಪಾಂಡವಸೈನ್ಯದ ಎಲ್ಲ ಯೋಧರು ನಾರಾಯಣಾಸ್ತ್ರಕ್ಕೆ ನಮಸ್ಕರಿಸಿ ಗೌರವವನ್ನು ಸಲ್ಲಿಸಿ ಪಾರಾದರು. ಇದು ನಾರಾಯಣಾಸ್ತ್ರವಾದ್ದರಿಂದ ಪರಮಾತ್ಮನಿಗೆ ನಮಸ್ಕರಿಸುವುದರಿಂದ ಕ್ಷತ್ರಿಯ ವೀರನಿಗೆ ಏನೂ ಅಪಮಾನವಿಲ್ಲವಾದುದರಿಂದ ಭೀಮಸೇನನಿಗೂ ಹಾಗೆ ಮಾಡಲು ಸೂಚಿಸಲಾಯಿತು. ಆದರೆ ಭೀಮಸೇನನು ಪರಮಾತ್ಮನಿಗೂ ನಮಸ್ಕರಿಸಿ ಶರಣಾಗತನಾಗಲು ಒಪ್ಪಲಿಲ್ಲ. ತನ್ನ ಜೀವ ಉಳಿಸಿಕೊಳ್ಳುವುದಕ್ಕಾಗಿ ದೇವರಿಗೆ ತಾನು ತಲೆಬಾಗಬೇಕೆ? ಜ್ಞಾನ, ಭಕ್ತಿ, ಪ್ರಸಾದಗಳನ್ನು ಹೊರತು ಶ್ರೀಹರಿಯಿಂದಲೂ ಬೇರೆ ಯಾವುದನ್ನೂ ಬಯಸಲಾರೆನೆಂಬ ಧೀರ ಸಂಕಲ್ಪವು ಭೀಮನದಾಗಿತ್ತು. ತನ್ನ ಪ್ರಾಣ ಉಳಿಸುವುದಕ್ಕಾಗಿ ದೇವರಲ್ಲಿಯೂ ಶಸ್ತ್ರವನ್ನು ಕೆಳಗಿಟ್ಟು ಬಗ್ಗಿಬೇಡುವ ದೀನಪ್ರವೃತ್ತಿಯು ಭೀಮನಿಗೆ ರುಚಿಸಲಿಲ್ಲ. ಹೀಗೆ ಯಾರಲ್ಲೂ ಏನನ್ನೂ ಬೇಡದ, ಪರಮಾತ್ಮನಲ್ಲೂ ಲೌಕಿಕ ಫಲಗಳನ್ನು

ಬಯಸದ ಧೀರ ಭಾಗವತ ವೃತ್ತಿಯು ಭೀಮನದಾಗಿತ್ತು. ಆದುದರಿಂದ ಪರಿಪೂರ್ಣ ರೀತಿಯಿಂದ ಭಾಗವತ ಧರ್ಮವನ್ನು ತನ್ನ ಜೀವನದಲ್ಲಿ ಅಳವಡಿಸಿ ಕೊಂಡು ಮಹಾನುಭಾವನೆಂದು ಭೀಮಸೇನನು ಪರಿಗಣಿಸಲ್ಪಟ್ಟಿದ್ದಾನೆ.

ಭೀಮಸೇನನಂತಹ ವೀರವ್ರತರಾಗದಿದ್ದರೂ ನಿರಪೇಕ್ಷಭಾವದಿಂದ ಕ್ಷುದ್ರಫಲಗಳಿಗಾಗಿ ನಾನಾದೇವತೆಗಳ ಕಡೆಗೆ ಹೋಗದೆ ಸರ್ವೋತ್ತಮನಾದ ಶ್ರೀಹರಿಯನ್ನೇ ಅನನ್ಯಭಾವದಿಂದ ಪ್ರಾರ್ಥಿಸಿಕೊಂಡು ಒಂದೇ ಸರ್ವೋತ್ತಮ ವಸ್ತುವಿನಲ್ಲಿ ನಿಷ್ಠೆಯನ್ನು ವ್ಯಕ್ತಪಡಿಸಿಕೊಂಡು ನಡೆಯುವವರನ್ನು ಭಾಗವತ ರೆಂದೂ ನಿಷ್ಕಾಮ ಭಕ್ತರೆಂದೂ ಕರೆಯಲಾಗುವುದು.

ಸರ್ವೋತ್ತಮನಾದ ಪರವಸ್ತುವನ್ನು ತಿಳಿದುಕೊಂಡಿದ್ದರೂ ಅದರ ಸರ್ವಾಂತರ್ಯಾಮಿತ್ವ ಹಾಗೂ ಸರ್ವಕಾರಕತ್ವವನ್ನು ಸರಿಯಾಗಿ ಅರ್ಥ ಮಾಡಿಕೊಳ್ಳದೆ ಲೌಕಿಕ ಫಲಕಾಮನೆಯಿಂದ ದೇವತಾರಾಧನೆಗಳನ್ನು ಮಾಡಿಕೊಂಡು ಕೆಲವೊಮ್ಮೆ ಮಾತ್ರ ಪರಮಾತ್ಮನನ್ನು ಸ್ಮರಿಸುವ ಜನರನ್ನೇ ನಾವು ನೋಡುತ್ತಿದ್ದೇವೆ. ಇವರೆಲ್ಲರೂ ತ್ರೈವಿದ್ಯರು. ಇವರಿಗೆ ಶ್ರೀಹರಿಯಲ್ಲಿ ಭಕ್ತಿಯಿದ್ದರೂ ಅವನ ಮಹಿಮೆಯ ಸರಿಯಾದ ಪರಿಜ್ಞಾನವಿಲ್ಲ. ಆ ಭಕ್ತಿಯನ್ನು ತಮ್ಮ ಜೀವನದಲ್ಲಿ ಸರಿಯಾಗಿ ಅಳವಡಿಸಿಕೊಂಡಿರುವುದಿಲ್ಲ. ಕಾರ್ಯಗಳನ್ನು ಮಾಡುವಾಗಲೆಲ್ಲ ಭಗವಂತನ ಸರ್ವಕರ್ತೃತ್ವವನ್ನೂ ಮರೆಯುತ್ತಾರೆ. ತಾನೇ ಕರ್ತನೆಂದೂ ದೇವತೆಗಳೇ ಫಲದಾತೃಗಳೆಂದೂ ತನ್ನಲ್ಲೂ ದೇವತೆಗಳಲ್ಲೂ ಸ್ವಾತಂತ್ರ್ಯದ ಭ್ರಮೆಯು ಅವನಲ್ಲಿ ಮೂಡಿರುತ್ತದೆ. ಫಲದಾಸೆಯಿಂದ ಆತನ ಹೃದಯವು ಕೆರಳಿರುತ್ತದೆ.

ಭಾಗವತರಿಗೂ ಈ ತ್ರೈವಿದ್ಯರಿಗೂ ಪರಮಾತ್ಮನು ಅನುಗ್ರಹಿಸುವ ವಿಧಾನವು ಭಿನ್ನಭಿನ್ನವಾಗಿರುತ್ತದೆ. ಪರಮಾತ್ಮನನ್ನೂ ಆತನ ಮಹಿಮೆಯನ್ನೂ ಸರಿಯಾಗಿ ಅರಿತು ಆತನನ್ನೇ ಭಾಗವತರು ಅನನ್ಯತೆಯಿಂದ ಪೂಜಿಸುತ್ತಿದ್ದಾರೆ. ಯಾರು ಯಾವ ಕರ್ಮಗಳನ್ನು ಅನುಷ್ಠಾನ ಮಾಡಿದರೂ ಯಾವ ದೇವತೆಯನ್ನು ಪೂಜಿಸಿದರೂ ಸರ್ವಾಂತರ್ಯಾಮಿಯಾದ ಸಕಲ ಶಬ್ದಗಳಿಂದ ಪ್ರತಿಪಾದ್ಯನೂ ಆದ ವಿಷ್ಣುವನ್ನೇ ಪೂಜಿಸಿದಂತಾಗುವುದು.

**ಸರ್ವದೇವನಮಸ್ಕಾರಃ**
**ಕೇಶವಂ ಪ್ರತಿ ಗಚ್ಛತಿ ।**

ಯಾರನ್ನು ಸೇವಿಸಿದರೂ ನಮಗೆ ಅದರಿಂದ ದೊರೆಯುವ ಕ್ಷುದ್ರ ಫಲವನ್ನು ಕೂಡ ನೀಡುವವನು ಶ್ರೀಹರಿಯೇ! ಪರಬ್ರಹ್ಮನು ಒಬ್ಬನೇ ಇದ್ದು ಆತನೇ ಎಲ್ಲ ದೇವತೆಗಳಲ್ಲೂ ಅವರ ರೂಪ, ನಾಮಗಳಿಂದಲೂ ಇದ್ದು ಸರ್ವಾಂತರ್ಯಾಮಿಯಾಗಿ ಕಾರ್ಯವನ್ನು ನಡೆಸುತ್ತಾನೆ. ಯಾರನ್ನೇ ನಮಸ್ಕರಿಸಿ ಪೂಜಿಸಿದರೂ ಅದು ಸರ್ವರ ಒಡೆಯನಾದ ಆ ಪರಮಾತ್ಮನಿಗೆ ಸಮರ್ಪಿತ ವಾಗುತ್ತದೆ. ಆದರೆ ತ್ರೈವಿದ್ಯರಿಗೆ ಇಂತಹ ಅನುಸಂಧಾನವಾಗಲಿ, ಭಾವನೆ ಯಾಗಲಿ ಇರುವುದಿಲ್ಲ. ಈ ತಾತ್ತ್ವಿಕ ದೃಷ್ಟಿಯಿಲ್ಲದಿರುವುದರಿಂದ ಶ್ರೀಹರಿಯ ಸರ್ವಾಂತರ್ಯಾಮಿತ್ವದ ಸ್ಮರಣೆ ಹಾಗೂ ಎಲ್ಲ ದೇವತೆಗಳಲ್ಲೂ ನೆಲೆಸಿರುವ ಏಕಮೇವ ಪರವಸ್ತುವಿನ ಅನುಸಂಧಾನವಿಲ್ಲದೆ ತ್ರೈವಿದ್ಯರು ನಾನಾ ದೇವತೆಗಳನ್ನು ಭಜಿಸುವರು. ಅಲ್ಲಿಯೂ ಪರಮಾತ್ಮನನ್ನೇ ಪೂಜಿಸುತ್ತಿದ್ದರೂ ತಾವು ಯಾರನ್ನು ಪೂಜಿಸುತ್ತಿರುವೆವೆಂಬುದನ್ನೇ ಅವರು ಅರಿಯರು.

**ಮಮ ವರ್ತ್ಮಾನುವರ್ತಂತೇ**
**ಮನುಷ್ಯಾಃ ಪಾರ್ಥ ಸರ್ವಶಃ ।**

ಈ ಭಕ್ತರೂ ತಮಗೆ ತಿಳಿಯದಂತೆಯೇ ಪರಮಾತ್ಮನ ಕಡೆಗೆ ಸಾಗುತ್ತಿದ್ದಾರೆ. ತಾವು ಪೂಜಿಸುವ ವಸ್ತುವು ಪರಮಾತ್ಮನೆಂದು ಗೊತ್ತಿಲ್ಲದೆಯೇ ಅವನನ್ನು ಪೂಜಿಸುತ್ತಿರುತ್ತಾರೆ. ಜ್ಞಾನಿಗಳಾದ ಭಾಗವತರಿಗೆ ಸಿಗುವಂತಹ ಶ್ರೇಷ್ಠ ಫಲವು ದೊರೆಯದಿದ್ದರೂ ಇವರ ಕ್ಷುದ್ರಕಾಮನೆಗಳನ್ನು ಪೂರೈಸಿ ಪರಮಾತ್ಮನು ಇವರನ್ನು ಅನುಗ್ರಹಿಸುತ್ತಿರುತ್ತಾನೆ.

**ಯೇ ಯಥಾ ಮಾಂ ಪ್ರಪದ್ಯಂತೇ**
**ತಾಂಸ್ತಥೈವ ಭಜಾಮ್ಯಹಂ ।**

ಅವರವರ ಭಕ್ತಿ, ಸಾಧನೆಗಳಿಗೆ ಅನುಸಾರವಾಗಿ ತಾನು ಅವರಿಗೆ ಫಲವನ್ನು ನೀಡುವುದಾಗಿ ಭಗವಂತನು ಹೇಳಿದ್ದಾನೆ.

ಇನ್ನು ಇತರ ದೇವತೆಗಳ ಬಳಿಗೆ ಓಡದೇ ಪರಮಾತ್ಮನನ್ನು ತಮ್ಮ ಲೌಕಿಕ ಫಲಗಳಿಗಾಗಿ ಬೇಡುವ ಸಕಾಮಭಕ್ತರೂ ಇದ್ದಾರೆ.

ಇಂತಹ ಸಕಾಮಭಕ್ತಿಯಿಂದ ಸಂಸಾರಬಂಧನದ ಬಿಡುಗಡೆಯಾಗದಿದ್ದರೂ ಕ್ರಮವಾಗಿ ಅಂತಹ ಸ್ಥಿತಿಗೆ ಒಯ್ಯಲು ಈ ಸಕಾಮಭಕ್ತಿಯು ಕಾರಣವಾಗುತ್ತದೆ. ಪರಮಾತ್ಮನಲ್ಲಿ ಭಕ್ತಿಯನ್ನು ಮಾಡದೆ ಕರ್ತವ್ಯಹೀನವಾದ ನಾಸ್ತಿಕ ಜೀವನವನ್ನು ನಡೆಸುವುದಕ್ಕಿಂತ ಲೌಕಿಕ ಆಶಾಭಾವದಿಂದಲಾದರೂ ಪರಮಾತ್ಮನ ಕಡೆಗೆ ಸಾಗುವ ಸಕಾಮ ವ್ಯಕ್ತಿಯ ಜೀವನವೇ ಶ್ರೇಷ್ಠವಾಗಿದೆ. ನಾನಾವಿಧ ಕಾಮನೆಗಳಿಗೆ ಬಲಿಯಾಗಿ ಶ್ರೀಮಂತರಲ್ಲಿ, ಅಧಿಕಾರಿಗಳಲ್ಲಿ ಬಾಗಿ ಬೇಡುವ ದೀನಜೀವನಕ್ಕಿಂತ ತಮ್ಮ ಕಾಮನೆಗಳನ್ನು ತಣಿಸಲು ದೇವತೆಗಳು ಹಾಗೂ ಭಗವಂತನ ಕಡೆಗೆ ಸಾಗುವ ಪ್ರವೃತ್ತಿಯು ಎಷ್ಟೋ ಪಾಲು ಮಿಗಿಲಾದುದು.

**ಮಮ ವರ್ತ್ಮಾನುವರ್ತಂತೇ**
**ಮನುಷ್ಯಾಃ ಪಾರ್ಥ ಸರ್ವಶಃ ||**

ಎಂದು ಸಕಾಮಭಕ್ತರೂ ತನ್ನನ್ನು ಹೊಂದುವ ಮಾರ್ಗದಲ್ಲೇ ನಡೆದಿದ್ದಾರೆಂದು ಶ್ರೀಕೃಷ್ಣನು ಹೇಳಿದ್ದಾನೆ.

ಮಲತಾಯಿಯ ಮಾತುಗಳಿಂದ ಅವಮಾನಿತನಾದ ಧ್ರುವರಾಜನು ಕಾಡಿನಲ್ಲಿ ತಪಸ್ಸು ಮಾಡಿ ಪರಮಾತ್ಮನ ದರ್ಶನ ಪಡೆಯಲಿಲ್ಲವೆ? ಕಾಮನೆಯಿಂದ ಲಾದರೂ ದೇವರ ಕಡೆಗೆ ತಿರುಗಿದರೆ ನಮ್ಮನ್ನು ಆತನು ಅತಿ ಎತ್ತರಕ್ಕೆ ಏರಿಸುವನು. ಧ್ರುವರಾಜನು ದೇವರನ್ನು ಸಾಕ್ಷಾತ್ಕರಿಸಿಕೊಂಡು ಅತಿ ಸಮೃದ್ಧವಾದ ಲೌಕಿಕ ಫಲವನ್ನು ಪಡೆದರೂ ಅವನಿಗೆ ತನ್ನ ಬಗ್ಗೆ ತೀವ್ರ ಅತೃಪ್ತಿಯುಂಟಾಯಿತು. 'ಮುಕುಂದನಲ್ಲಿ ಮೋಕ್ಷಸಾಮ್ರಾಜ್ಯವನ್ನು ಕೇಳದೆ ಲೌಕಿಕ ಭೋಗಭಾಗ್ಯಗಳನ್ನೇ ಆತನಲ್ಲಿ ಬೇಡಿ ಪಡೆದೆನಲ್ಲ' ಎಂದು ಆತ ಮರುಗುತ್ತಾನೆ. ದುಃಖದ ಮೂಲವಾದ ಭವಬಂಧವನ್ನೇ ಕಿತ್ತೊಗೆದು ಅನುಗ್ರಹದ ಮಹಾಪೂರವನ್ನೇ ಹರಿಸುವ ಆ ಪರಮ ಪುರುಷನನ್ನು ಸಾಕ್ಷಾತ್ಕರಿಸಿಕೊಂಡೂ ಈ ನಶ್ವರ ಭೋಗೈಶ್ವರ್ಯಗಳನ್ನೇ ಬಯಸಿದೆನೆಂದು ಧ್ರುವರಾಜನು ಪರಿತಪಿಸಿದನು. ಪರಮಭಾಗವತನಾದ ಧ್ರುವರಾಜನು ಮುಂದೆ ನಿಷ್ಕಾಮಕರ್ಮ ಹಾಗೂ ಅನನ್ಯಭಕ್ತಿಯಿಂದ ಪರಮಾತ್ಮನ ಪ್ರಸಾದಕ್ಕೆ ಭಾಜನನಾಗುವನು. ಯೋಗ್ಯ ಸಜ್ಜನ ವ್ಯಕ್ತಿಗಳು ಫಲದಾಸೆಯಿಂದ ಪರಮಾತ್ಮನ ಕಡೆಗೆ ಸಾಗಿದರೂ ಮುಂದೆ

ಅಂತಃಕರಣಶುದ್ಧಿಯಿಂದ ತನ್ನ ಕಡೆಗೆ ನಡೆಯುತ್ತಿರುವವರು ಎಂದು ಸ್ವಾಮಿಯು ಅಪ್ಪಣೆಕೊಡಿಸುತ್ತಾನೆ.

ಆದುದರಿಂದಲೇ ಉಪನಿಷತ್ತಿನಲ್ಲಿ ''ಹ್ರಿಯಾ ದೇಯಂ'' ''ಭಿಯಾ ದೇಯಂ'' ಎಂದು ನಿರೂಪಿಸಲಾಗಿದೆ. ಇನ್ನೊಬ್ಬರು ದಾನಮಾಡುವುದನ್ನು ನೋಡಿ ನಾಚಿಕೆಯಿಂದಾದರೂ ನಿಮ್ಮಲ್ಲಿ ಇದ್ದುದನ್ನು ವಿತರಣ ಮಾಡಿರಿ. ದಾನ ಮಾಡದೆ ಇದ್ದರೆ ಆಗುವ ಲೌಕಿಕ, ಪಾರತ್ರಿಕ ಅನರ್ಥಗಳಿಗೆ ಹೆದರಿಯಾದರೂ ದಾನ ಮಾಡಿರಿ ಎಂದು ಸತ್ಕಾರ್ಯದ ಬಗ್ಗೆ ಒತ್ತಾಯ ಮಾಡಲಾಗಿದೆ. ಏನೂ ಸತ್ಕಾರ್ಯವನ್ನು ಮಾಡದೆ ಅನುಪಯುಕ್ತ ಜೀವನವನ್ನು ನಡೆಸುವುದಕ್ಕಿಂತ ಭಯ, ಲಜ್ಜೆಗಳಿಂದಾಗಲಿ, ಕೀರ್ತಿ ಪ್ರತಿಷ್ಠೆಗಳಿಗಾಗಲಿ ಏನಾದರೂ ಯೋಗ್ಯ ಕಾರ್ಯಗಳನ್ನು ಮಾಡುವುದು ಉತ್ತಮ ಪದ್ಧತಿಯಾಗಿದೆ.

ಇನ್ನೊಬ್ಬರು ದೊಡ್ಡ ಪ್ರಮಾಣದಿಂದ ದಾನ ಧರ್ಮಗಳನ್ನು ಮಾಡುವಾಗ ತಾವು ಏನೂ ಮಾಡದಿದ್ದರೂ ಅವರ ಕಾರ್ಯವನ್ನು ಡಂಭಾಚಾರವೆಂದೂ ಪ್ರತಿಷ್ಠೆಗಾಗಿ ಮಾಡುವ ಕಾರ್ಯವೆಂದೂ ಅವಹೇಳನ ಮಾಡುವ ವ್ಯಕ್ತಿಗಳನ್ನು ನಾವು ನೋಡಿದ್ದೇವೆ. ಪ್ರತಿಷ್ಠೆಗಾಗಿಯಾದರೂ ಸಂಪತ್ತಿನ ವಿತರಣ ಮಾಡುವ ಆ ತ್ಯಾಗಪ್ರವೃತ್ತಿಯೂ ಇಲ್ಲದ ತಾವು ಮತ್ತೂ ಕೆಳಮಟ್ಟದಲ್ಲಿ ಇರುವೆವೆಂಬುದನ್ನು ಅರಿಯದೆ ಮತ್ತೊಬ್ಬರನ್ನು ಅಪಹಾಸಮಾಡುವ ಅಂತಹ ಜನರನ್ನು ಕಂಡು ಕನಿಕರವಾಗುತ್ತದೆ. ಅಂತೂ ಭಗವದ್ವಿಮುಖವಾದ ಜೀವನಕ್ಕಿಂತ ಯಾವುದೇ ಸ್ವರೂಪದಲ್ಲಿದ್ದರೂ ಭಗವದುನ್ಮುಖವಾದ ಜೀವನವೇ ಪ್ರಶಸ್ತವೆಂದು ಗೀತೆಯ ತಾತ್ಪರ್ಯವಾಗಿದೆ.

## ಗೀತೆಯು ನಿರೂಪಿಸಿದ ಚಾತುರ್ವರ್ಣ್ಯ

ಭಕ್ತಿ ಹಾಗೂ ಕರ್ಮಾನುಷ್ಠಾನಗಳಲ್ಲಿ ಈ ರೀತಿಯ ತಾರತಮ್ಯ ಅಂತರಗಳಿಗೆ ಜೀವರಲ್ಲಿರುವ ಸ್ವಭಾವ, ಗುಣ, ವ್ಯಕ್ತಿತ್ವಗಳಿಗೆ ಅನುಸಾರವಾಗಿ ಪರಮಾತ್ಮನು ಮಾಡಿರುವ ಸೃಷ್ಟಿವ್ಯವಸ್ಥೆಯೇ ಕಾರಣವಾಗಿದೆ. ಜೀವರಲ್ಲಿರುವ ಈ ಗುಣ, ಸ್ವಭಾವಗಳನ್ನು ಪರಮಾತ್ಮನು ಸೃಜಿಸಿರುವುದಿಲ್ಲ. ಈ ಗುಣಧರ್ಮಗಳು ಸ್ವಾಭಾವಿಕ ಹಾಗೂ ಅನಾದಿಯಾಗಿದ್ದು, ಆ ಆಧಾರದಿಂದ ಪರಮಾತ್ಮನು

ಮಾಡಿರುವ ಈ ಜಗದ್ರಚನೆಯಲ್ಲಿ ಸಾಧಕರೊಳಗೆ ಪರಸ್ಪರ ಅಂತರವಿರುವುದು ಸಹಜವೇ ಆಗಿದೆ. ಈ ವಿಚಾರವನ್ನು

**ಚಾತುರ್ವರ್ಣ್ಯಂ ಮಯಾ ಸೃಷ್ಟಂ ಗುಣಕರ್ಮವಿಭಾಗಶಃ ॥**

ಎಂಬ ಶ್ಲೋಕದಲ್ಲಿ ಪರಮಾತ್ಮನು ನಿರೂಪಿಸಿದ್ದಾನೆ.

ಈ ಮಾತಿನ ಅರ್ಥ ವಿವರಣೆಯಲ್ಲಿ ಸ್ವಲ್ಪ ಗೊಂದಲಕ್ಕೆ ಎಡೆಯಿದೆ. ವರ್ಣವಿಭಾಗವು ಗುಣಕರ್ಮಾನುಸಾರಿಯಾಗಿದೆ ಎಂಬ ಅಭಿಪ್ರಾಯವು ಆಪಾತವಾಗಿ ಈ ಶ್ಲೋಕದಿಂದ ಪ್ರತೀತವಾಗುವುದು. ಆದರೆ ನಿಷ್ಕಾಮಭಕ್ತರ ಹಾಗೂ ಸಕಾಮ ಭಕ್ತರ ತಾರತಮ್ಯವನ್ನು ವಿವರಿಸುವ ಸಂದರ್ಭದಲ್ಲಿ ಜಾತಿ ವ್ಯವಸ್ಥೆಯ ವಿಚಾರಕ್ಕೆ ಪ್ರಸಕ್ತಿ ಇರುವುದಿಲ್ಲ. ಆದುದರಿಂದ ವರ್ಣವ್ಯವಸ್ಥೆಯು ಜನ್ಮಾದಿಯಾಗಿರಲಿ, ಗುಣದಿಂದಾಗಿರಲಿ, ಅದನ್ನು ಇಲ್ಲಿ ನಿರೂಪಿಸುವ ಸಂದರ್ಭವೇ ಇರುವುದಿಲ್ಲ. ಆದ್ದರಿಂದ ಇಲ್ಲಿ ಚಾತುರ್ವರ್ಣ್ಯ ಎಂದರೆ ಪ್ರಚಲಿತವಾದ ವರ್ಣವ್ಯವಸ್ಥೆಯನ್ನು ಪರಿಗ್ರಹಿಸಬಾರದು.

ಮಾತ್ರವಲ್ಲದೆ, ವರ್ಣವಿಭಾಗಕ್ಕೆ ಗುಣಕರ್ಮಗಳು ಆಧಾರವೆನ್ನುವುದು ವಸ್ತುಸ್ಥಿತಿಗೆ ವಿರುದ್ಧವೂ ಆಗುವುದು. ಶಮದಮಾದಿ ಸದ್ಗುಣಗಳು ಬರಿ ಒಂದು ಜಾತಿಗೆ ಮಾತ್ರ ಮೀಸಲಾಗಿಲ್ಲ. ನಾಲ್ಕು ವರ್ಣಗಳ ಜನರಲ್ಲೂ ಇಂತಹ ವಿಶಿಷ್ಟ ಸದ್ಗುಣಗಳನ್ನು ನಾವು ಕಾಣಬಹುದು. ಬ್ರಾಹ್ಮಣನೆನೆಸಿಕೊಂಡವನಲ್ಲಿ ಇಲ್ಲದ ಇರುವ ಭಗವದ್ಭಕ್ತಿ ಮುಂತಾದ ವಿಶಿಷ್ಟ ನಡವಳಿಕೆಗಳು ವೈಶ್ಯ, ಶೂದ್ರರಲ್ಲಿ ಇರಲು ಸಾಧ್ಯವಿದೆ. ಪ್ರಚಲಿತವಾದ ಜಾತಿ ವಿಭಾಗಕ್ಕೂ ಗೀತೆಯಲ್ಲಿ ಕಂಡುಬರುವ ಶಮದಮಾದಿಗಳ ವರ್ಗೀಕರಣಕ್ಕೂ ಏನೂ ಹೊಂದಿಕೆಯು ಕಂಡುಬರುವುದಿಲ್ಲ. ಇನ್ನು ಗೀತೆಯಲ್ಲಿ ಹೇಳಿರುವ ಪದ್ಧತಿಯಲ್ಲೇ ಹೊಸ ವರ್ಣವಿಭಾಗವನ್ನು ಗುಣಕರ್ಮಗಳ ಆಧಾರದಿಂದಲೇ ಏರ್ಪಡಿಸುವುದೆಂದರೆ ಇದೂ ಅತ್ಯಂತ ಅವ್ಯವಹಾರ್ಯ ಕ್ರಮವಾಗಬಲ್ಲದು. ಗುಣಗಳ ಆಧಾರದಿಂದ ಜಾತಿ ವಿಭಾಗವನ್ನು ರಚಿಸಿ ಸಮಾಜ ರಚನೆಯನ್ನು ಮಾಡಲು ಎಂದಿಗೂ ಶಕ್ಯವಾಗಲಾರದು. ಭಿನ್ನ ಭಿನ್ನ ಸಂದರ್ಭಗಳಲ್ಲಿ ಮಾನವನ ಗುಣ, ನಡವಳಿಕೆಗಳಲ್ಲಿ ಬದಲಾವಣೆಗಳಾಗ ಬಹುದು. ಅಂತಹ ಪ್ರಸಂಗದಲ್ಲಿ ಶಾಸ್ತ್ರೀಯ ಸಂಸ್ಕಾರ, ವೃತ್ತಿ, ಕಸಬುಗಳನ್ನು

ಅವಲಂಬಿಸಿಕೊಂಡಿರುವ ವರ್ಣ ಪದ್ಧತಿಯನ್ನು ಒಬ್ಬನಲ್ಲಿ ಕ್ಷಣಕ್ಷಣದಲ್ಲಿ ಬದಲಿಸುತ್ತ ಹೋಗುವುದು ವ್ಯವಹಾರ್ಯವೆನಿಸಲಾರದು. ಯಾರಲ್ಲಿ ಯಾವ ಗುಣಗಳು ಇವೆ, ಇಲ್ಲವೆಂಬುದನ್ನು ನಿರ್ಧರಿಸಿ ಸಾಮಾಜಿಕ ವ್ಯವಸ್ಥೆಯನ್ನು ಮಾಡುವಾಗ ತೀವ್ರ ಸಂಘರ್ಷಣೆಗೆ ಎಡೆಯಾಗಬಹುದು. ಒಬ್ಬನ ವೈಯಕ್ತಿಕ ಗುಣ, ಪ್ರಭಾವಗಳನ್ನು ಅವನ ವೈಯಕ್ತಿಕ, ಆಧ್ಯಾತ್ಮಿಕ ಸಾಧನೆಯಲ್ಲಿ ನಿರ್ಧರಿಸುವಲ್ಲಿ ಆಧಾರವಾಗಿ ಉಪಯೋಗಿಸಿಕೊಳ್ಳಬಹುದು. ಆದರೆ ವೈಯಕ್ತಿಕ ಗುಣ ನಡತೆಗಳ ಆಧಾರದಿಂದ ಸಾಮಾಜಿಕ ವ್ಯವಸ್ಥೆಯನ್ನು ಏರ್ಪಡಿಸುವುದೆಂದರೆ ನಿತ್ಯ ಸಂಘರ್ಷವನ್ನು ಆಹ್ವಾನಿಸಿದಂತೆಯೇ ಸರಿ. ಆದ್ದರಿಂದ ಗುಣ ಕರ್ಮಗಳ ಆಧಾರದಿಂದ ಜಾತಿಗಳನ್ನು ವಿಭಜಿಸಿ ಹೊಸ ಸಾಮಾಜಿಕ ವ್ಯವಸ್ಥೆಯನ್ನು ರೂಪಿಸಲೂ ಸಾಧ್ಯವಿಲ್ಲ ಎಂದು ಸ್ಪಷ್ಟವಾಗುವುದು. ಪ್ರಚಲಿತವಾದ ಜಾತಿ ವ್ಯವಸ್ಥೆಯಲ್ಲಿ ಗುಣ ವಿಭಾಗವನ್ನು ಹೊಂದಿಸುವುದೂ ಶಕ್ಯವಲ್ಲ. ಯಾಕೆಂದರೆ, ಬ್ರಾಹ್ಮಣನಿಗೆ ಹೇಳಿದ ಸದ್ಗುಣಗಳು ಇತರ ವರ್ಗದವರಲ್ಲಿ ಬೇಕಾದಷ್ಟು ದೊರೆಯುತ್ತಿರುವಾಗ ಬ್ರಾಹ್ಮಣಜಾತಿಯಲ್ಲಿ ಜನಿಸಿದವರಲ್ಲಿ ಮಾತ್ರ ಇಂತಹ ಶೀಲ, ಸದ್ಗುಣಗಳು ಇರುವವು, ಉಳಿದವರಲ್ಲಿ ಇಲ್ಲವೆಂದು ಹೇಳುವುದು ವಸ್ತುಸ್ಥಿತಿಗೆ ವಿರುದ್ಧವೆನಿಸುವುದು. ಆದುದರಿಂದ ಯಾವ ಅರ್ಥದಿಂದ ಶ್ರೀಕೃಷ್ಣನು ಈ ಮಾತನ್ನು ಹೇಳಿರುವನೆಂಬುದನ್ನು ವಿಮರ್ಶಿಸಬೇಕಾಗಿದೆ.

ಶ್ರೀಮದಾಚಾರ್ಯರು ತಮ್ಮ ಗೀತೆಯ ವ್ಯಾಖ್ಯಾನದಲ್ಲಿ ಈ ಮಾತಿನ ನಿಜಾರ್ಥವನ್ನು ವಿಶದಪಡಿಸಿದ್ದಾರೆ. ಇಲ್ಲಿ ಚಾತುರ್ವರ್ಣ್ಯವೆಂಬ ಪದದಿಂದ ಶರೀರವನ್ನೇ ಆಧರಿಸಿಕೊಂಡಿರುವ ಪ್ರಚಲಿತಗಳಾದ ನಾಲ್ಕು ವರ್ಣಗಳನ್ನು ಪರಿಗ್ರಹಿಸಿರದೆ ಆತ್ಮನ ಮೂಲಭೂತ ವ್ಯಕ್ತಿತ್ವ, ಸ್ವರೂಪ, ಗುಣಗಳ ಆಧಾರದಿಂದ ಜೀವರನ್ನು ನಾಲ್ಕು ರೀತಿಯಿಂದ ವಿಂಗಡಿಸಿ, ನಿರೂಪಿಸಲಾಗಿದೆ. ಮುಕ್ತಿಗೆ ಅರ್ಹರಾದ ಸಜ್ಜನರಾದ ಮಾನವರ ಗುಂಪನ್ನು ಇಲ್ಲಿ ನಾಲ್ಕು ವರ್ಗವಾಗಿ ವಿಂಗಡಿಸಲಾಗಿದೆ. ಇವರೆಲ್ಲರೂ ಸತ್ತ್ವಪ್ರಧಾನರೇ ಆಗಿದ್ದು ಅವರ ಸತ್ತ್ವ, ರಜ, ತಮೋಗುಣಗಳ ಅಂತರದಿಂದ ಈ ಜೀವ ವರ್ಗವನ್ನೇ ನಾಲ್ಕು ವರ್ಣಗಳಾಗಿ ವಿಭಜಿಸಲಾಗಿದೆ. ಶಮದಮಾದಿ ಸದ್ಗುಣಗಳು ಎಲ್ಲ ಜನರಲ್ಲೂ ಅವಶ್ಯವಾಗಿ

ಬೇಕಾಗಿವೆ. ಆ ಸದ್ಗುಣಗಳ ತಾರತಮ್ಯವನ್ನು ಅವಲಂಬಿಸಿ ಅವರವರ ವ್ಯಕ್ತಿತ್ವವನ್ನು ನಾಲ್ಕು ರೀತಿಯಾಗಿ ವರ್ಗೀಕರಿಸಲಾಗಿದೆ. ಇದೇ ಗೀತೆಯಲ್ಲಿ ನಿರೂಪಿತ ವಾಗಿರುವ, ಆತ್ಮವನ್ನು ಅವಲಂಬಿಸಿರುವ ಚಾತುರ್ವರ್ಣ್ಯವಾಗಿದೆ.

**ಸ್ವಾಭಾವಿಕೋ ಬ್ರಾಹ್ಮಣಾದಿಃ**
**ಶಮಾದ್ಯೈರೇವ ಭಿದ್ಯತೇ ।**
**ಯೋನಿಭೇದಕೃತೋ ಭೇದಃ**
**ಜ್ಞೇಯ ಔಪಾಧಿಕಸ್ತ್ವಯಮ್ ॥**

ಬ್ರಾಹ್ಮಣ, ಕ್ಷತ್ರಿಯ, ವೈಶ್ಯ, ಶೂದ್ರ ಎಂಬ ವಿಭಾಗವನ್ನು ಎರಡು ರೀತಿಯಿಂದ ಮಾಡಲಾಗುತ್ತದೆ. ಹುಟ್ಟು, ಶರೀರ ಇವುಗಳ ಆಧಾರದಿಂದ ಏರ್ಪಡಿಸಿದ ಬ್ರಾಹ್ಮಣಾದಿ ವಿಭಾಗವು ಔಪಾಧಿಕವಾಗಿದ್ದು ಜೀವರ, ಮೂಲಭೂತ ಸದ್ಗುಣಗಳ ಹಿನ್ನೆಲೆಯಲ್ಲಿರುವ ವರ್ಣ ವಿಭಾಗವೇ ಸ್ವಾಭಾವಿಕವಾದುದು. ಒಬ್ಬನ ಬಾಹ್ಯ ಶರೀರವನ್ನೇ ಕಂಡು ಅವನ ನಿಜವಾದ ವ್ಯಕ್ತಿತ್ವ, ವರ್ಣಗಳನ್ನು ನಿರ್ಧರಿಸುವುದು ಉಚಿತವೆನಿಸುವುದಿಲ್ಲ. ಅವನ ಕೃತಿ, ವ್ಯವಹಾರ, ನಡತೆಗಳಿಂದ ಅವನ ವರ್ಣವನ್ನು ನಾವು ನಿರ್ಧರಿಸಬೇಕಾಗುವುದು. ಶಾರೀರಿಕವಾದ ವರ್ಣ ವಿಭಾಗಕ್ಕಿಂತಲೂ ಆತ್ಮನ ಮೂಲಭೂತ ಗುಣಧರ್ಮ ಗಳನ್ನು ಆಧರಿಸಿದ ವ್ಯಕ್ತಿತ್ವದ ವಿಭಾಗವೇ ಮುಖ್ಯವಾದ ವರ್ಣವಿಭಾಗವಾಗಿದೆ.

ಜನ್ಮವನ್ನು ಅವಲಂಬಿಸಿದ ಔಪಾಧಿಕವಾದ ವರ್ಣ ವಿಭಾಗವು ಸಾಮಾಜಿಕ ವ್ಯವಸ್ಥೆಗೂ ಸ್ಮೃತಿವಿಹಿತಗಳಾದ ಧರ್ಮಾನುಷ್ಠಾನಗಳಿಗೂ ಆಧಾರವಾಗಿದ್ದರೆ ಗೀತೆಯಲ್ಲಿ ಹೇಳಿದ ಆತ್ಮನ ಗುಣ, ಪ್ರವೃತ್ತಿಗಳನ್ನು ಅವಲಂಬಿಸಿರುವ ಸ್ವಾಭಾವಿಕ ವರ್ಣವಿಭಾಗವೇ ನಮ್ಮ ಆಧ್ಯಾತ್ಮಿಕ ಸಾಧನಾನುಷ್ಠಾನಗಳಿಗೆ ಮೂಲಭೂತವೆನಿಸಿದೆ.

**ಅಧಿಕಶ್ಚೇತ್ ಗುಣಃ ಶೂದ್ರೇ**
**ಬ್ರಾಹ್ಮಣಾದಿಃ ಸ ಉಚ್ಯತೇ ।**
**ಬ್ರಾಹ್ಮಣೋಽಪ್ಯಲ್ಪಗುಣಕಃ**
**ಶೂದ್ರ ಏವೇತಿ ಕೀರ್ತಿತಃ ॥**

ಶರೀರತಃ ಶೂದ್ರನಾಗಿದ್ದರೂ ಶಮದಮಾದಿ ಸದ್ಗುಣಗಳು ಹೆಚ್ಚು ಇದ್ದರೆ ಆತ್ಮದ ದೃಷ್ಟಿಯಿಂದ ಆತನು ಬ್ರಾಹ್ಮಣನೇ ಆಗಿರುತ್ತಾನೆ. ಬ್ರಾಹ್ಮಣಶರೀರವನ್ನು ಪಡೆದಿದ್ದರೂ ಶಮದಮಾದಿ ಸದ್ಗುಣಗಳು ಕಡಿಮೆಯಾಗಿದ್ದರೆ ಆತ್ಮದ ಹಿನ್ನೆಲೆಯಲ್ಲಿ ಆತನು ಶೂದ್ರನೇ ಆಗಿರುವನು. ಆದುದರಿಂದ ಜಾತಿ, ಜನ್ಮಗಳಿಂದಲ್ಲೆ, ವ್ಯಕ್ತಿತ್ವವನ್ನು ಅಳೆಯಬಾರದು. ನೀತಿ, ಭಕ್ತಿ, ಸದ್ಗುಣ ಗಳಿಂದಲೇ ಮಾನವನ ವ್ಯಕ್ತಿತ್ವವನ್ನು, ಆತನ ನಿಜಸ್ವರೂಪವನ್ನು ನಾವು ತಿಳಿದುಕೊಳ್ಳಬೇಕು. ಎಷ್ಟು ಮೇಲ್ಮಟ್ಟದ ಶರೀರ ಇದ್ದರೂ ಅದರಿಂದಲೇ ಒಳಗಿರುವ ಜೀವನು ಶ್ರೇಷ್ಠನೆ ಆಗಿರಬೇಕೆಂದಿಲ್ಲ. ಜೀವನ ಸ್ವರೂಪ ವ್ಯಕ್ತಿತ್ವವನ್ನು ಪ್ರತಿಬಿಂಬಿತಗೊಳಿಸುವ ಸದ್ಗುಣ ಸದ್‌ವ್ಯವಹಾರಗಳೇ ಆತನನ್ನು ಅಳೆಯುವ ಮಾನದಂಡಗಳೆಂಬುದೇ ಗೀತೆಯ ಆಶಯವಾಗಿದೆ. ಆದುದರಿಂದಲೇ:

> ವಿಪ್ರಾದ್ದ್ವಿಷಡ್ಗುಣಯುತಾದರವಿಂದನಾಭ-
> ಪಾದಾರವಿಂದವಿಮುಖಾತ್ ಶ್ವಪಚಂ ವರಿಷ್ಠಮ್ ॥

ಎಂದು ಭಾಗವತದಲ್ಲಿ ಭಗವದ್ ವಿಮುಖನಾದ ಬ್ರಾಹ್ಮಣನಿಗಿಂತ ಭಗವದ್ ಭಕ್ತನಾದ ಹೊಲೆಯನೇ ಶ್ರೇಷ್ಠನೆಂದು ವರ್ಣಿಸಿದ್ದಾರೆ. ಭಾರತದಲ್ಲಿ, ಧರ್ಮವ್ಯಾಧನ ಉಪಾಖ್ಯಾನದಲ್ಲಿ:

> ಯಸ್ತು ಶೂದ್ರೋ ದಮೇ ಸತ್ಯೇ
> ಧರ್ಮೇ ಚ ಸತತೋತ್ಥಿತಃ ।
> ತಂ ಬ್ರಾಹ್ಮಣಮಹಂ ಮನ್ಯೇ
> ವೃತ್ತೇನ ಹಿ ಭವೇದ್ ದ್ವಿಜಃ ॥

ಎಂಬುದಾಗಿ, ಸತ್ಯ, ದಮ ಮುಂತಾದ ಸದ್ಗುಣಗಳುಳ್ಳ ಶೂದ್ರನು ಬ್ರಾಹ್ಮಣನೇ ಆಗಿರುವನೆಂದೂ ಸದ್ವರ್ತನೆಯಿಂದಲೇ ಬ್ರಾಹ್ಮಣನನ್ನು ಗುರ್ತಿಸಬೇಕೆಂದೂ ಹೇಳಲಾಗಿದೆ. ಯಕ್ಷಪ್ರಶ್ನೆಯ ಸಂದರ್ಭದಲ್ಲಿಯೂ

> ಕಾರಣಂ ಹಿ ದ್ವಿಜತ್ವೇ ಚ ವೃತ್ತಮೇವ ನ ಸಂಶಯಃ

ಎಂದು ಸಚ್ಚಾರಿತ್ರ್ಯವೇ ಬ್ರಾಹ್ಮಣ್ಯದ ಹೇತುವೆಂದು ಬರೆಯಲಾಗಿದೆ. ಇವೆಲ್ಲ ಔಪಾಧಿಕವಾದ ಶಾರೀರಿಕ ವರ್ಣ ವಿಭಾಗವನ್ನು ಅಲ್ಲಗಳೆಯುವ ದೃಷ್ಟಿಯಿಂದ

ಬರೆಯಲ್ಪಟ್ಟಿಲ್ಲ. ಆತ್ಮನ ವ್ಯಕ್ತಿತ್ವ ಮತ್ತು ಅವನ ಶ್ರೇಷ್ಠತೆಯನ್ನು ಸದ್ಗುಣ ಸಚ್ಚಾರಿತ್ರ್ಯದಿಂದಲೇ ನಿರ್ಧರಿಸಬೇಕೆಂಬುದೇ ಈ ವಾಕ್ಯಗಳ ತಾತ್ಪರ್ಯವಾಗಿದೆ.

ಧರ್ಮಶಾಸ್ತ್ರಗಳಲ್ಲಿ ಹೇಳಿದ ವರ್ಣವ್ಯವಸ್ಥೆಯು ಔಪಾಧಿಕವಾಗಿದ್ದರೂ ಅದು ಅನವಶ್ಯವೆಂದು ಅಭಿಪ್ರಾಯವಲ್ಲ. ಧರ್ಮಶಾಸ್ತ್ರೋಕ್ತ ಕರ್ಮಾನುಷ್ಠಾನಗಳಿಗೆ ಅದೇ ಆಧಾರವಾಗಿದ್ದು ಅದರ ರೀತಿಯಲ್ಲೇ ನಾವು ಆ ಕರ್ಮಗಳನ್ನು ಆಚರಿಸಬೇಕು. ಆದರೆ ಒಬ್ಬನಿಗೆ ಮುಕ್ತಿಗಿರುವ ಅರ್ಹತೆಯನ್ನು ಅವನ ಜನ್ಮಜಾತಿಗಳಿಂದಲೇ ನಿರ್ಧರಿಸಲು ಬರುವುದಿಲ್ಲ. ಬ್ರಾಹ್ಮಣ, ಕ್ಷತ್ರಿಯ ಮುಂತಾದ ಔಪಾಧಿಕ ಜಾತಿಗಳನ್ನಾಧರಿಸಿ ಧರ್ಮಶಾಸ್ತ್ರೋಕ್ತ ಕರ್ತವ್ಯಗಳನ್ನು ನಾವು ವಿಂಗಡಿಸಿದರೂ ಮುಕ್ತಿಯನ್ನು ಮಾತ್ರ ಈ ಬಾಹ್ಯಜಾತಿಯ ಆಧಾರದಿಂದ ನಿರ್ಧರಿಸಲು ಸಾಧ್ಯವಿಲ್ಲ. ಭಕ್ತಿ, ಪ್ರಾರ್ಥನೆ, ಉಪಾಸನೆ ಮೊದಲಾದ ಆಧ್ಯಾತ್ಮಿಕ ಸಾಧನೆಗೆ ಬೇಕಾದ ಅರ್ಹತೆಗಳನ್ನು ಒಬ್ಬನ ನಿಜವಾದ ಸಜ್ಜನಿಕೆಯನ್ನು ಅವನ ಜನ್ಮಜಾತಿಗಳಿಂದಲೇ ನಿರ್ಧರಿಸಬಾರದು. ಬ್ರಾಹ್ಮಣಜಾತಿಯಲ್ಲಿ ಹುಟ್ಟಿದ ಕೂಡಲೇ ಅವನು ಸಹಜವಾಗಿಯೇ ಶಮದಮಾದಿ ಗುಣಸಂಪನ್ನನಾದ ಸಜ್ಜನನಾಗಿರುವನೆಂಬ ನಿಯಮ ಇರುವುದಿಲ್ಲ. ಸಜ್ಜನಿಕೆಯನ್ನೂ ಅದರ ಅಂತರವನ್ನೂ ಮಾನವನ ಸದ್‌ವ್ಯವಹಾರ ಮತ್ತು ಸತ್ತ್ವ, ರಜಸ್ಸು, ತಮಸ್ಸುಗಳ ತಾರತಮ್ಯದಿಂದಲೇ ನಿರ್ಧರಿಸಬೇಕಾಗುವುದು. ಯಾವುದೇ ಜಾತಿಯಲ್ಲಿದ್ದರೂ ಈ ಸಜ್ಜನರನ್ನು ಕಂಡುಹಿಡಿದು ಅವರನ್ನು ನಾವು ಗೌರವಿಸಬೇಕಾಗಿದೆ. ಮಾನವರಲ್ಲಿ ಮೂಲಭೂತವಾಗಿ ಇರಬಹುದಾದ ಈ ಸಜ್ಜನಿಕೆಯನ್ನೂ ಅದರ ಅಂತರವನ್ನೂ ಗುರುತಿಸಿಕೊಳ್ಳುವುದಕ್ಕಾಗಿಯೇ ಗೀತೆಯು ಈ ಸ್ವಾಭಾವಿಕವಾದ ಆತ್ಮಗುಣವನ್ನೇ ಆಧರಿಸಿರುವ ವರ್ಣವಿಭಾಗವನ್ನು ನಿರೂಪಿಸಿದೆ. ಗೀತೆಯು ಪ್ರತಿಪಾದಿಸಿದ ವರ್ಣವಿಭಾಗವು ಶರೀರಭೇದವನ್ನು ಅವಲಂಬಿಸಿದ ಜಾತಿವಿಭಾಗವಾಗಿರದೆ ಪ್ರಪಂಚದಲ್ಲಿರುವ ಸಜ್ಜನ ಸಮಾಜದ ವರ್ಗೀಕರಣವಾಗಿರುವುದು. ಆತ್ಮದ ಗುಣಧರ್ಮಗಳ ಕಡೆಗೆ ಗಮನವಿಟ್ಟು ಜನರನ್ನು ವರ್ಗೀಕರಿಸುವ ಈ ದೃಷ್ಟಿಯಿಂದ ಔಪಾಧಿಕ ವರ್ಣಧರ್ಮಗಳಿಂದ ಸಂಭವಿಸಬಹುದಾದ ಅನೇಕ ಲೋಪಹಾನಿಗಳನ್ನು ಪರಿಹರಿಸಿ ಸಮಾಜದಲ್ಲಿ ಸಾಮರಸ್ಯವನ್ನು ಸ್ಥಾಪಿಸಲು ಅವಕಾಶವಾಗುವುದು.

ಅಂತೂ ಚಾತುರ್ವರ್ಣ್ಯವೆಂದರೆ ಜಗತ್ತಿನ ಸಜ್ಜನ ಸಮೂಹವೆಂದೇ ನಿಜವಾದ ಅರ್ಥವಾಗಿದೆ. ಈ ಸಜ್ಜನವೃಂದಕ್ಕೆ ದೇಹವನ್ನೂ ಇತರ ಸಾಧನಸಾಮಗ್ರಿಗಳನ್ನೂ ನೀಡಿ ಈ ಜಗತ್ತಿಗೆ ತಂದಿರುವ ಪರಮಾತ್ಮನು ತಂದೆ, ತಾಯಿ, ಗುರುಗಳಿಗಿಂತಲೂ ಮಿಗಿಲಾಗಿ ಸರ್ವದಾ ಸರ್ವ ರೀತಿಯಿಂದಲೂ ಪರಮೋಪಕಾರಕನಾಗಿರುವನು. ಇಂತಹವನನ್ನು ಮರೆತು ಲೌಕಿಕ ಫಲಗಳಿಗಾಗಿ ಬೇರೆ ಕಡೆಗೆ ಓಡಾಡುವುದರಿಂದ ಸರ್ವಥಾ ಶ್ರೇಯಸ್ಸು ಉಂಟಾಗಲಾರದು. ಆದುದರಿಂದ ಸಜ್ಜನರೆಲ್ಲರೂ ಅನನ್ಯಭಕ್ತಿಯಿಂದ ಲೋಕೈಕನಾಯಕನೂ ಅನಂತಕಲ್ಯಾಣಗುಣನಿಧಿಯೂ ಪರಬ್ರಹ್ಮನೂ ಆದ ಶ್ರೀಹರಿಯನ್ನೇ ಆಶ್ರಯಿಸ ಬೇಕು. ಅವನನ್ನು ತೊರೆದು ಇತರ ದೇವತೆಗಳನ್ನಾಗಲಿ ಭೂತಗಳನ್ನಾಗಲಿ ಸಾಮಾನ್ಯ ಕ್ಷುದ್ರ ಮಾನವ ವ್ಯಕ್ತಿಗಳನ್ನಾಗಲಿ ಸ್ವಾರ್ಥಭಾವನೆಯಿಂದ ಮೊರೆಯಿಡುವುದು ಉಚಿತವಾಗುವುದಿಲ್ಲ. ಸರ್ವೋತ್ತಮವಾದ ಪರಬ್ರಹ್ಮ ವಸ್ತುವು ಒಂದೇ ಆಗಿದೆ. ಅದರಲ್ಲಿ ಅಚಲವಾದ ಶ್ರದ್ಧೆ, ನಿಷ್ಠೆ, ಭಕ್ತಿಗಳನ್ನು ಕಾಯ್ದುಕೊಳ್ಳಬೇಕು. ನಾನಾವಿಧ ಫಲವಾಸನೆಗಳಿಂದ ವಿವಿಧ ದೇವತೆಗಳನ್ನು ಆರಾಧಿಸಿ ನಮ್ಮ ಭಾವನೆಯನ್ನು ವಿಕ್ಷಿಪ್ತಗೊಳಿಸಿಕೊಳ್ಳಬಾರದು. ಬಹುಜನರು ತಿಳಿದುಕೊಂಡಂತೆ ಹಿಂದೂ ಧರ್ಮವು ಅನೇಕ ದೇವತೆಗಳ ಪರಮಶ್ರೇಷ್ಠತೆಯನ್ನು ಸಾರುವ ವಿಕ್ಷಿಪ್ತ ವಾದವಲ್ಲ. ಏಕದೇವತಾ ವಾದವೇ ಗೀತೆಯ ಪರಮಾಭಿಪ್ರಾಯವಾಗಿದೆಯೆಂಬುದು ಇಲ್ಲಿ ಸ್ಪಷ್ಟವಾಗುವುದು.

ಒಂಭತ್ತನೇ ಅಧ್ಯಾಯದಲ್ಲಿ ಇದನ್ನು ಇನ್ನೂ ಸ್ಪಷ್ಟಪಡಿಸಲಾಗಿದೆ:

> ಯೇಽಪ್ಯನ್ಯದೇವತಾಭಕ್ತಾ
> ಯಜಂತೇ ಶ್ರದ್ಧಾಯಾನ್ವಿತಾಃ ।
> ...ಅಹಂ ಹಿ ಸರ್ವಯಜ್ಞಾನಾಂ
> ಭೋಕ್ತಾ ಚ ಪ್ರಭುರೇವ ಚ ।
> ನ ತು ಮಾಮಭಿಜಾನಂತಿ
> ತತ್ತ್ವೇನಾತಶ್ಚ್ಯವಂತಿ ತೇ ॥
> ಯಾಂತಿ ದೇವವ್ರತಾ ದೇವಾನ್
> ಪಿತೄನ್ ಯಾಂತಿ ಪಿತೃವ್ರತಾಃ ।

ಭೂತಾನಿ ಯಾಂತಿ ಭೂತೇಜ್ಯಾ
ಯಾಂತಿ ಮದ್ಯಾಜಿನೋಽಪಿ ಮಾಂ ॥

ಅನ್ಯದೇವತೆಗಳೆಂದರೆ ಯಾರು? ಸರ್ವೋತ್ತಮನಾದ, ಮೋಕ್ಷದಾತನಾದ ಪರಬ್ರಹ್ಮನೆಂದರೆ ಯಾರು? ಎಂಬುದನ್ನು ಇಲ್ಲಿ ವಿಶದೀಕರಿಸಲಾಗಿದೆ. ''ಮಾಂ'' ''ಮದ್ಯಾಜಿನಃ'' ಎಂಬ ಶಬ್ದಗಳಿಂದ ಸರ್ವೋತ್ತಮನಾದ ಪರದೇವತೆಯು ತಾನೇ ಎಂದು ಶ್ರೀಕೃಷ್ಣನು ಹೇಳಿರುವನು. ಇದರಿಂದ ಶ್ರೀವಿಷ್ಣುವೇ ಸರ್ವದೇವತೆಗಳಿಗೆ ಸ್ವಾಮಿಯೂ ಸರ್ವಕರ್ಮಗಳಲ್ಲಿ ಆರಾಧ್ಯಪುರುಷನೂ ಆದ ಪರದೈವವೆಂಬುದು ನಿಃಸಂದಿಗ್ಧವಾಗಿ ಸಿದ್ಧವಾಗುವುದು. ದೇವತೆಗಳ, ಪಿತೃ, ಭೂತಗಳ ಆರಾಧನೆಯಿಂದ ಅಲ್ಪಫಲವು ದೊರೆಯುವುದೆಂದೂ ಅನ್ಯದೇವತೆಗಳನ್ನು ಪೂಜಿಸಿದರೂ ಅವರ ಒಳಗಿದ್ದು ಅದನ್ನು ಸ್ವೀಕರಿಸಿ ಆ ಕ್ಷುದ್ರ ಫಲಗಳನ್ನು ನೀಡುವ ಸರ್ವಯಜ್ಞಭೋಕ್ತನಾದ ಶ್ರೀಹರಿಯೇ ಸರ್ವೋತ್ತಮ ದೇವತೆಯಾಗಿದ್ದು, ಅವನ ಆರಾಧನೆಯಿಂದ ಮೋಕ್ಷರೂಪವಾದ ಮಹಾಫಲವು ದೊರೆಯುವುದೆಂಬುದನ್ನೂ ಮೇಲೆ ಉದಾಹರಿಸಿದ ಶ್ಲೋಕಗಳಲ್ಲಿ ನಿರೂಪಿಸಲಾಗಿದೆ.

## ಕರ್ಮದಲ್ಲಿ ಅಕರ್ಮ; ಅಕರ್ಮದಲ್ಲಿ ಕರ್ಮ

ಈವರೆಗೆ ನಿರೂಪಿಸಿದ ಕರ್ಮಯೋಗದ ಸಾರಸಂಗ್ರಹವನ್ನು ಗೀತೆಯು ಈ ಚುಟುಕಾದ ಶ್ಲೋಕದಲ್ಲಿ ಮಾಡಿದೆ.

ಕರ್ಮಣ್ಯಕರ್ಮ ಯಃ ಪಶ್ಯೇ
ದಕರ್ಮಣಿ ಚ ಕರ್ಮ ಯಃ ॥
ಸ ಬುದ್ಧಿಮಾನ್ ಮನುಷ್ಯೇಷು
ಸ ಯುಕ್ತಃ ಕೃತ್ಸ್ನ ಕರ್ಮಕೃತ್ ॥

ಕರ್ಮದಲ್ಲಿ ಅಕರ್ಮವನ್ನು, ಅಕರ್ಮದಲ್ಲಿ ಕರ್ಮವನ್ನು ಕಾಣಬೇಕೆಂಬುದು ಅದರ ಸರಳಾರ್ಥವಾಗಿದೆ. ಇದು ಒಂದು ಒಗಟಿನಂತೆ ನಮಗೆ ಕಾಣುತ್ತದೆ. ಕರ್ಮಯೋಗದ ಸಾರವನ್ನು ಸಂಕ್ಷಿಪ್ತವಾಗಿ ಈ ಶ್ಲೋಕವು ನಿರೂಪಿಸಿದೆ. ನಾವು ಕಾರ್ಯವನ್ನು ಮಾಡುತ್ತಿರುವಾಗಲೆಲ್ಲ ನಾವೇ ಇದನ್ನು ಮಾಡುತ್ತಿರುವೆವೆಂಬ

ಅಹಂಕಾರವು ನಿರೂಢವಾಗಿರುವುದು. ಪರಮಾತ್ಮನೇ ಸರ್ವಕರ್ತನೆಂದು ತಿಳಿದ ಆಸ್ತಿಕರಿಗೂ ಕೂಡ ತಮ್ಮಿಂದ ಕ್ರಿಯೆಯು ನಡೆಯುತ್ತಿರುವ ಸಮಯದಲ್ಲಿ ಭಗವಂತನ ಶಕ್ತಿಯೇ ನಮ್ಮ ವ್ಯಾಪಾರದ ಹಿನ್ನೆಲೆಯಾಗಿದ್ದು ಅದರಿಂದಲೇ ಈ ಕಾರ್ಯ ನಡೆಯುತ್ತದೆ ಎಂಬ ಸ್ಮರಣೆಯು ಯಾವಾಗಲೂ ಇರುತ್ತಿಲ್ಲ. ಸರ್ವದಾ ಸರ್ವ ವ್ಯಾಪಾರಪ್ರವರ್ತಕನಾದ ಭಗವಂತನ ವಿಸ್ಮರಣೆಯಿಂದಲೇ ಅಹಂಕಾರವು ಮೂಡಿಬರಲು ಅವಕಾಶವಾಗುವುದು. ಅಹಂಕಾರ, ಅಭಿನಿವೇಶದಿಂದಲೇ ಈ ಕ್ರಿಯೆಗಳು ಬಂಧಕವಾಗಿ ಪರಿಣಮಿಸುವವು. ಆದುದರಿಂದ ನಾವು ಕ್ರಿಯೆಯನ್ನು ನಡೆಸುವಾಗಲೆಲ್ಲ ''ನಾನಿದನ್ನು ಸ್ವತಂತ್ರವಾಗಿ ಮಾಡುತ್ತಿರುವುದಲ್ಲ; ಪರಮಾತ್ಮನ ಮಹಾ ವ್ಯಾಪಾರದಿಂದಲೇ ಇದು ನಡೆಯುತ್ತದೆ'' ಎಂಬ ಸುದೃಢ ಅನುಸಂಧಾನವಿರುವುದು ಆವಶ್ಯಕವಾಗಿದೆ. ಸರ್ವಕರ್ತನ ಸಂಸ್ಮರಣೆಯಿದ್ದರೆ ಅಲ್ಲಿ ಆಸಕ್ತಿ, ಅಹಂಕಾರಗಳಿಗೆ ಪ್ರವೇಶವೇ ಇರುವುದಿಲ್ಲ. ಕರ್ಮದಲ್ಲಿ ಅಕರ್ಮವನ್ನು ನೋಡಬೇಕು ಎಂಬುದರ ಆಶಯವು ಇದೇ ಆಗಿದೆ. ನಾವು ಕರ್ಮವನ್ನು ಆಚರಿಸಿದರೂ ಅದು ನಮ್ಮ ಕರ್ಮವಲ್ಲ, ನಮ್ಮ ಸ್ವಶಕ್ತಿಯಿಂದ ಅದು ನಡೆದುದಲ್ಲವೆಂಬ ಪರಿಜ್ಞಾನವೇ ಕರ್ಮದಲ್ಲಿ ಅಕರ್ಮದ ನಿರೀಕ್ಷಣೆಯಾಗಿದೆ. ನಮ್ಮ ಕಾರ್ಯದಲ್ಲಿ ನಮ್ಮ ಸ್ವಾತಂತ್ರ್ಯದ ಪರಿಮಿತಿಯನ್ನು ತಿಳಿದುಕೊಳ್ಳುವುದಲ್ಲದೆ ಪ್ರತಿಯೊಂದು ಕರ್ಮದಲ್ಲಿ ಪರಮಾತ್ಮನ ವ್ಯಾಪಾರವನ್ನೂ ನಾವು ಕಾಣಬೇಕು. 'ಅ' ಎನ್ನುವ ಪದಕ್ಕೆ ಪರಮಾತ್ಮನೆಂದೂ ಅರ್ಥವಿರುವುದರಿಂದ ಅಕರ್ಮವೆಂದರೆ ಪರಮಾತ್ಮ ವ್ಯಾಪಾರವೆಂದೂ ತಾತ್ಪರ್ಯವಾಗುವುದು.

ಜಗತ್ತಿನ ಪ್ರತಿಯೊಂದು ವ್ಯವಹಾರಕ್ಕೂ ಇಬ್ಬರು ಕರ್ತರಿರುವರು. ಜೀವ ಮತ್ತು ಪರಮಾತ್ಮ ಇವರೇ ಆ ಇಬ್ಬರು ಕರ್ತರು. ತಂದೆಯು ಮಗುವಿನ ಕೈಯಿಂದ ಅಕ್ಷರವನ್ನು ಬರೆಸುವಾಗ ಅಲ್ಲಿ ಇಬ್ಬರ ಬುದ್ಧಿ, ಪ್ರಯತ್ನಗಳೂ ಸೇರುವವು. ಒಂದೇ ಕ್ರಿಯೆಯಲ್ಲಿ ಇಬ್ಬರು ಕರ್ತರು ಇರುವುದನ್ನು ನಾವೆಲ್ಲ ತಿಳಿಯಬಲ್ಲೆವು. ನಮ್ಮಿಂದ ಕ್ರಿಯೆಯು ನಡೆಯುವಾಗಲೇ ಪರಮಾತ್ಮನು ಶಕ್ತಿದಾತನಾಗಿ ನಮ್ಮ ಜೊತೆಗೆ ಇದ್ದು ನಮ್ಮ ಕೈಹಿಡಿದು ಕಾರ್ಯವನ್ನು ನಡೆಸುತ್ತಾನೆ. ಪ್ರತಿಯೊಂದು ಕ್ರಿಯೆಯಲ್ಲೂ ಹೀಗೆ ಇಬ್ಬರ ಬುದ್ಧಿ, ವ್ಯಾಪಾರಗಳ ಸಮಾವೇಶವು ಇದೆ. ಆದರೆ ಪರಮಾತ್ಮನು ಸ್ವತಂತ್ರಶಕ್ತಿಯಿಂದ ಇದನ್ನು ಸಾಧಿಸುತ್ತಿದ್ದರೆ ಪರಮಾತ್ಮನ

ಅಧೀನರಾದ ನಾವು ಅವನ ಬಲದಿಂದಲೇ ಈ ಕಾರ್ಯವನ್ನು ಮಾಡುತ್ತಿರುವೆವು. ನಾವು ವಿಷ್ಣುವಿನ ಪ್ರತಿಬಿಂಬರಾಗಿರುವೆವು. ಬಿಂಬದ ವ್ಯಾಪಾರವಿಲ್ಲದ ಪ್ರತಿಬಿಂಬದಲ್ಲಿ ಅದೆಂತು ಕ್ರಿಯೆಯು ಸಂಭವಿಸಬಹುದು?

**ವಿಷ್ಣೋರೇವ ಕರ್ಮ**
**ನಾಹಂ ಚಿತ್‌ಪ್ರತಿಬಿಂಬಃ ಕಿಂಚಿತ್ ಕರೋಮಿ ।**

- ಗೀತಾಭಾಷ್ಯ

ಸ್ವತಂತ್ರ ಶಕ್ತಿಯಿಲ್ಲದಿರುವುದರಿಂದ ನಾವು ಕರ್ತರಾಗಿದ್ದರೂ ಅಕರ್ತರೆನಿಸಿಕೊಳ್ಳುವೆವು. ಪರಮಾತ್ಮನಂತೂ ಸ್ವತಂತ್ರಕರ್ತನಿರುವನು. ಅವನ ವ್ಯಾಪಾರಕ್ಕೆ ನಮ್ಮ ಅಪೇಕ್ಷೆಯೇ ಇರುವುದಿಲ್ಲ. ನಮ್ಮ ಸರ್ವ ಅವಸ್ಥೆಗಳಲ್ಲೂ ನಮಗೆ ಪ್ರವರ್ತಕನಾಗಿ ಭಗವಂತನಿರುವನು. ನಾವು ನಿದ್ರೆಯಲ್ಲಿದ್ದಾಗಲೂ ಸ್ವಪ್ನಾವಸ್ಥೆಯಲ್ಲಿ ಇರುವಾಗಲೂ ಪರಮಾತ್ಮನ ವ್ಯಾಪಾರವು ಸರ್ವದಾ ಅವ್ಯಾಹತವಾಗಿ ನಡೆಯುತ್ತದೆ. ಸ್ವಪ್ನದಲ್ಲಿ ಚಲಚ್ಚಿತ್ರಗಳಲ್ಲಿಯ ದೃಶ್ಯಗಳಂತೆ ವಿಚಿತ್ರಾದ್ಭುತ ವಸ್ತುಗಳನ್ನು ಸೃಜಿಸಿ ತೋರಿಸುವವರು ಯಾರು? ಅಲ್ಲಿ ನಮ್ಮ ಅಪೇಕ್ಷೆ ಸ್ವಾತಂತ್ರ್ಯಗಳು ಏನೂ ನಡೆಯುವುದಿಲ್ಲ. ಹೀಗೆ ನಮ್ಮ ಪ್ರತಿಯೊಂದು ಕಾರ್ಯದಲ್ಲಿ ಪರಮಾತ್ಮನ ವ್ಯಾಪಾರದ ಹಿನ್ನೆಲೆಯಿದೆ. ಆದರೆ ಭಗವಂತನ ವ್ಯಾಪಾರದಲ್ಲಿ ನಮ್ಮದೇನೂ ಆವಶ್ಯಕತೆಯಿರುವುದಿಲ್ಲ. 'ಅಕರ್ಮಣಿ ಚ ಕರ್ಮ ಯಃ'' ನಮ್ಮ ಅಕರ್ಮದ ಅವಸ್ಥೆಯಲ್ಲೂ ಪರಮಾತ್ಮನ ಶಕ್ತಿಯು ನಿತ್ಯ ಜಾಗೃತವಾಗಿ ವ್ಯವಹಾರವನ್ನು ನಡೆಸುತ್ತದೆ. ಅದು ಅಖಂಡವಾಗಿ ಪರಾಪೇಕ್ಷೆಯಿಲ್ಲದೆ ಸರ್ವದಾ ಕ್ರಿಯಾಶೀಲವಾಗಿದೆ. ಅಂತೂ ಪರಮಾತ್ಮನ ವ್ಯಾಪಾರವಿಲ್ಲದೆ ಜೀವನ ಯಾವುದೇ ವ್ಯವಹಾರವು ನಡೆಯಲಾರದು. ಭಗವಂತನ ವ್ಯವಹಾರವಾದರೋ ಜೀವಾತ್ಮನ ಆವಶ್ಯಕತೆ ಇಲ್ಲದೆ ಸ್ವತಂತ್ರವಾಗಿ ನಡೆಯುತ್ತದೆ. ಕರ್ಮದಲ್ಲಿ ಅಕರ್ಮವನ್ನು, ಅಕರ್ಮದಲ್ಲಿ ಕರ್ಮವನ್ನು ತಿಳಿಯುವುದೆಂದರೆ- ಜೀವಾತ್ಮನ ಅಶಕ್ತಿ, ಅಸ್ವಾತಂತ್ರ್ಯಗಳನ್ನು ಪರಮಾತ್ಮನ ಅಖಂಡ ವ್ಯವಹಾರ ಹಾಗೂ ಅಬಾಧಿತ ಸ್ವಾತಂತ್ರ್ಯಗಳನ್ನು ತಿಳಿಯುವುದೇ ಆಗಿದೆ.

ನಾವು ಮೇಲೆ ತಿಳಿಸಿರುವ ಉಪದೇಶವನ್ನು ಈ ಶ್ಲೋಕದಿಂದ ಇನ್ನೊಂದು

ರೀತಿಯಿಂದಲೂ ಗ್ರಹಿಸಿಕೊಳ್ಳಬಹುದು. ಜೀವನು ಮಾತ್ರ ವಿಧಿನಿಯಮಗಳಿಗೆ ಒಳಪಟ್ಟವನಾದುದರಿಂದ ಅವನಿಗೆ ಕರ್ಮನಿರ್ಬಂಧ ಇದೆ. ಆದುದರಿಂದ ಕರ್ಮಕ್ಕೆ ಒಳಪಟ್ಟವನಾದ ಜೀವನನ್ನು ''ಕರ್ಮ'' ಎಂಬುದಾಗಿ ಕರೆಯಲಾಗಿದೆ. ಪರಮಾತ್ಮನು ''ಅಕರ್ಮ''ನಾಗಿರುವನು. ಅವನು ಕರ್ಮವನ್ನು ದಾಟಿರುವನು. ಕರ್ಮದ ಯಾವ ವಿಧಿ-ನಿರ್ಬಂಧಗಳೂ ಭಗವಂತನಿಗೆ ಇಲ್ಲದಿರುವುದರಿಂದ ಕರ್ಮಾತೀತನಾದ ಪರಮಾತ್ಮನನ್ನು ''ಅಕರ್ಮ'' ಎಂದು ಕರೆದಿರುವುದು ಅರ್ಥಪೂರ್ಣವೇ ಆಗಿದೆ. ವಿಧಿಬದ್ಧನಾದ ಜೀವನು ಕರ್ಮವನ್ನು ಆಚರಿಸಿದರೂ ಅವನು ಅದನ್ನು ತನ್ನ ಸ್ವಂತ ಶಕ್ತಿಯಿಂದಲೇ ಮಾಡಿದುದಲ್ಲ. ಅವನಿಗೆ ಆ ಕರ್ಮದಲ್ಲಿ ಪೂರ್ಣ ಸ್ವಾತಂತ್ರ್ಯವಿಲ್ಲದಿರುವುದನ್ನು ಲಕ್ಷಿಸಿ, ಜೀವನಲ್ಲಿ ಯಾವುದೇ ಸ್ವತಂತ್ರ ಕ್ರಿಯಾಶಕ್ತಿ ಇಲ್ಲವೆಂಬ ಅಭಿಪ್ರಾಯದಿಂದ ಅವನಲ್ಲಿ ಕರ್ಮವಿರುವುದಿಲ್ಲ ಎಂದು ಇಲ್ಲಿ ತಿಳಿಸಲಾಗಿದೆ. ವಿಧಿಗೆ ಅತೀತನಾದ ಪರಮಾತ್ಮನಲ್ಲೇ ಸರ್ವಕರ್ಮಗಳೂ ಇವೆ. ಜಗತ್ತಿನಲ್ಲಿ ನಡೆಯುವ ಎಲ್ಲ ಕರ್ಮಗಳಿಗೂ ಅವನೇ ಪ್ರವರ್ತಕನಾಗಿರುವನು.

**ನ ಋತೇ ತ್ವತ್ ಕ್ರಿಯತೇ ಕಿಂಚನಾರೇ ।**

-ಋಗ್ವೇದ, 10-113-9

ಪರಮಾತ್ಮನಿಲ್ಲದೆ ಜಗತ್ತಿನಲ್ಲಿ ಯಾವ ಕ್ರಮ, ವ್ಯವಹಾರಗಳೂ ನಡೆಯಲಾರವು. ಭಗವಂತನ ಈ ಸ್ವಾತಂತ್ರ್ಯ ಹಾಗೂ ಸರ್ವಕರ್ಮ ಪ್ರವರ್ತಕತ್ವವನ್ನೇ

**ಅಕರ್ಮಣಿ ಚ ಕರ್ಮ ಯಃ ।**

ಎಂಬಲ್ಲಿ ನಿರೂಪಿಸಲಾಗಿದೆ. ಆಯಾ ಜೀವರ ಅಸ್ವಾತಂತ್ರ್ಯ ಮತ್ತು ಪರಮಾತ್ಮನ ಅವಲಂಬನೆ, ಶ್ರೀಹರಿಯ ಸ್ವಾತಂತ್ರ್ಯ ಮತ್ತು ಸರ್ವಕರ್ತೃತ್ವದ ಸ್ಮರಣೆ, ಅನುಸಂಧಾನಗಳು ನಮ್ಮಲ್ಲಿ ಸದಾ ಜಾಗೃತವಿರಬೇಕೆಂಬುದೇ ಈ ಶ್ಲೋಕದ ಭಾವಾರ್ಥವಾಗಿದೆ.

ಈ ಶ್ಲೋಕವನ್ನು ಅನೇಕರು ತಮ್ಮ ವಿಚಾರ, ಕಲ್ಪನೆಗಳಿಗನುಸಾರವಾಗಿ ಬೇರೆ ಬೇರೆ ರೀತಿಯಿಂದ ವ್ಯಾಖ್ಯಾನ ಮಾಡಿದ್ದಾರೆ. ಕರ್ಮವನ್ನು ಮಾಡುವುದು ಹಾಗೂ ಬಿಡುವುದು ಇವೆರಡೂ ಭ್ರಮೆಯೇ ಆಗಿದೆ. ಕರ್ಮವನ್ನು ನಾವು ಮಾಡುತ್ತಿರು

ವಾಗ ನಿಜವಾಗಿಯೂ ಈ ಕ್ರಿಯೆಯು ನಮ್ಮಲ್ಲಿ ಇರುವುದಿಲ್ಲ. ಆದರೆ ನಾವು ಕರ್ಮವನ್ನು ಆಚರಿಸುತ್ತಿಲ್ಲವೆಂದು ಭಾವಿಸಿಕೊಂಡಿರುವ ಅವಸ್ಥೆಯಲ್ಲೂ ನಮ್ಮಲ್ಲಿ ಕರ್ಮಗಳು ಇದ್ದೇ ಇರುತ್ತವೆ. ಆದ್ದರಿಂದ ಕರ್ಮ ಅಕರ್ಮ ಇವೆರಡೂ ಅಸತ್ಯಗಳೇ ಆಗಿವೆ. ವಾಹನವು ಓಡುತ್ತಿರುವಾಗ ಮರ, ಗಿಡಗಳಲ್ಲಿ ಚಲನವಲನಗಳನ್ನು ನಾವು ಕಾಣುತ್ತೇವೆ. ನಿಜವಾಗಿ ಅವು ಚಲಿಸುವುದಿಲ್ಲ. ಅದರಂತೆ ನಮ್ಮಲ್ಲಿ ಕ್ರಿಯೆಗಳು ತೋರಿದರೂ ವಾಸ್ತವವಾಗಿ ಅವು ಸಂಭವಿಸಿಲ್ಲ ಎಂದೇ ತಿಳಿಯಬೇಕು. ಬಹುದೂರದಲ್ಲಿದ್ದ ವ್ಯಕ್ತಿಯು ನಡೆಯುತ್ತಿದ್ದರೂ ಆತನು ನಡೆಯದೆ ಒಂದೇ ಕಡೆ ಸ್ಥಿರವಾಗಿ ನಿಂತಿದ್ದಾನೆಂದು ನಾವು ಭ್ರಮಿಸುವುದುಂಟು. ಆತನು ನಡೆಯುವುದಿಲ್ಲವೆಂದು ನಾವು ತಿಳಿದುಕೊಂಡಿದ್ದರೂ ದೂರದಲ್ಲಿರುವ ಆತನು ಚಲಿಸುತ್ತಲೇ ಇರುವನು. ಅದರಂತೆ ನಾವು ಕರ್ಮವನ್ನು ಮಾಡದೆಯೇ ನಿರ್ವ್ಯಾಪಾರರಾಗಿ ಇರುವೆವೆಂದು ಭಾವಿಸಿಕೊಂಡಾಗಲೂ ನಮ್ಮಲ್ಲಿ ಈ ಕಾಲ್ಪನಿಕ ಕರ್ಮಗಳ ಕಿರುಕುಳ ಎದ್ದೇ ತೀರುವುದು. ಕರ್ಮವು ಅಸತ್ಯವಾಗಿದ್ದರೂ ಸರ್ವದಾ ಅದರ ಉಪದ್ರವಕ್ಕೆ ನಾವು ಗುರಿಯಾಗುತ್ತಲೇ ಇರುವೆವು ಎಂದು ಈ ಶ್ಲೋಕದ ವಿವರಣೆಯನ್ನು ಕೆಲವರು ಮಾಡಿರುವರು. ಕರ್ಮಪ್ರಪಂಚವು ಸದಾ ನಮಗೆ ಅಂಟಿಕೊಂಡಿದ್ದರೂ ಅದು ಕೇವಲ ಕಾಲ್ಪನಿಕವೆಂದು ಅವರ ದೃಷ್ಟಿಯಲ್ಲಿ ಶ್ಲೋಕದ ಭಾವಾರ್ಥವಾಗಿದೆ.

ಈ ನಿರೂಪಣೆಯು ಅತ್ಯಂತ ವಿಚಿತ್ರವೆಂದು ನಮಗನಿಸುತ್ತದೆ. ಇಷ್ಟರವರೆಗೆ ಹಾಗೂ ಇನ್ನು ಮುಂದಿನ ಭಾಗದಲ್ಲಿ ನಿರ್ಬಂಧಪೂರ್ವಕವಾಗಿ ಅರ್ಜುನನಿಗೆ ಕರ್ತವ್ಯಾಚರಣೆಯ ಬಗ್ಗೆ ಉಪದೇಶವನ್ನು ನೀಡಿದ ಪರಮಾತ್ಮನು ಈ ಪ್ರಸಂಗ, ಸಂದರ್ಭಗಳಿಗೆ ವಿರುದ್ಧವಾಗಿ ಕರ್ತವ್ಯ ಪ್ರಪಂಚವನ್ನು ಅಲ್ಲಗಳೆಯುವ ಈ ಭಾವನೆಯನ್ನು ನೀಡಿದ್ದಾನೆಂದು ನಾವು ಹೇಗೆ ಭಾವಿಸೋಣ? ನಾವು ಮಾಡುತ್ತಿರುವ ಕರ್ತವ್ಯಗಳೆಲ್ಲ ಸ್ವಪ್ನ ಪ್ರಪಂಚದಂತೆ ಅಸತ್ಯವಾಗಿದ್ದರೆ ಇದನ್ನು ಬಹು ಪ್ರಯಾಸದಿಂದ, ಶ್ರದ್ಧೆಯಿಂದ ನಾವೇಕೆ ಅನುಷ್ಠಾನ ಮಾಡಬೇಕು? ಮಹಾಪ್ರಯತ್ನದಿಂದ ಇಷ್ಟೆಲ್ಲ ಕರ್ಮದ ಹಗರಣ ಮಾಡಿದರೂ ನಮ್ಮ ಈ ಎಲ್ಲ ಸಾಧನೆಗಳು ''ಇಲ್ಲ'' ಎನ್ನುವುದಾದರೆ ಮೊದಲಿನಿಂದಲೇ ಸುಮ್ಮನಿರುವುದು ಲೇಸೆಂಬ ಭಾವನೆಯು ಉಂಟಾಗಲಾರದೆ? ಕರ್ಮ, ಅಕರ್ಮ ಇವೆರಡೂ

ಕಾಲ್ಪನಿಕವೆಂಬ ಉಪದೇಶದಿಂದ ಅರ್ಜುನನಿಗೆ ಕರ್ತವ್ಯದ ಪ್ರವೃತ್ತಿಯಾಗುವುದರ ಬದಲು ಗೊಂದಲವನ್ನೇ ಉಂಟುಮಾಡಿದಂತಾಗುವುದು. ಇಂತಹ ಅಪ್ರಾಸಂಗಿಕವಾದ ವರ್ತನೆಯನ್ನು ಭಗವಂತನಿಂದ ನಾವು ನಿರೀಕ್ಷಿಸಲಾರೆವು.

ಇದರ ಮುಂದಿನ ಭಾಗದಲ್ಲೇ ಗೀತೆಯಲ್ಲಿ ಹೀಗೆ ಹೇಳಲಾಗಿದೆ:

**ತ್ಯಕ್ತ್ವಾ ಕರ್ಮಫಲಾಸಂಗಂ ನಿತ್ಯತೃಪ್ತೋ ನಿರಾಶ್ರಯಃ ।**
**ಕರ್ಮಣ್ಯಭಿಪ್ರವೃತ್ತೋऽಪಿ ನೈವ ಕಿಂಚಿತ್ ಕರೋತಿ ಸಃ ॥**

ಈ ಶ್ಲೋಕದಲ್ಲಿ ಕರ್ಮದಲ್ಲಿ ಅಕರ್ಮವನ್ನು ಕಾಣುವ ವಿಧಾನವನ್ನು ವಿವರಿಸಲಾಗಿದೆ. ಫಲಾಸಕ್ತಿಯಿಲ್ಲದೆ ನಿರಹಂಕಾರಿಯಾಗಿ ಕರ್ಮಗಳನ್ನು ಆಚರಿಸುತ್ತಿದ್ದವನು ಕರ್ಮಿಯಾಗಿದ್ದರೂ ಅಕರ್ಮಿಯೆನಿಸಿಕೊಳ್ಳುವನು ಎಂದು ಈ ಶ್ಲೋಕದ ಅಭಿಪ್ರಾಯವಾಗಿದೆ.

ಕರ್ಮದಲ್ಲಿ ಅಕರ್ಮವನ್ನು ಕಾಣುವುದೆಂದರೆ ಕರ್ಮತ್ಯಾಗವಲ್ಲ. ಆಚರಿಸಿದ ಕರ್ಮವನ್ನು ಅಸತ್ಯವೆಂದು ಭಾವಿಸುವುದೂ ಅಲ್ಲ. ಆಸಕ್ತಿ ಅಹಂಕಾರಗಳಿಂದ ವಿರಹಿತವಾದ ಕರ್ಮಾನುಷ್ಠಾನವೇ ಅಕರ್ಮ ಎನ್ನುವುದನ್ನು ಗೀತಾಚಾರ್ಯನೇ ಇಲ್ಲಿ ಸ್ಪಷ್ಟವಾಗಿ ನಿರೂಪಿಸಿದ್ದಾನೆ. ''ಕರ್ಮಣ್ಯಕರ್ಮ ಯಃ ಪಶ್ಯೇತ್'' ಎನ್ನುವುದರ ಅರ್ಥವನ್ನು ವಿವೇಚಿಸುವಾಗ ಅದರ ಮುಂದೆಯೇ ಇರುವ ಈ ಶ್ಲೋಕದ ಭಾವಾರ್ಥವನ್ನು ಗಮನದಲ್ಲಿಟ್ಟುಕೊಂಡರೆ ಯಾವ ಗೊಂದಲವೂ ಇಲ್ಲದೆ ಈ ಒಗಟು ಮಾತಿನ ತಾತ್ಪರ್ಯವನ್ನು ಗ್ರಹಿಸಬಲ್ಲೆವು.

ಪ್ರಪಂಚವಾಗಲಿ ನಾವು ನೋಡುತ್ತಿರುವ ಕರ್ಮವಾಗಲಿ ಅಸತ್ಯ ಎಂಬ ವಿಚಾರವು ಭಗವದ್ಗೀತೆಯಲ್ಲಿ ಎಲ್ಲಿಯೂ ನಿರೂಪಿತವಾಗಿರುವುದಿಲ್ಲ. ಗೀತೆಯು ಹೆಜ್ಜೆ ಹೆಜ್ಜೆಗೂ ಬೋಧಿಸಿದ ಕರ್ಮಯೋಗದ ಸಿದ್ಧಾಂತಕ್ಕೆ ಇದು ಅತ್ಯಂತ ವಿರೋಧಿಯೂ ಆಗುವುದು. ಬ್ರಹ್ಮನ ಸಾಕ್ಷಾತ್ಕಾರವನ್ನು ಪಡೆದವನಿಗೂ ಗೀತೆಯು ಕರ್ತವ್ಯದ ಬೋಧೆಯನ್ನು ಮಾಡಿದೆಯೆಂದು ಎಲ್ಲರೂ ಅಂಗೀಕರಿಸುತ್ತಾರೆ. ಭಗವಂತನೇ ಸಾಕ್ಷಾತ್ ತನ್ನ ಉದಾಹರಣೆಯನ್ನು ನೀಡಿ ಎಲ್ಲರೂ ಕರ್ತವ್ಯವನ್ನಾಚರಿಸಬೇಕೆಂದು ಆದೇಶವನ್ನು ನೀಡಿರುವನು.

**ಕುರ್ಯಾದ್ ವಿದ್ವಾನ್ ತಥಾऽಸಕ್ತಃ।**

ಎಂದು ಜ್ಞಾನಿಯಾದವನು ಕರ್ಮವನ್ನು ಆಚರಿಸಬೇಕೆಂದು ಗೀತೆಯಲ್ಲಿ ಸ್ಪಷ್ಟವಾಗಿ ಪ್ರತಿಪಾದಿಸಲಾಗಿದೆ. ಕರ್ಮವು ಮಿಥ್ಯೆಯೆಂದೂ ಜ್ಞಾನವನ್ನು ಪಡೆದಮೇಲೆ ಕರ್ಮಾಚರಣೆಯು ಬೇಡವೆಂದೂ ಬಲವಾಗಿ ಪ್ರತಿಪಾದಿಸುವ ಶಂಕರಾಚಾರ್ಯರೂ ''ತ್ಯಕ್ತ್ವಾ ಕರ್ಮಫಲಾಸಂಗಂ'' ಎಂಬ ಶ್ಲೋಕದಲ್ಲಿ ಬ್ರಹ್ಮಜ್ಞಾನಿಗೂ ಕರ್ತವ್ಯದ ಸಂಬಂಧವನ್ನು ನಿರೂಪಿಸಲಾಗಿದೆ ಎಂಬುದನ್ನು ಒಪ್ಪಿಕೊಂಡಿರುವರು. ಅಂತೂ ಜ್ಞಾನವನ್ನು ಪಡೆದ ಮೇಲೂ ಕರ್ತವ್ಯಾಚರಣೆಯನ್ನು ಗೀತೆಯು ಬೋಧಿಸಿದೆ ಎನ್ನುವುದರಲ್ಲಿ ಏನೂ ವಿವಾದವಿಲ್ಲ. ಕರ್ಮವು ಮಿಥ್ಯೆಯೆಂದು ಗೀತೆಯ ಅಭಿಪ್ರಾಯವಿದ್ದಲ್ಲಿ ಜ್ಞಾನಿಗೆ ಗೀತೆಯು ಕರ್ಮವನ್ನು ಬೋಧಿಸಿರುವುದು ಹೇಗೆ ಉಚಿತವಾಗುವುದು? ಕರ್ಮವು ಮಿಥ್ಯೆಯಾದಲ್ಲಿ ಬ್ರಹ್ಮದರ್ಶನದ ಅನಂತರ ಅದನ್ನು ಆಚರಿಸುವುದು ಹೇಗೆ? ಹಗ್ಗವನ್ನು ಹಾವೆಂದು ಭ್ರಮಿಸಿದವನಿಗೆ ಹಗ್ಗದ ಸರಿಯಾದ ತಿಳುವಳಿಕೆಯುಂಟಾದಾಗ ಹಾವಿನ ಭ್ರಮೆ ಉಳಿಯುವುದಿಲ್ಲ. ಅದರಂತೆ ಭ್ರಮೆಯ ದೆಶೆಯಲ್ಲಿ ಜಗತ್ತು ಮತ್ತು ಕರ್ಮಗಳ ಕಲ್ಪನೆ ಇದ್ದರೂ ಇವು ಅಸತ್ಯವಾಗಿದ್ದರೆ, ಸತ್ಯದರ್ಶನವನ್ನು ಪಡೆದ ಬ್ರಹ್ಮಜ್ಞಾನಿಗೆ ಇವು ಯಾವವೂ ಗೋಚರವಾಗಲಾರವು. ಯಥಾರ್ಥ ದರ್ಶನದ ನಂತರವೂ ಯಾವುದು ಉಳಿದಿದೆಯೋ ಅದು ಅಸತ್ಯದ ಗುಂಪಿಗೆ ಸೇರಲಾರದು. ಬ್ರಹ್ಮಜ್ಞಾನವನ್ನು ಪಡೆದವನೂ ಜಗತ್ತಿನಲ್ಲಿದ್ದು ಕರ್ತವ್ಯವನ್ನು ಸಲ್ಲಿಸುತ್ತಿದ್ದರೆ ಈ ಪ್ರಪಂಚ ಮತ್ತು ಅವನು ಆಚರಿಸುವ ಕರ್ಮಗಳು ಮಾಯಿಕವೆಂದೂ ಅಸತ್ಯವೆಂದೂ ಹೇಗೆ ಹೇಳುವುದು? ಯಥಾರ್ಥವಾದ ಬ್ರಹ್ಮದರ್ಶನವನ್ನು ಪಡೆದ ನಂತರವೂ ಗೋಚರವಾಗಿರುವ ಈ ಕರ್ಮ ಪ್ರಪಂಚವೂ ಅದರ ಆಧಾರವಾಗಿರುವ ಈ ಜಗತ್ತೂ ಸತ್ಯವೆಂಬುದೇ ಗೀತೆಯ ಆಶಯವಾಗಿದೆ. ಆದುದರಿಂದ ''ಕರ್ಮಣ್ಯಕರ್ಮ ಯಃ ಪಶ್ಯೇತ್'' ಈ ಶ್ಲೋಕವೂ ಕರ್ಮದ ಅಸತ್ಯತೆಯನ್ನು ಪ್ರತಿಪಾದಿಸುತ್ತಿದೆ ಎನ್ನುವುದು ಗೀತೆಯ ಮೂಲ ಪ್ರತಿಪಾದನೆಗೇ ವಿರೋಧಿಯಾಗಿದೆ.

## ಯಜ್ಞದ ವಿವಿಧ ಪ್ರಕಾರಗಳು

ಪರಮಾತ್ಮನ ಸ್ವಾತಂತ್ರ್ಯ, ಸರ್ವಕರ್ತೃತ್ವಗಳನ್ನು ಸರ್ವದಾ ಸ್ಮರಿಸಿಕೊಂಡು ಕ್ಷುದ್ರ ಫಲಾಶೆಗಳಿಲ್ಲದೆ ಭಗವಂತನ ಸೇವಾರೂಪವಾಗಿ ಸ್ವಧರ್ಮವನ್ನಾಚರಿಸುವುದೇ ನಿಜವಾದ ಕರ್ಮಾಚರಣೆಯಾಗಿದೆ. ಯಜ್ಞರೂಪವಾದ ಇಂತಹ ಕರ್ಮವು ನಮಗೆ ಸಂಸಾರ ಬಂಧನಕ್ಕೆ ಪೋಷಕವಾಗುವುದಿಲ್ಲ ಎಂಬುದೇ ಇಷ್ಟರವರೆಗಿನ ಗೀತೋಪದೇಶದ ಮಥಿತಾರ್ಥವಾಗಿದೆ. ಯಜ್ಞರೂಪವಾದ ಈ ಕರ್ಮದ ವಿವಿಧ ರೀತಿಗಳನ್ನು ಈ ನಾಲ್ಕನೆಯ ಅಧ್ಯಾಯದಲ್ಲಿ ಪರಮಾತ್ಮನು ವಿವರಿಸುತ್ತಾನೆ:

> ದ್ರವ್ಯಯಜ್ಞಾಸ್ತಪೋಯಜ್ಞಾಃ ಯೋಗಯಜ್ಞಾಸ್ತಥಾಪರೇ ।
> ಸ್ವಾಧ್ಯಾಯಜ್ಞಾನಯಜ್ಞಾಶ್ಚ ಯತಯಃ ಸಂಶಿತವ್ರತಾಃ ॥
> ಏವಂ ಬಹುವಿಧಾ ಯಜ್ಞಾ ವಿತತಾ ಬ್ರಹ್ಮಣೋ ಮುಖೇ ।

ಪರಮಾತ್ಮನ ಪ್ರೀತಿಯಾಗಲಿ ಎಂಬ ಉದ್ದೇಶದಿಂದ ಕಾಮರಾಗಾದಿಗಳು ಇಲ್ಲದೆ ಮಾಡುವ ಕಾರ್ಯಗಳೆಲ್ಲವೂ ಯಜ್ಞಗಳೇ. ಅಗ್ನಿಯಲ್ಲಿ ಆಹುತಿಯನ್ನು ನೀಡಿ ನಡೆಸಲಾಗುವ ಪ್ರಸಿದ್ಧವಾದ ಯಜ್ಞವನ್ನು ಸಂನ್ಯಾಸಿಗಳು ಮಾಡಬಾರದು ಎಂದಿದೆ. ಆದರೆ ಗೀತೆಯಲ್ಲಿ ನಿರೂಪಿಸಿದ ಯಜ್ಞಕ್ಕೆ ಎಲ್ಲರೂ ಅಧಿಕಾರಿಗಳೇ. ಯೋಗಿಗಳು ಮಾಡುವ ಭಗವದುಪಾಸನೆಯೂ ಸಾಧಕರು ನಡೆಸುವ ಇಂದ್ರಿಯನಿಗ್ರಹ ಉಪವಾಸ ಪ್ರಾಣಾಯಾಮಾದಿಗಳೂ ವಿದ್ವಾಂಸರ ಪಾಠಪ್ರವಚನಗಳೂ ಎಲ್ಲವೂ ಯಜ್ಞಗಳೇ ಆಗಿವೆ. ಹೆಚ್ಚೇಕೆ, ಇಂದ್ರಿಯಗಳಿಂದ ನಡೆಯುವ ವಿಷಯೋಪಭೋಗ ವ್ಯವಹಾರವೂ ಕೂಡ ಯಜ್ಞವೇ ಆಗುವುದು.

> ಶಬ್ದಾದೀನ್ ವಿಷಯಾನನ್ಯೇ ಇಂದ್ರಿಯಾಗ್ನಿಷು ಜುಹ್ವತಿ ।

ಇಂದ್ರಿಯವೆಂಬ ಅಗ್ನಿಯಲ್ಲಿ ರೂಪ, ರಸ ಮುಂತಾದ ಹವಿಸ್ಸನ್ನು ಕೆಲವರು ಹೋಮಿಸುವರೆಂದು ವಿಷಯೋಪಭೋಗದ ಯಜ್ಞವನ್ನು ವರ್ಣಿಸಲಾಗಿದೆ. ಶರೀರವೂ ಪರಮಾತ್ಮನ ಸೇವೆಗೆ ಉಪಕರಣವೆಂದು ಬಗೆದು ಸೇವಾಕಾರ್ಯವು ಅವ್ಯಾಹತವಾಗಿ ನಡೆಯಲೆಂಬ ಭಾವನೆಯಿಂದ ನಿರಭಿಮಾನದಿಂದ ಶರೀರ ಪೋಷಣೆಗಾಗಿ ಆಹಾರಾದಿ ಪದಾರ್ಥಗಳನ್ನು ಸ್ವೀಕರಿಸಿದರೆ ಅದೂ ಪವಿತ್ರವಾದ

ಯಜ್ಞವೆನಿಸುವುದು. ಯಾಂತ್ರಿಕನು ತನ್ನ ಯಂತ್ರವು ಸರಿಯಾಗಿ ಕೆಲಸ ಮಾಡಲೆಂದು ಅದಕ್ಕೆ ಎಣ್ಣೆಯನ್ನು ಹಾಕುವಂತೆ ಶರೀರವೂ ಒಂದು ಯಂತ್ರೋಪಕರಣವೆಂದು ಭಾವಿಸಿ ಅದಕ್ಕೆ ಪೋಷಕದ್ರವ್ಯವನ್ನು ಜ್ಞಾನಿಯು ನೀಡುವನು. ಈ ಸಂದರ್ಭದಲ್ಲಿ ಅವನಲ್ಲಿ ಯಾವುದೇ ಚಿತ್ತೋದ್ರೇಕ ವಿಕಾರಗಳಿಗೆ ಅವಕಾಶವಿರುವುದಿಲ್ಲ. ಇಂತಹ ಮಾನಸಿಕ ಸುಸ್ಥಿತಿಯಿಂದ ನಡೆಸ ಲಾಗುವ ಆಹಾರಾದಿ ಸೇವನೆಯಾಗಲಿ ಇತರ ಎಲ್ಲ ದೈನಂದಿನ ಶಾರೀರಿಕ ವ್ಯವ ಹಾರಗಳಾಗಲಿ ಯಜ್ಞದ ಪ್ರಭೇದಗಳೆಂದೇ ಗೀತೆಯಲ್ಲಿ ಪರಿಗಣಿಸಲಾಗಿದೆ.

ಛಾಂದೋಗ್ಯೋಪನಿಷತ್ತಿನಲ್ಲಿ ಜೀವನವನ್ನೇ ಒಂದು ಯಜ್ಞವೆಂದು ಕರೆಯಲಾಗಿದೆ. ಪರಮಾತ್ಮನ ಸೇವೆಗಾಗಿಯೇ ತನ್ನ ಜೀವನದ ಸಕಲ ವ್ಯವಹಾರಗಳನ್ನು ಮೀಸಲಾಗಿರಿಸಿದ ಪುಣ್ಯಪುರುಷನ ಜೀವನವೇ ಒಂದು ಪರಮಯಜ್ಞವೆನಿಸುವುದು. ಎಲ್ಲಿ ತ್ಯಾಗವಿದೆಯೋ ಎಲ್ಲಿ ಭಗವಂತನಲ್ಲಿ ಸಮರ್ಪಣಬುದ್ಧಿ ಇದೆಯೋ ಅಲ್ಲೇ ಯಜ್ಞದ ನಿಜವಾದ ತಿರುಳು ಇದೆ. ಪವಿತ್ರವಾದ ಜೀವನದಲ್ಲಿ ಈ ಭಾವವು ಸಂಪೂರ್ಣವಾಗಿ ಅನುಸ್ಯೂತ ವಾಗಿರುವುದರಿಂದ ಅದನ್ನು ಯಜ್ಞವೆಂದು ಕರೆದಿರುವುದು ಸಹಜವೇ ಆಗಿದೆ. ಯಜ್ಞದಲ್ಲಿ ದಕ್ಷಿಣೆಗೆ ಪ್ರಾಮುಖ್ಯವಾದ ಸ್ಥಾನವಿರುವುದು. ದಕ್ಷಿಣೆಯಿಲ್ಲದ ಯಜ್ಞವು ಫಲಕಾರಿಯಾಗಲಾರದು. ಜೀವನ ಯಜ್ಞದಲ್ಲಿ ದಕ್ಷಿಣೆಯು ಯಾವುದೆಂಬುದನ್ನು ವಿವೇಚಿಸಿ ಸತ್ಯ, ದಯೆ, ಅಭಯಗಳೇ ದಕ್ಷಿಣೆಗಳೆಂದು ಉಪನಿಷತ್ತು ನಿರೂಪಿಸಿದೆ. ಈ ಸದ್ಗುಣಗಳಿಂದಲೇ ನಮ್ಮ ಜೀವನಯಜ್ಞವು ಪರಿಪೂರ್ಣತೆಯನ್ನೂ ಸಾಫಲ್ಯವನ್ನೂ ಪಡೆಯಬಲ್ಲದು. ಮರಣವೇ ಈ ಯಜ್ಞದ ಅವಭೃಥವೆಂದು ಮಾರ್ಮಿಕವಾಗಿ ಕೊನೆಯಲ್ಲಿ ವರ್ಣಿಸಲಾಗಿದೆ. ನಿಜವಾದ ಜ್ಞಾನಿಯೂ ಕರ್ತವ್ಯನಿರತನೂ ಆದ ವ್ಯಕ್ತಿಯು ಮರಣಕ್ಕೆ ಅಂಜುವುದಿಲ್ಲ. ಮರಣವೊಂದು ವರದಾನ ಎಂದು ಬಗೆದು ಅದನ್ನು ಆದರದಿಂದಲೇ ಎದುರಿಸುವನು. ಯಜ್ಞವನ್ನು ಅನುಷ್ಠಾನ ಮಾಡುವವರು ಅವಭೃಥಸ್ನಾನಕ್ಕೆ ಉತ್ಸಾಹದಿಂದ ಹಾತೊರೆಯುವಂತೆ ತನ್ನ ಜೀವನದ ಪರಮಸಿದ್ಧಿಯನ್ನು ಪಡೆಯುವುದಕ್ಕಾಗಿ ಮರಣವನ್ನು ಆನಂದದಿಂದ ಕರ್ಮಯೋಗಿಗಳು ಸ್ವಾಗತಿಸಬಲ್ಲರು.

ಹೀಗೆ ಯಜ್ಞವನ್ನು ಅತ್ಯಂತ ವಿಸ್ತೃತವಾದ ಅರ್ಥದಲ್ಲಿ ನಮಗೆ ಗೀತೆಯು ತೋರಿಸಿದೆ. ತಾನು, ತನ್ನದು ಎಂಬ ಪರಿಮಿತ ವರ್ತುಲದಲ್ಲಿಯೇ ತಿರುಗುತ್ತ ಸ್ವಾರ್ಥಕ್ಕಾಗಿಯೇ ಜೀವನದ ಎಲ್ಲ ವ್ಯವಹಾರಗಳನ್ನೂ ನಡೆಸುವ ಭೋಗಜೀವನದಿಂದ ನಮ್ಮನ್ನು ಪರಾವೃತ್ತಗೊಳಿಸಿ ಲೋಕಕ್ಕಾಗಿ, ಲೋಕದ ಅಂತರ್ಯಾಮಿಯಾದ ಭಗವಂತನಿಗಾಗಿ, ತನ್ನ ಜೀವನವನ್ನು ಧಾರೆ ಎರೆಯುವ ತ್ಯಾಗಜೀವನವನ್ನು ಗೀತೆಯು ನಮಗೆ ಬೋಧಿಸಿದೆ. ಸ್ವರ್ಗ, ಸಂಪತ್ತು ಮೊದಲಾದ ಲೌಕಿಕ ಸುಖಗಳನ್ನು ಪಡೆಯುವುದಕ್ಕಾಗಿ ವಿವಿಧ ದೇವತೆಗಳ ಹೆಸರಿನಲ್ಲಿ ಅಗ್ನಿಯಲ್ಲಿ ಘೃತ, ಹವಿಸ್ಸುಗಳನ್ನು ಪ್ರಕ್ಷೇಪಿಸುವುದೇ ಯಜ್ಞವೆಂದು ಭಾವಿಸಿದ ಜನತೆಗೆ ಯಜ್ಞದ ವಿಸ್ತಾರವಾದ ಭವ್ಯರೂಪವನ್ನು ಗೀತೆಯಲ್ಲಿ ವಿವರಿಸಲಾಗಿದೆ. ಸ್ವಾಮಿಯು ತನ್ನ ವಿಶ್ವರೂಪವನ್ನು ಅರ್ಜುನನಿಗೆ ತೋರಿಸಿದಂತೆ ಗೀತೆಯಲ್ಲಿ ಯಜ್ಞದ ವಿಶ್ವರೂಪವನ್ನು ನಮಗೆ ತೋರಿಸಿರುವನು. ಲೌಕಿಕ ಯಜ್ಞದಲ್ಲಿ ಪಶುವಧೆಯೂ ಒಂದು ಅಂಗವಾಗಿ ಪರಿಗಣಿತವಾಗಿದೆ. ಗೀತೆಯು ಬೋಧಿಸಿದ ಯಜ್ಞದಲ್ಲಿ ನಾವು ವಧಿಸಬೇಕಾಗಿರುವ ಪಶುಗಳೆಂದರೆ ನಮ್ಮ ಒಳಗಿರುವ ಅಹಂಕಾರ, ಮಮತೆಗಳೇ ಆಗಿವೆ. ಭೋಗಲಾಲಸೆಗೆ ಪರವಶರಾದ ಜನರು ಪಶುಗಳಂತೆ ಸ್ವೇಚ್ಛಾ ಪ್ರವೃತ್ತರಾಗಿ ಅವಿವೇಕದಿಂದ ವರ್ತಿಸುತ್ತಾರೆ. ನಮ್ಮಲ್ಲಿ ಹುದುಗಿರುವ ಈ ಪಶುತ್ವವನ್ನು ವಧಿಸುವುದೇ ಗೀತೆಯು ವಿಧಿಸುವ ಯಜ್ಞದ ಪವಿತ್ರಬಲಿಯಾಗಿದೆ. ಮಮತೆ, ಮೋಹಗಳಿಗೆ ಒಳಗಾದ ಜನರು ಎಲ್ಲವನ್ನು ಮೇಕೆಯಂತೆ ''ಮೇ ಮೇ'' -ನನ್ನದು ನನ್ನದೆಂದೇ ಅನ್ನುವರು. ಇಂತಹ ಸ್ವಾರ್ಥ ಪಶುವಿನ ವಿಹಾರ ಭೂಮಿಯಾಗಿದೆ ನಮ್ಮ ಜೀವನ.

**ಇದಮದ್ಯ ಮಯಾ ಲಬ್ಧಂ ಇಮಂ ಪ್ರಾಪ್ಸ್ಯೇ ಮನೋರಥಂ ।**
**ಈಹಂತೇ ಕಾಮಭೋಗಾರ್ಥಮನ್ಯಾಯೇನಾರ್ಥಸಂಚಯಾನ್ ।**

ಪ್ರಪಂಚದಲ್ಲಿ ಯಾವುದು ಕಾಣಸಿಗುತ್ತದೋ ಅದೆಲ್ಲ ತನ್ನದಾಗಬೇಕೆಂದು ಇವರು ಸದಾ ಬಡಬಡಿಸುತ್ತಾರೆ. ಇಂದು ಇದನ್ನು ಪಡೆದಿದ್ದೇನೆ, ನಾಳೆ ಇನ್ನೊಂದನ್ನು ಪಡೆಯಬೇಕೆಂಬುದೇ ಇಂತಹವರ ಮಂತ್ರ, ಚಿಂತನೆಗಳು. ಸಂಪತ್ತನ್ನು ಅಭಿವೃದ್ಧಿಪಡಿಸಲು, ಅಧಿಕಾರಕ್ಕೆ ಕೊನೆಯವರೆಗೂ ಅಂಟಿಕೊಳ್ಳಲು

ಯಾವ ಅಕೃತ್ಯ ಅವ್ಯವಹಾರಗಳನ್ನು ಮಾಡಲೂ ಇಂತಹ ಜನರು ಅಂಜುವುದಿಲ್ಲ. ಇಂದು ಇಂತಹ ಪ್ರವೃತ್ತಿಯನ್ನು ಎಲ್ಲ ರಂಗಗಳಲ್ಲೂ ಬಹಳ ಅಸಹನೀಯವೆನ್ನುವ ಸ್ಥಿತಿಯಲ್ಲಿ ನಾವು ನೋಡುತ್ತಲೇ ಇದ್ದೇವೆ. ಗೀತೆಯು ನಿರೂಪಿಸಿದ ಈ ಯಜ್ಞದೃಷ್ಟಿಯು ನಮ್ಮ ಜೀವನದ ಎಲ್ಲ ರಂಗಗಳಲ್ಲೂ ವ್ಯಾಪಿಸಿದರೆ ಮಾತ್ರ ಈ ವಿಕಲ್ಪ ವಿಕಾರಗಳ ನಿರ್ನಾಮವಾಗಬಲ್ಲದು. ಈ ಸ್ವಾರ್ಥಪಶುವಿನ ಬಲಿದಾನ ಮಾಡಿ ವಿಶ್ವದ ಅಧಿದೇವತೆಯಾದ ಭಗವಂತನಿಗೆ ನಮ್ಮದೆಲ್ಲವನ್ನೂ ಅರ್ಪಿಸಿ ಅವನ ಪೂಜಾರೂಪವಾಗಿ ವಿಶ್ವಹಿತಕರವಾದ ಸೇವಾಕಾರ್ಯಗಳನ್ನೆಲ್ಲ ನಡೆಸುವುದೇ ಈ ಜೀವನವ್ಯಾಪಿ ಪವಿತ್ರ ಯಜ್ಞವಾಗಿದೆ. ಇದೇ ಭಗವಂತನ ನಿಜವಾದ ಮಹಾಪೂಜೆಯೆನಿಸುವುದು.

> **ಪ್ರಾತಃಪ್ರಭೃತಿ ಸಾಯಾಂತಂ**
> **ಸಾಯಾದಿ ಪ್ರಾತರಂ ತತಃ ।**
> **ಯತ್ ಕರೋಮಿ ಜಗನ್ನಾಥ**
> **ತದಸ್ತು ತವ ಪೂಜನಂ ॥**
>
> -ಪಂಚರಾತ್ರ

ಎಂದು ಹೇಳಿದಂತೆ ಬೆಳಗಿನಿಂದ ಸಾಯಂಕಾಲದವರೆಗೆ ನಾವು ಮಾಡುವ ಎಲ್ಲ ಕಾರ್ಯಗಳೂ ಪರಮಾತ್ಮನ ಪೂಜೆಯೆನ್ನುವ ರೀತಿಯಲ್ಲಿ ನಾವು ವ್ಯವಹರಿಸಬೇಕು. ದಿನಕ್ಕೆ ಒಂದು ಘಂಟೆಯಾಗಲಿ ವಾರಕ್ಕೆ ಒಂದು ದಿನವಾಗಲಿ ದೇವರ ಪೂಜೆಯನ್ನು ಮಾಡಿ, ದೇವರನ್ನು, ಧರ್ಮವನ್ನು ಗುಡಿಯೊಳಗಾಗಲಿ ಪೆಟ್ಟಿಗೆಯಲ್ಲಾಗಲಿ, ನಮಗೂ ಅದಕ್ಕೂ ಮುಂದಿನ ಪೂಜಾಪ್ರಾರ್ಥನೆಗಳವರೆಗೆ ಸಂಬಂಧವೇ ಇಲ್ಲವೆನ್ನುವ ರೀತಿಯಲ್ಲಿ ಬಿಟ್ಟು ಉಳಿದ ಸಮಯದಲ್ಲಿ ವ್ಯವಹರಿಸುವ ಧರ್ಮವನ್ನು ಗೀತೆಯು ನಮಗೆ ಬೋಧಿಸುತ್ತಿಲ್ಲ. ಧರ್ಮವು ಜೀವನವ್ಯಾಪಿಯಾಗಿರಬೇಕು. ಧರ್ಮವು ಜೀವನದ ಒಂದು ಅಂಗವಾಗಿರದೆ ಜೀವನದ ಎಲ್ಲ ರಂಗಗಳಿಗೂ ಚೈತನ್ಯದಾಯಿಯಾಗಿ, ಅದು ಶರೀರಕ್ಕೆ ಆತ್ಮದಂತೆ ನಮ್ಮ ಜೀವನದಲ್ಲಿ ಪ್ರತಿಷ್ಠಿತವಾಗಿರಬೇಕು. ಜೀವನನಿರ್ವಾಹಕ್ಕಾಗಿ ನಾವು ನಡೆಸುವ ವ್ಯವಹಾರಗಳನ್ನು ಧರ್ಮದಿಂದ ಬೇರ್ಪಡಿಸಿ ಇಡಬಾರದು. ಪರಮಾತ್ಮನಲ್ಲಿ ಭೃತ್ಯಭಾವನೆಯನ್ನು ತುಂಬಿಕೊಂಡು ತಾನು ಮಾಡುವ ಜೀವನವೃತ್ತಿಗಳಲ್ಲಿಯೂ ಪ್ರಾಮಾಣಿಕತೆ

ಹಾಗೂ ಲೋಕಹಿತದೃಷ್ಟಿಯಲ್ಲಿ ಬೆಳೆಸಿಕೊಂಡು ಅನಿಷಿದ್ಧವಾದ ಲೌಕಿಕ ವ್ಯವಹಾರಗಳನ್ನು ನಡೆಸಿದಲ್ಲಿ ಅದೂ ಧರ್ಮವೆನಿಸುವುದು.

ಭಾರತದಲ್ಲಿ ಉಲ್ಲೇಖಿಸಲಾದ ತುಲಾಧಾರನ ಕಥೆಯು ಇದಕ್ಕೆ ಜ್ವಲಂತ ನಿದರ್ಶನವಾಗಿದೆ. ತನ್ನ ತಪಸ್ಸಿನ ಬಗ್ಗೆ ಅಹಂಭಾವಕ್ಕೆ ಒಳಗಾದ ಬ್ರಾಹ್ಮಣ ಜಾಜಲಿಯು ನಗರದಲ್ಲಿರುವ ತುಲಾಧಾರನ ಯೋಗ್ಯತೆಯೂ ತನಗಿಲ್ಲವೆಂಬ ಅಶರೀರವಾಣಿಯ ಮೂದಲಿಕೆಯ ಮಾತಿನಿಂದ ಅವಮಾನಿತನಾಗಿ ವ್ಯಾಪಾರಿ ತುಲಾಧಾರನ ಬಳಿಗೆ ಬರುತ್ತಾನೆ. ತುಲಾಧಾರನ ವೇಷ, ವ್ಯವಹಾರಗಳನ್ನು ನೋಡಿ ಅವನ ಬಳಿ ಉಪದೇಶವನ್ನು ಪಡೆಯಲು ಜಾಜಲಿಯು ಹಿಂದೆಮುಂದೆ ನೋಡುತ್ತಿದ್ದಾಗ ತುಲಾಧಾರನೇ ಜಾಜಲಿಯ ಪೂರ್ವಾಪರ ವಿಚಾರಗಳನ್ನು ತಿಳಿಸುತ್ತಾನೆ. ಆಶ್ಚರ್ಯಚಕಿತನಾದ ಜಾಜಲಿಯು, ಈ ದಿವ್ಯದೃಷ್ಟಿಯ ರಹಸ್ಯವೇನು? ಯಾವ ಮಂತ್ರ, ತಂತ್ರ ಚಮತ್ಕಾರಗಳಿಂದ ಈ ಅಪರೋಕ್ಷ ದೃಷ್ಟಿಯ ಬುದ್ಧಿಯು ಲಭಿಸಿತೆಂದು ತುಲಾಧಾರನನ್ನು ಕೇಳುತ್ತಾನೆ. ಆಗ ತುಲಾಧಾರನು ನೀಡುವ ಉತ್ತರವು ಮಾರ್ಮಿಕವೂ ಮನನೀಯವೂ ಆಗಿದೆ. ''ನನ್ನ ಕೈಯಲ್ಲಿರುವ ತಕ್ಕಡಿಯೇ ನನಗೆ ಗುರುವಾಗಿದೆ. ಬೇರೆ ಯಾವುದೇ ಮಂತ್ರ, ಚಮತ್ಕಾರಗಳನ್ನು ನಾನು ಪಡೆದಿಲ್ಲ. ಯಾರೇ ಬರಲಿ, ತನ್ನವರಿರಲಿ, ಪರಕೀಯರಿರಲಿ, ತಕ್ಕಡಿಯ ದಂಡಿಗೆ ಒಂದೇ ರೀತಿ ಇರುತ್ತದೆ. ಅದರಂತೆಯೇ ನಾನು ನಡೆಸಿರುವ ಪ್ರಾಮಾಣಿಕ ವ್ಯವಹಾರದಿಂದಲೇ ತಾನು ಈ ಶಕ್ತಿಯನ್ನು ಪಡೆದಿರುವೆನು'' ಎನ್ನುತ್ತಾನೆ ತುಲಾಧಾರ.

**ಅದ್ರೋಹೇಣೈವ ಭೂತಾನಾಂ ಅಲ್ಪದ್ರೋಹೇಣ ವಾ ಪುನಃ ।**

ಸಾಧ್ಯವಿದ್ದಷ್ಟು ಪರರಿಗೆ ತನ್ನಿಂದ ದ್ರೋಹವಾಗದಂತೆ ವ್ಯವಹಾರವನ್ನು ನಡೆಸುವ ತನ್ನ ಪ್ರಾಮಾಣಿಕ ಪ್ರಯತ್ನವನ್ನು ತುಲಾಧಾರನು ವಿವರಿಸುತ್ತಾನೆ. ಜೀವನನಿರ್ವಾಹಕ್ಕಾಗಿ ಲೌಕಿಕ ಉದ್ಯೋಗಗಳನ್ನು ನಾವು ಆಶ್ರಯಿಸಿದರೂ ಅದನ್ನು ಧರ್ಮಮಯವನ್ನಾಗಿ ಹೇಗೆ ಪರಿವರ್ತಿಸಿಕೊಳ್ಳಬಹುದೆಂಬುದನ್ನು ನಾವು ತುಲಾಧಾರನ ಉದಾಹರಣೆಯಿಂದ ತಿಳಿದುಕೊಳ್ಳಬಹುದು. ತುಲಾಧಾರನ ಈ ಕಥೆಯು ನಮಗೆ ಅತ್ಯಂತ ಪ್ರಿಯವಾದ ಉಪಾಖ್ಯಾನವಾಗಿದೆ. ಜೀವನದ ಪೂರ್ಣ ತತ್ತ್ವ ಆದರ್ಶಗಳೇ ಈ ಕಥೆಯಲ್ಲಿ ಅಡಕವಾಗಿವೆ. ನಮ್ಮ ನಿತ್ಯ

ಜೀವನದಲ್ಲಿ ಧರ್ಮವು ಹೇಗೆ ಸಮನ್ವಿತವಾಗಬಲ್ಲದೆಂಬುದನ್ನು, ಧರ್ಮದ ಸರಳತನ ಹಾಗೂ ವ್ಯವಹಾರ್ಯತೆಯನ್ನು ಇದು ಚೆನ್ನಾಗಿ ತೋರಿಸಿಕೊಡುತ್ತಿದೆ. ಅಂತೂ ಭಗವದ್ಭಕ್ತಿ ಹಾಗೂ ತ್ಯಾಗ ಭಾವನೆಗಳಿಂದ ಪ್ರೇರಿತರಾಗಿ ನಾವು ಎಸಗುವ ಸಕಲ ಕಾರ್ಯಗಳೂ ಯಜ್ಞರೂಪವೆನಿಸುವವು. ಇಂತಹ ಕೃತಿಗಳಿಂದ ನಮ್ಮ ಜೀವನವನ್ನು ಪವಿತ್ರಗೊಳಿಸಬೇಕೆಂಬುದೇ ಗೀತೆಯ ಮುಖ್ಯ ಸಂದೇಶವಾಗಿದೆ.

## ಜ್ಞಾನವೇ ಯಜ್ಞದ ಫಲ

ಇಂತಹ ಯಜ್ಞದ ಉದ್ದೇಶವೇನು? ನಾವು ಮಾಡುವ ಎಲ್ಲ ಯಜ್ಞಮಯ ಕಾರ್ಯಗಳಿಂದ ಪಡೆಯಬಹುದಾದ ಪರಮಪುರುಷಾರ್ಥವೇನು? ಭಕ್ತಿ ತ್ಯಾಗಗಳಿಂದ ನಾವು ಮಾಡುವ ಸತ್ಕರ್ಮಗಳೆಲ್ಲ ಒಂದು ಸಾಧನೆಯಾಗುತ್ತವೆ; ಭಗವಂತನ ಕಡೆಗೆ ಸಾಗುವ ದಿವ್ಯಯಾತ್ರೆ ಎನಿಸುತ್ತವೆ. ಈ ಪವಿತ್ರ ಕರ್ಮಗಳಿಂದ ಹೃದಯಸಂಸ್ಕಾರವನ್ನು ಹೊಂದಿ ಭಗವಂತನ ದರ್ಶನವನ್ನು ಪಡೆಯುವುದು, ಇವೆಲ್ಲ ಸತ್ಕರ್ಮಗಳ ಅಂತಿಮ ಗುರಿಯಾಗಿದೆ.

**ಸರ್ವಂ ಕರ್ಮಾಖಿಲಂ ಪಾರ್ಥ ಜ್ಞಾನೇ ಪರಿಸಮಾಪ್ಯತೇ ।**

ಆದುದರಿಂದ ಯಜ್ಞದ ವಿವಿಧ ಪ್ರಕಾರಗಳಲ್ಲಿ ಜ್ಞಾನಯಜ್ಞಕ್ಕೆ ವಿಶೇಷ ಮಹತ್ತ್ವವಿದೆ. ಭಗವದ್‌ಜ್ಞಾನವನ್ನು ಪಡೆಯುವ ವಿಶೇಷ ಪ್ರಯತ್ನವೇ ಜ್ಞಾನಯಜ್ಞವಾಗಿದ್ದು, ವಿವಿಧ ಲೌಕಿಕ ಹಾಗೂ ಲೋಕಸೇವಾಕಾರ್ಯಗಳನ್ನು ಯಜ್ಞರೂಪದಿಂದ ಮಾಡುತ್ತಿದ್ದರೂ ದಿನವೂ ಜ್ಞಾನಕಾರ್ಯಕ್ಕಾಗಿ ಸ್ವಲ್ಪ ಸಮಯವನ್ನಾದರೂ ಮೀಸಲಾಗಿಡುವುದು ಅವಶ್ಯವಾಗಿದೆ. ಜ್ಞಾನಕ್ಕಾಗಿಯೇ ವಿವಿಧ ಯಜ್ಞಗಳನ್ನು ನಡೆಸುತ್ತಿರುವಾಗ ಜ್ಞಾನವನ್ನೇ ಅಲಕ್ಷಿಸಿ ಕರ್ಮಮಾರ್ಗವನ್ನು ಮಾತ್ರ ನಾವು ಆಶ್ರಯಿಸಿಕೊಂಡಿರಬಾರದು.

**ಶ್ರೇಯಾನ್ ದ್ರವ್ಯಮಯಾದ್ಯಜ್ಞಾತ್ ಜ್ಞಾನಯಜ್ಞಃ ಪರಂತಪ ।**

ಇತರ ಲೌಕಿಕ ಸಾಧನ ಸಂಪತ್ತುಗಳಿಂದ ನಡೆಸಲಾಗುವ ಯಜ್ಞಕ್ಕಿಂತಲೂ ಜ್ಞಾನಸಂಪಾದನೆಗಾಗಿ ನಡೆಸುವ ಶ್ರವಣಮನನಾದಿರೂಪ ಯಜ್ಞವು ಮಹತ್ತರವಾದುದು. ಈ ಜ್ಞಾನವು ಇಲ್ಲದೆ ಇದ್ದರೆ ಕರ್ಮಮಾರ್ಗದಲ್ಲಿಯೂ ನಾವು ಸರಿಯಾಗಿ ನಡೆಯಲಾರೆವು. ಜ್ಞಾನದಿಂದ ವಂಚಿತರಾದರೆ ಕರ್ತವ್ಯಾಕರ್ತವ್ಯ ಪ್ರಜ್ಞೆ

ಇಲ್ಲದೆ ವ್ಯಾಮೋಹಕ್ಕೆ ಒಳಗಾಗುವ ಪ್ರಸಂಗವು ಬರುವುದರಿಂದ ಕರ್ಮಮಾರ್ಗ ದಲ್ಲಿ ಮುನ್ನಡೆಯಲೂ ಜ್ಞಾನದ ಅವಲಂಬನವು ಅತ್ಯಾವಶ್ಯಕವಾಗಿದೆ.

ಸ್ವಾಧ್ಯಾಯಪ್ರವಚನೇ ಏವೇತಿ ನಾಕೋ ಮೌದ್ಗಲ್ಯಃ ।
ತದ್ಧಿ ತಪಸ್ತದ್ಧಿ ತಪಃ ॥ -ತೈತ್ತಿರೀಯೋಪನಿಷತ್

ಎಂದು ಉಪನಿಷತ್ತಿನಲ್ಲಿ ಜ್ಞಾನಸಂಪಾದನೆಯ ಸಾಧನೆಯನ್ನು ಮಹಾ ತಪಸ್ಸೆಂದು ಒತ್ತಿ ಹೇಳಿದ್ದಾರೆ. ಜಪಪೂಜೆಗಳಿಗೆ ಕುಳಿತಾಗಲೂ ನಮಗೆ ಏಕಾಗ್ರತೆಯನ್ನು ಹೊಂದಲು ಸಾಧ್ಯವಾಗುವುದಿಲ್ಲ. ಆದರೆ ಗ್ರಂಥದ ಪ್ರವಚನಹ 3 ಗೂ ಅಭ್ಯಾಸದಲ್ಲಿ ತೊಡಗಿದಾಗ ಉಳಿದ ವಿಷಯಗಳನ್ನು ಮರೆತು ಮನಸ್ಸನ್ನು ತಲ್ಲೀನಗೊಳಿಸಲು ಸಾಧ್ಯವಾಗುವುದು. ಆದುದರಿಂದ ಭಾವಸಮಾಧಿಯನ್ನು ಹೊಂದಲು ಇತರ ಉಪಾಯಗಳಿಗಿಂತ ಜ್ಞಾನ ಸಾಧನೆಯ ಕಾರ್ಯವೇ ಹೆಚ್ಚು ಸುಲಭವೂ ಅನುಕೂಲವೂ ಆಗಿದೆ.

ಹೀಗಿದ್ದರೆ ಈ ಕರ್ಮಮಾರ್ಗದಲ್ಲಿ ನಡೆಯುವುದಕ್ಕಿಂತ ಪೂರ್ಣವಾಗಿ ಇಡೀ ಜೀವನದಲ್ಲಿ ಜ್ಞಾನಸಾಧನೆಯನ್ನು ಮಾತ್ರ ಅನುಷ್ಠಾನ ಮಾಡಿದರೆ ಸಾಲದೆ? ಗೀತೆಯಲ್ಲಿ ಹೇಳಿದ ವಿವಿಧ ಕರ್ಮಯಜ್ಞಗಳಲ್ಲಿ ತೊಡಗಿ ವೃಥಾ ಕಾಲಹರಣವನ್ನೇಕೆ ಮಾಡಬೇಕು? ಶ್ರೇಷ್ಠವಾದ ಜ್ಞಾನಯಜ್ಞವನ್ನು ಮಾತ್ರ ಆಶ್ರಯಿಸಬಹುದಲ್ಲವೆ? ಎಂಬ ಶಂಕೆಯು ಬರಬಹುದಾಗಿದೆ. ಆದರೆ ಜ್ಞಾನವು ಅಂತಿಮ ಗುರಿಯಾಗಿದ್ದರೂ ಜ್ಞಾನಮಾರ್ಗವೇ ಶ್ರೇಷ್ಠವಾಗಿದ್ದರೂ ಕರ್ಮದ ಸಹಾಯವಿಲ್ಲದೆ ಈ ಗುರಿಯನ್ನು ಮುಟ್ಟಲು ಸಾಧ್ಯವಿಲ್ಲವೆಂಬುದನ್ನು ನಾವು ನೆನಪಿನಲ್ಲಿಟ್ಟುಕೊಳ್ಳಬೇಕು. ಜ್ಞಾನಮಾರ್ಗವೂ ಶ್ರೇಷ್ಠವೆಂದ ಕೂಡಲೇ ಉಳಿದ ಕರ್ಮ ಸಾಧನೆಗಳು ಬೇಡವೆನ್ನುವ ಅರ್ಥದಲ್ಲಿ ನಾವು ಪರ್ಯವಸಾನ ಮಾಡಬಾರದು. ಹೊಲದಿಂದ ಬೆಳೆ ಪಡೆಯುವುದೇ ರೈತನ ಮುಖ್ಯ ಗುರಿ. ಅದಕ್ಕಾಗಿ ಸಸಿಗಳನ್ನು ನೆಡುವುದೇ ಅವನ ಮುಖ್ಯ ಕೆಲಸವಾಗಿದೆ. ಆದರೆ ಹೊಲದಲ್ಲಿ ಮಾಡಬೇಕಾದ ಇತರ ಸಾಧನಸಂಸ್ಕಾರಗಳನ್ನು ಮಾಡದೆ ಕೇವಲ ಸಸಿಗಳನ್ನು ನೆಡುವುದರಿಂದ ಬೆಳೆಯನ್ನು ಪಡೆಯಬಲ್ಲನೆ? ಉಳುವುದು, ನೀರು ಹಾಕುವುದು ಮುಂತಾದ ವಿವಿಧ ಸಾಧನೆಗಳಿಂದ ಒಡಗೂಡಿ ಬೀಜಗಳನ್ನು

ಬಿತ್ತುವುದರಿಂದಲೇ ರೈತನು ಕೃಷಿಯ ಸಾಫಲ್ಯವನ್ನು ಪಡೆಯಬಲ್ಲನು. ಸಾಕ್ಷಾತ್ಕಾರವನ್ನು ಪಡೆಯುವ ಗುರಿಯನ್ನು ಮುಟ್ಟಲೂ ಜ್ಞಾನಯಜ್ಞದ ಜೊತೆಗೆ ಅದಕ್ಕೆ ಪೋಷಕವಾಗಿ ಕರ್ಮ ಯಜ್ಞಗಳನ್ನು ನಾವು ಅನುಷ್ಠಾನ ಮಾಡಲೇ ಬೇಕಾಗುತ್ತದೆ.

**ತತ್ ಸ್ವಯಂ ಯೋಗಸಂಸಿದ್ಧಃ ಕಾಲೇನಾತ್ಮನಿ ವಿಂದತಿ ।**

ಕರ್ಮಯೋಗದ ಸಿದ್ಧಿಯನ್ನು ಪಡೆದವನೇ ಈ ಜ್ಞಾನವನ್ನು ಹೊಂದಲು ಯೋಗ್ಯನಾಗುವುದರಿಂದ ಕರ್ಮವು ಆವಶ್ಯಕ ಎಂದು ಗೀತೆಯು ನಿರೂಪಿಸಿದೆ.

ಅಂತೂ ಕರ್ಮಾಚರಣೆಯ ಸಹಕಾರದಿಂದ ಶ್ರವಣ, ಮನನ, ಧ್ಯಾನಾದಿ ರೂಪವಾದ ಜ್ಞಾನಯಜ್ಞದಿಂದ ಪರಮಾತ್ಮನ ಅಪರೋಕ್ಷ ಜ್ಞಾನದಂತಹ ಮೋಕ್ಷದ ಅಂತರಂಗಸಾಧನವನ್ನು ನಾವು ಹೊಂದುವೆವು. ಸಂಸಾರಬಂಧನಕ್ಕೆ ಕಾರಣಗಳಾದ ಪಾಪಗಳ ವಿಮೋಚನೆಗೆ ಈ ಸಾಕ್ಷಾತ್ಕಾರವೇ ಪರಮಸಾಧನ ವಾಗಿದೆ. ನಾವು ತಿಳಿದೋ ತಿಳಿಯದೆಯೋ ಮಾಡಿರುವ ಅನಂತ ದುಷ್ಕೃತ್ಯಗಳಿಂದ ನಮ್ಮ ಮನಸ್ಸು ಪಾಪಮಲೀಮಸವಾಗಿದೆ. ಇದರ ಪ್ರಕ್ಷಾಲನೆ ಮಾಡಿ ನಮ್ಮನ್ನು ಪುನೀತಗೊಳಿಸುವ ಅಮೃತಜಲಧಾರೆಯೇ ಈ ಸಾಕ್ಷಾತ್ಕಾರವೆನಿಸುವುದು. ಪಾಪದ ರಾಶಿರಾಶಿಗಳಿದ್ದರೂ ಈ ಜ್ಞಾನದ ದಿವ್ಯಾಸ್ತ್ರದಿಂದ ಅವುಗಳ ನಿರ್ಮೂಲನವಾಗುವುದು. ಎಷ್ಟು ಆಳವಾದ, ವಿಸ್ತಾರವಾದ, ಜಲರಾಶಿಯನ್ನೂ ಚಿಕ್ಕ ನಾವೆಯಿಂದ ನಾವು ಸುಲಭವಾಗಿ ದಾಟಬಲ್ಲೆವು. ಕಟ್ಟಿಗೆಗಳ ಮೂಟೆಗಳೆಷ್ಟಿದ್ದರೂ ಬೆಂಕಿಗೆ ಅವುಗಳನ್ನು ಸುಡಲು ಶ್ರಮವೆನಿಸುವುದೆ? ಪಾಪದ ಮಹಾಸಾಗರದಿಂದ ಪಾರುಮಾಡಿಸಬಲ್ಲ ಹಡಗೂ, ದುಷ್ಕರ್ಮಗಳ ಒಣ ಕಟ್ಟಿಗೆಗಳನ್ನು ಭಸ್ಮೀಕರಿಸಬಲ್ಲ ದಿವ್ಯಾಗ್ನಿಯೂ ಈ ಜ್ಞಾನವೇ ಆಗಿದೆ:

**ನ ಹಿ ಜ್ಞಾನೇನ ಸದೃಶಂ ಪವಿತ್ರಮಿಹ ವಿದ್ಯತೇ ।**

ಜ್ಞಾನಕ್ಕೆ ಮಿಗಿಲಾದ ಪವಿತ್ರವಾದ ಪದಾರ್ಥವೇನಿದೆ? ನಿರ್ಮಲ ಜಲವನ್ನು ಪವಿತ್ರವೆಂದು ಕರೆಯುತ್ತೇವೆ. ಗಂಗಾಜಲವು ಪರಮ ಪವಿತ್ರವೆನಿಸಿದೆ. ಆದರೆ ಇವುಗಳು ನಮಗೆ ಇಷ್ಟರವರೆಗೆ ಅಂಟಿಕೊಂಡಿರುವ ಶರೀರದ ಮತ್ತು ಮನಸ್ಸಿನ ಮಲವನ್ನು ಮಾತ್ರ ಪ್ರಕ್ಷಾಲನ ಮಾಡಬಲ್ಲವು. ಸ್ನಾನ ಮಾಡಿದ ನಂತರವೂ

ಮಣ್ಣು ನಮ್ಮ ಮೈಯಲ್ಲಿ ಅಂಟಿಕೊಂಡು ಪುನಃ ನಮ್ಮ ಶರೀರವು ಮಲಿನವಾಗುವ ಸಂದರ್ಭವಿದೆ. ಗಂಗಾಸ್ನಾನಾದಿ ಪವಿತ್ರಕರ್ಮಗಳನ್ನು ಮಾಡಿದ ಬಳಿಕವೂ ಪುನಃ ಅನೇಕ ದುಷ್ಕೃತ್ಯಗಳನ್ನು ಮಾಡುವುದುಂಟು. ಅದರಿಂದ ಪುನಃ ನಮ್ಮ ಮನಸ್ಸು ಮಲಿನವಾಗಲು ಅವಕಾಶವಾಗುವುದು. ಆದರೆ ಈ ಅಪರೋಕ್ಷದರ್ಶನದ ಶಕ್ತಿಯೇ ವಿಲಕ್ಷಣವಿದೆ. ಇಷ್ಟರವರೆಗೆ ನಮಗೆ ಅಂಟಿಕೊಂಡಿರುವ ಪಾಪದ ಮಲವನ್ನು ಇದು ತೊಳೆಯುವುದರ ಜೊತೆಗೆ ಮುಂದೆ ನಾವು ಮಾಡುವ ಕೃತಿಗಳಿಂದ ನಮಗೆ ಸಂಭವಿಸಬಹುದಾದ ಪಾಪಸಂಬಧವನ್ನೂ ಇದು ನಿರ್ಮೂಲಗೊಳಿಸುವುದು.

ತದಧಿಗಮ ಉತ್ತರಪೂರ್ವಾಘಯೋರಶ್ಲೇಷವಿನಾಶೌ ।

ಎಂದು ಬ್ರಹ್ಮಸೂತ್ರದಲ್ಲಿ ನಿರೂಪಿಸಿದಂತೆ ಜ್ಞಾನದಿಂದ ಹಿಂದಿನ ಪಾಪಗಳ ನಾಶವಾಗುವುದಲ್ಲದೆ ಮುಂದೆ ಯಾವ ಪಾಪಕೃತಿಗಳೂ ನಮ್ಮಿಂದ ಘಟಿಸದಂತೆ ಮಾಡುವ ಒಂದು ದೈವೀ ಚಮತ್ಕಾರವೂ ಈ ಜ್ಞಾನದಲ್ಲಿದೆ. ಜ್ಞಾನವು ಪಾಪದ ಬೇರನ್ನೇ ಸಮೂಲವಾಗಿ ಉಚ್ಚಾಟನೆ ಮಾಡುವುದು. ಮುಂದೆ ಯಾವ ಪಾಪಮಲದ ಲೇಪವೂ ಜ್ಞಾನಿಗಾಗಲಾರದು. ಆದುದರಿಂದ ಜ್ಞಾನವು ಪವಿತ್ರತಮವಾದ ವಸ್ತುವಾಗಿದೆ.

## ಸಂಶಯಾತ್ಮಾ ವಿನಶ್ಯತಿ

ಇಂತಹ ಜ್ಞಾನವನ್ನು ಪಡೆಯಲು ತತ್ತ್ವದರ್ಶಿಗಳಾದ ಗುರುಗಳಿಗೆ ನಾವು ಶರಣೆನ್ನಬೇಕು. ಸೇವೆ, ಪರಿಪ್ರಶ್ನೆಗಳಿಂದ ಗುರುಗಳಿಂದ ಜ್ಞಾನವನ್ನು ಪಡೆದು ನಂತರ ಮನನ, ನಿದಿಧ್ಯಾಸನಗಳಿಂದ ಸಾಕ್ಷಾತ್ಕಾರದ ಮಟ್ಟವನ್ನು ನಾವು ಹೊಂದಬಹುದು. ಇದಕ್ಕಾಗಿ ಶ್ರದ್ಧೆ, ತತ್ತ್ವನಿಷ್ಠೆಗಳು ಅತ್ಯಾವಶ್ಯಕ. ಶ್ರದ್ಧೆ ಇರುವಲ್ಲಿ ಕರ್ತವ್ಯದಲ್ಲಿ ಯಾವ ಲೋಪದೋಷಗಳೂ ತಲೆ ಹಾಕಲಾರವು. ಶ್ರದ್ಧೆ ಎಂದರೆ ಕುರುಡುನಂಬಿಕೆಯಲ್ಲ. ವಿವೇಚನೆಯಿಂದ ನಾವು ತತ್ತ್ವಜ್ಞಾನ ಪಡೆದಮೇಲೆ ನಾವು ಪಡೆದ ತತ್ತ್ವಜ್ಞಾನಕ್ಕೂ ನಮ್ಮ ಕೃತಿಗೂ ಹೊಂದಿಕೆ ಇದ್ದಲ್ಲಿ ನಾವು ಶ್ರದ್ಧಾವಂತರೆನಿಸುವೆವು. ತನ್ನ ತಂದೆ ನಿರುಪಯುಕ್ತ ಬಡಕಲು ಹಸುಗಳನ್ನು ದಾನ ಮಾಡುತ್ತಿರುವುದನ್ನು ನಚಿಕೇತನು ನೋಡಿದಾಗ –

ತಂ ಹ ಶ್ರದ್ಧಾऽऽವಿವೇಶ । -ಕಾಠಕ

ಅವನಲ್ಲಿ ಶ್ರದ್ಧೆಯು ಪ್ರವೇಶಿಸಿತು. ತತ್‌ಕ್ಷಣದಲ್ಲಿ ತಂದೆಯ ಈ ಲೋಭಪೂರ್ಣವಾದ ಕೃತಿಯನ್ನು ಆತನು ಪ್ರತಿಭಟಿಸುತ್ತಾನೆ. ಶ್ರದ್ಧೆಯು, ತತ್ತ್ವನಿಷ್ಠೆಯು ಜಾಗೃತವಾದಲ್ಲಿ ಅನ್ಯಾಯ-ಅಕೃತ್ಯಗಳನ್ನು ಪ್ರತಿಭಟಿಸುವ ಸಾತ್ತ್ವಿಕ ಪ್ರವೃತ್ತಿಯು ಸಹಜವಾಗಿ ಒಡಮೂಡುವುದು. ಹಿರಿಯರೆಂದು ಅವರು ಮಾಡುವ ಅಕೃತ್ಯವನ್ನು ಕಣ್ಣುಮುಚ್ಚಿ ಅನುಸರಿಸುವ ಕುರುಡುಭಾವನೆಗೆ ಶ್ರದ್ಧಾವಂತನಲ್ಲಿ ಅವಕಾಶ ಇರುವುದಿಲ್ಲ. ತಾನು ಪಡೆದ ತತ್ತ್ವಜ್ಞಾನಕ್ಕೆ ಅನುಗುಣವಾಗಿ ತನ್ನ ಜೀವನವನ್ನು ರೂಪಿಸಬೇಕೆನ್ನುವ ಅದಮ್ಯ ಉತ್ಸಾಹವೇ ಈ ಶ್ರದ್ಧೆ ಎನಿಸುವುದು.

ಅಜ್ಞಾನ-ವಿಪರ್ಯಯಗಳಿಗೆ ಒಳಗಾದವನು ಜೀವನವಿಡೀ ಪ್ರತಿಯೊಂದನ್ನೂ ಸಂಶಯದೃಷ್ಟಿಯಿಂದಲೇ ನೋಡುವ ಶ್ರದ್ಧಾಹೀನನಾದ ವ್ಯಕ್ತಿಯು ಈ ಪರಮಜ್ಞಾನವನ್ನು ಪಡೆಯಲಾರನೆಂದು ಹೇಳಿ ತತ್ತ್ವನಿಶ್ಚಯ ಮತ್ತು ನಿಷ್ಠೆಯ ಮಹತ್ತ್ವವನ್ನು ಗೀತೆಯು ವಿವರಿಸಿದೆ. ಭಕ್ತಿ, ಧರ್ಮಾಚರಣೆ ಮುಂತಾದ ನಮ್ಮ ಪ್ರತಿಯೊಂದು ಸಾಧನಾನುಷ್ಠಾನದ ಹಿನ್ನೆಲೆಯಲ್ಲೂ ಶ್ರದ್ಧೆಯ ಅಧಿಷ್ಠಾನವಿರುವುದು ಅವಶ್ಯವಾಗಿದೆ. ಡೋಲಾಯಮಾನವಾದ ಮನಸ್ಸಿನಿಂದ ಮಾಡುವ ಉಪಾಸನೆ - ಆಚರಣೆಗಳಿಂದ ನಿಜವಾದ ಫಲವನ್ನು ಪಡೆಯಲಾರೆವು. ಒಂದು ಒಳ್ಳೆಯ ಕಾರ್ಯಕ್ಕಾಗಿ ನಮ್ಮ ಅಪಾರ ಶಕ್ತಿ ಸಂಪತ್ತುಗಳನ್ನು ವಿನಿಯೋಗಿಸುತ್ತೇವೆ. ಆದರೆ ಆ ಸತ್ಕಾರ್ಯದಲ್ಲೇ ಆಂತರಿಕವಾದ ವಿಶ್ವಾಸ ನಿಷ್ಠೆಗಳಿಲ್ಲದಿದ್ದರೆ ಕೇವಲ ಈ ಬಾಹ್ಯಾಡಂಬರದಿಂದ ಯಾವ ಶ್ರೇಯೋ ಲಾಭವೂ ಆಗಲಾರದು. ವೃಥಾ ಶ್ರಮ, ಧನಹಾನಿಯಿಂದ ಇದು ಮಾನಸಿಕ ವ್ಯಥೆಗೇ ಕಾರಣವಾಗುವುದು.

ನಾಯಂ ಲೋಕೋಽಸ್ತಿ ನ ಪರಃ ನ ಸುಖಂ ಸಂಶಯಾತ್ಮನಃ ।

ವಿಶ್ವಾಸಬಲವಿಲ್ಲದ ಸಂಶಯಶೀಲ ವ್ಯಕ್ತಿಯು ಇಹಪರಗಳೆರಡಕ್ಕೂ ಎರವಾಗುವನು.

ಧರ್ಮರಾಜನಿಗೆ ಶ್ರೀಕೃಷ್ಣನು ಸತ್ಯ-ಅಸತ್ಯಗಳ ವಿವೇಚನೆಯನ್ನು ಮಾಡಿ ಲೋಕಹಿತಕಾರಿಯಾದ ಸಜ್ಜನಿಕೆಗೆ ಪೋಷಕವಾದ ಕೃತಿಯೇ ನಿಜವಾದ

ಸತ್ಯವೆಂದು ಅನೇಕ ಸಂದರ್ಭಗಳಲ್ಲಿ ಬೋಧಿಸಿದ್ದನು. ನಿರಪರಾಧಿ ಜನರನ್ನು ದರೋಡೆಗಾರರಿಂದ ರಕ್ಷಿಸುವುದಕ್ಕಾಗಿ ಅವರಲ್ಲಿ ಸುಳ್ಳು ಹೇಳಿದರೂ ಅದು ಸತ್ಯವೆನಿಸುವುದು. ಅಡಗಿದ ಗ್ರಾಮೀಣ ಜನರ ಇರವನ್ನು ದರೋಡೆಗಾರರಿಗೆ ಅರುಹಿ, ತನ್ನ ಕುರುಡು ಸತ್ಯನಿಷ್ಠೆಯನ್ನು ಪ್ರದರ್ಶಿಸಿದ ಕೌಶಿಕ ಬ್ರಾಹ್ಮಣನು ನರಕವನ್ನು ಅನುಭವಿಸಬೇಕಾಯಿತು. ಲೋಕದ ಹಾಗೂ ಧರ್ಮದ ರಕ್ಷಣೆಗಾಗಿ ಅವಶ್ಯ ಪ್ರಸಂಗದಲ್ಲಿ ಸುಳ್ಳು ನುಡಿದರೂ ಅದು ಸತ್ಯದ ಶ್ರೇಣಿಯಲ್ಲೇ ಸೇರುವುದೆಂಬುದು ಶಾಸ್ತ್ರಸಮ್ಮತ ವಿಚಾರವಾಗಿದೆ. ಈ ದೃಷ್ಟಿಯಿಂದಲೇ ದ್ರೋಣನನ್ನು ಕೊಲ್ಲಬೇಕಾದ ಸಂದರ್ಭದಲ್ಲಿ ಸುಳ್ಳು ಹೇಳಲು ಶ್ರೀಕೃಷ್ಣನು ಧರ್ಮರಾಜನಿಗೆ ಬೋಧಿಸುತ್ತಾನೆ. ಶ್ರೀಕೃಷ್ಣನು ಹೇಳಿದ ಈ ಧರ್ಮಾಧರ್ಮ ವಿವೇಚನೆಯಲ್ಲಿ ಧರ್ಮರಾಜನಿಗೆ ಪೂರ್ಣ ವಿಶ್ವಾಸ ಉಂಟಾಗಲಿಲ್ಲ. ಶ್ರೀಕೃಷ್ಣನ ಮಾತನ್ನು ಪೂರ್ತಿಯಾಗಿ ತೆಗೆದುಹಾಕುವ ಧೈರ್ಯವೂ ಅವನಲ್ಲಿ ಇರಲಿಲ್ಲ. ಈ ಸಂದಿಗ್ಧ ಮನಃಸ್ಥಿತಿಯಲ್ಲೇ ''ಅಶ್ವತ್ಥಾಮಾ ಹತಃ'' ಎಂದು ಅತಿ ಕಷ್ಟದಿಂದ ಧರ್ಮರಾಜನು ನುಡಿದಿದ್ದನು. ಈ ಸಂದೇಹದ ಫಲವಾಗಿಯೇ ಮುಂದೆ ಅವಸಾನಕಾಲದಲ್ಲಿ ಧರ್ಮರಾಜನಿಗೆ ನರಕದರ್ಶನವಾಗಿದೆ. ಶ್ರೀಕೃಷ್ಣನ ಉಪದೇಶದಂತೆ ನಡೆಯಲೂ ಅವನಿಗೆ ಪೂರ್ಣ ವಿಶ್ವಾಸವಿರಲಿಲ್ಲ.

**ನ ಚಾತಿವಿಸ್ರಂಭ ಆಸೀತ್ತವ ಕೃಷ್ಣವಾಕ್ಯೇ ।**

-ಮ. ಭಾ. ತಾತ್ಪರ್ಯನಿರ್ಣಯ

ಹೀಗೆ ಡೋಲಾಯಮಾನವಾದ ಮನೋಭೂಮಿಕೆಯಿಂದ ಕಾರ್ಯವನ್ನು ಮಾಡಿರುವುದರಿಂದ ಧರ್ಮರಾಜನು ಅನಿಷ್ಟಫಲವನ್ನು ಪಡೆಯುವಂತಾಗಿದೆ.

ಈ ಬಗ್ಗೆ ಕುಮಾರಿಲಭಟ್ಟರ ಜೀವನದ ಒಂದು ಸನ್ನಿವೇಶವನ್ನು ಉದಾಹರಿಸಬಹುದು. ಒಮ್ಮೆ ಬೌದ್ಧ ಗುರುಗಳೊಬ್ಬರ ಆಗ್ರಹಕ್ಕೆ ಒಳಗಾದ ಕುಮಾರಿಲರನ್ನು ಬೌದ್ಧ ಶಿಷ್ಯರು ಮಹಡಿಯಿಂದ ಕೆಳಕ್ಕೆ ಕೆಡವಿದರು. ವೇದವು ಪ್ರಮಾಣವಾದರೆ ತಮಗೆ ಏನೂ ಮರಣಾದ್ಯುಪದ್ರವವು ಆಗಬಾರದೆಂದು ಘೋಷಿಸಿ ಕುಮಾರಿಲರು ಕೆಳಗೆ ಧುಮುಕಿದರು. ಮರಣವೇನೂ ಸಂಭವಿಸ ಲಿಲ್ಲ. ಆದರೆ ಅವರ ಒಂದು ಕಣ್ಣಿಗೆ ಧಕ್ಕೆಯಾಗಿ ಅದು ಕುರುಡಾಯಿತು.

ಕುಮಾರಿಲರಿಗೆ ವೇದದ ಬಗ್ಗೆ ನಂಬಿಕೆಯು ಪ್ರಗಾಢವಾಗಿಯೇ ಇತ್ತು. ಆದರೆ ಆ ನಂಬಿಕೆಯಲ್ಲಿ ಕೊಂಚ ಶಿಥಿಲತೆಯಿತ್ತು. ''ವೇದವು ಪ್ರಮಾಣವಾದರೆ'' ಎನ್ನುವ ಅವರ ಮಾತಿನಲ್ಲಿ ಈ ಶೈಥಿಲ್ಯದ ಅಪಸ್ವರವು ಎದ್ದು ಕಾಣುತ್ತದೆ. ವೇದವು ಪ್ರಮಾಣವೇ ಆಗಿದೆ; ತನಗೆ ಏನೂ ಅನರ್ಥ ಸಂಭವಿಸುವುದಿಲ್ಲವೆನ್ನುವ ನಿರ್ಧಾರದ ಧೀರ ಘೋಷವನ್ನು ಅವರು ಉಸುರಲಿಲ್ಲ. ''ವೇದವು ಪ್ರಮಾಣವಾದರೆ'' ಎನ್ನುವ ಸಂಶಯವಾಣಿಯ ಕಹಿಫಲವನ್ನು ಆಗಲೇ ಅವರು ಪಡೆಯುವಂತಾಯಿತು. ನಮ್ಮ ಪ್ರತಿಯೊಂದು ಸಂಸ್ಕೃತಿಗೂ ಅಚಲವಿಶ್ವಾಸದ ಹಿನ್ನೆಲೆಯಿರಬೇಕು. ನಮ್ಮ ಜೀವನದಲ್ಲಿ ಎಲ್ಲಿಯೂ ಸಂಶಯ-ವಿಪರ್ಯಾಸಗಳ ಗಾಳಿ ಸುಳಿಯದಂತೆ ನಾವು ಎಚ್ಚರಿಕೆ ವಹಿಸಬೇಕು. ವ್ಯಾಮೋಹದಿಂದಾಗಲಿ ಅರೆಮನಸ್ಸಿನಿಂದಾಗಲಿ ಮಾಡಿದ ಕೃತಿಗಳು ಸತ್ಫಲವನ್ನು ನೀಡಲಾರವು. ಭಗವಂತನೇ ರಕ್ಷಕನೆಂಬ ದೃಢವಿಶ್ವಾಸದಿಂದ ಭಕ್ತನು ಪ್ರಬಲ ವಿಪತ್ತಿಗಳನ್ನೂ ಎದುರಿಸಿ ವಿಜಯಶೀಲನಾಗುವನು.

**ರಕ್ಷತೀತ್ಯೇವ ವಿಶ್ವಾಸಃ ತದೀಯೋಽಹಮಿತಿ ಸ್ಮೃತಿಃ ।**

-ಗೀತಾತಾತ್ಪರ್ಯ

ಶಾಸ್ತ್ರೀಯ ವಿವೇಚನೆಯಿಂದ ಸುದೃಢವಾದ ತತ್ತ್ವಜ್ಞಾನವನ್ನು ಪಡೆದು ಆದರ ತಳಹದಿಯಲ್ಲಿ ತನ್ನ ಕರ್ತವ್ಯವನ್ನು ಕಂಡು ನಿರ್ಧಾರದಿಂದ ಮುನ್ನಡೆಯಬೇಕು. ಧರ್ಮಸಮ್ಮೂಢಚೇತನನೂ ಸಂಶಯಗ್ರಸ್ತನೂ ಆದ ಅರ್ಜುನನಿಗೆ ಜ್ಞಾನದ ಹಿನ್ನೆಲೆಯನ್ನು ಒದಗಿಸಿ ದೃಢನಿರ್ಧಾರವನ್ನು ಮೂಡಿಸುವುದಕ್ಕಾಗಿಯೇ ಶ್ರೀಕೃಷ್ಣನು ಇಲ್ಲಿ ಸಂಶಯ ವಿಪರ್ಯಾಸಗಳಿಂದ ಆಗುವ ಅನರ್ಥವನ್ನು ವಿವರಿಸುತ್ತಾನೆ. ಈ ಸಂಶಯ-ಭ್ರಾಂತಿಗಳನ್ನು ಕಿತ್ತೊಗೆದು ತತ್ತ್ವಜ್ಞಾನದ ನಿರಭ್ರ ಶುಭ್ರ ಪ್ರಭೆಯಿಂದ ಬೆಳಗುವ ಕರ್ತವ್ಯದ ರಾಜಪಥದಲ್ಲಿ ನಿಃಶಂಕವಾಗಿ ನಿರಾತಂಕವಾಗಿ ಸಾಗಬೇಕೆಂದು ಪರಮಾತ್ಮನು ಆದೇಶ ನೀಡುತ್ತಾನೆ:

**.... ಹೃತ್‌ಸ್ಥಂ ಜ್ಞಾನಾಸಿನಾಽಽತ್ಮನಃ ।**
**ಛಿತ್ತ್ವೈನಂ ಸಂಶಯಂ ಯೋಗ-**
**ಮಾತಿಷ್ಠೋತ್ತಿಷ್ಠ ಭಾರತ ॥**

ಇದಕ್ಕಾಗಿಯೇ ಗೀತೆಯ 4ನೇ ಅಧ್ಯಾಯದ ಕೊನೆಯಲ್ಲಿ ತತ್ತ್ವಜ್ಞಾನದ ಮಹತ್ತ್ವವನ್ನು ವಿಶೇಷವಾಗಿ ವರ್ಣಿಸಲಾಗಿದೆ.

## ಸಂನ್ಯಾಸ ಮತ್ತು ಕರ್ಮಯೋಗ

ಶ್ರೀಕೃಷ್ಣನು ತನ್ನ ಉಪದೇಶದಲ್ಲಿ ಕಾಮ-ಕ್ರೋಧ ಮೊದಲಾದ ಹೃದಯದೋಷವನ್ನು ಪರಿತ್ಯಜಿಸುವುದು ಮತ್ತು ಈಶ್ವರಾರ್ಪಣ ಬುದ್ಧಿಯಿಂದ ಕರ್ತವ್ಯವನ್ನಾಚರಿಸುವುದು - ಈ ಎರಡು ಸಂಗತಿಗಳನ್ನು ಮುಖ್ಯವಾಗಿ ಬೋಧಿಸಿರುವನು. ಈವರೆಗಿನ ಬೋಧನೆಯ ಸಾರಾಂಶವು ಇದೇ ಆಗಿದೆ. ಆದರೆ ಇವೆರಡರಲ್ಲಿ ಯಾವುದು ಪ್ರಧಾನವೆಂಬುದನ್ನು ತಿಳಿಯುವ ಕುತೂಹಲವನ್ನು ಅರ್ಜುನನು ವ್ಯಕ್ತಪಡಿಸುತ್ತಾನೆ. ಕಾಮಾದಿ ಮನೋದೋಷಗಳ ನಿವಾರಣೆಯೇ ಮುಖ್ಯವಾಗಿರುವುದಾದರೆ ಅದನ್ನೇ ಸಾಧಿಸಿದರೆ ಸಾಲದೆ? ಕಾಮದ್ವೇಷಗಳ ಜಾಲವಾದ ಈ ಯುದ್ಧದ ತೊಡಕಿನಿಂದ ತಾನು ಪಾರಾಗಬಾರದೇಕೆ? ಎಂಬುದು ಅರ್ಜುನನ ವಿಚಾರವಾಗಿದೆ. ಸಂನ್ಯಾಸ ಮತ್ತು ಕರ್ಮ ಇವೆರಡನ್ನೂ ಒಬ್ಬನೇ ನಿರ್ವಹಿಸಲಾರ. ಒಂದು ಸಂನ್ಯಾಸಿಗಳಿಗೆ ಸಂಬಂಧಿಸಿದರೆ ಇನ್ನೊಂದು ಗೃಹಸ್ಥರಿಗಾಗಿಯೇ ಮೀಸಲು. ಪರಸ್ಪರ ವಿರೋಧಿಗಳಾದ ಈ ಸಂನ್ಯಾಸ ಮತ್ತು ಕರ್ಮಯೋಗಗಳಲ್ಲಿ ತಾನು ಯಾವುದರ ಆಯ್ಕೆ ಮಾಡಲಿ? ಎನ್ನುವುದೂ ಅರ್ಜುನನ ಜಿಜ್ಞಾಸೆಯಾಗಿದೆ.

ಇದಕ್ಕೆ ಭಗವಂತನ ಉತ್ತರ ಹೀಗಿದೆ: ಈ ಸಂನ್ಯಾಸ ಮತ್ತು ಕರ್ಮಯೋಗಗಳು ಪರಸ್ಪರ ವಿರೋಧಿಗಳಾಗಿರದೆ ಪರಸ್ಪರ ಪೂರಕಗಳಾಗಿವೆ. ಸಂನ್ಯಾಸ ಮತ್ತು ಕರ್ಮಯೋಗ - ಈ ಶಬ್ದಗಳಿಂದ ಯತಿಧರ್ಮ ಹಾಗೂ ಗೃಹಸ್ಥಧರ್ಮಗಳನ್ನು ಇಲ್ಲಿ ನಿರೂಪಿಸಲಾಗಿಲ್ಲ. ಸಂನ್ಯಾಸ ಎಂದರೆ ಮನಸ್ಸಿನಲ್ಲಿ ಹುದುಗಿರುವ ಕಾಮ, ದ್ವೇಷ, ಮೋಹ ಮೊದಲಾದ ವಿಕಾರಗಳ ವಿಮೋಚನೆಯೇ ಆಗಿದೆ. ಇದು ಕರ್ಮಯೋಗದ ಪೂರ್ವಾಂಗವಾಗಿದೆ. ಕಾಮದ್ವೇಷಾದಿ ಹೃದಯ ದೋಷಗಳನ್ನು ಕಿತ್ತೊಗೆದು ಅಂತಃಕರಣವನ್ನು ಹದಗೊಳಿಸಿದ ನಂತರ ಕರ್ಮದ ಪವಿತ್ರಾಂಕುರಗಳನ್ನು ಅಲ್ಲಿ ನೆಡದಿದ್ದರೆ ಆವರೆಗೆ ಮಾಡಿದ ಪ್ರಸಾಧನ ಪರಿಷ್ಕರಣಗಳೆಲ್ಲ ವ್ಯರ್ಥವಾಗುವುದಿಲ್ಲವೆ? ಹೊಲದ

ಕಳೆಗಳನ್ನು ಕಿತ್ತೊಗೆದು ಅದನ್ನು ಕೃಷಿಯೋಗ್ಯವಾಗುವಂತೆ ಮಾಡಲು ಬೇಕಾದ ಸಾಧನ ಸಂವಿಧಾನಗಳನ್ನು ನಡೆಸಿ ಕೃಷಿಯನ್ನು ಮಾತ್ರ ಮಾಡದಿದ್ದಲ್ಲಿ ಅಷ್ಟರವರೆಗಿನ ಶ್ರಮ ಸಾಧನೆಯೆಲ್ಲ ಸಂಪೂರ್ಣ ವಿಫಲವೆನಿಸುವುದು. ಗೀತೆಯಲ್ಲಿ ಇದುವರೆಗೆ ನಿರೂಪಿಸಲಾದ ರಾಗದ್ವೇಷಾದಿ ಪರಿತ್ಯಾಗರೂಪವಾದ ಈ ಸಂನ್ಯಾಸವು ಮನಸ್ಸನ್ನು ಹದಗೊಳಿಸುವ ಪ್ರಕ್ರಿಯೆಯೇ ಆಗಿದೆ.

**ಜ್ಞೇಯಃ ಸ ನಿತ್ಯಸಂನ್ಯಾಸೀ ಯೋ ನ ದ್ವೇಷ್ಟಿ ನ ಕಾಂಕ್ಷತಿ ।**

ಸುಖದುಃಖಗಳ ದ್ವಂದ್ವವನ್ನು ದಾಟಿನಿಂತು ದ್ವೇಷ-ಕಾಂಕ್ಷೆಗಳನ್ನು ಕಿತ್ತು ಒಗೆದ ವ್ಯಕ್ತಿಯೇ ಸಂನ್ಯಾಸಿ ಎನಿಸುವನು. ಇಂತಹ ಸಂನ್ಯಾಸಿಯನ್ನು ದಂಡ ಕಾಷಾಯಗಳಿಂದಲೇ ಗುರುತಿಸಬೇಕಾಗಿಲ್ಲ. ಸಂಸಾರ ಸಮಾಜಗಳ ಮಧ್ಯ ದಲ್ಲಿದ್ದುಕೊಂಡೇ ಈ ಸಂನ್ಯಾಸಿಮನೋವೃತ್ತಿಯನ್ನು ಪಡೆಯಲು ಎಲ್ಲರೂ ಪ್ರಯತ್ನಿಸಬಹುದು. ಆದರೆ ಈ ಮಾನಸಿಕ ದೋಷಗಳ ಪರಿತ್ಯಾಗವೇ ಅಂತಿಮ ಸಾಧನೆಯೆಂದು ನಾವು ಗ್ರಹಿಸಬಾರದು. ಭಗವಂತನ ಸಾಕ್ಷಾತ್ಕಾರಕ್ಕಾಗಿ ನಾವು ಮಾಡಲಿರುವ ಮಹಾಸಾಧನೆಗೆ ಇದು ಪೂರ್ವಭೂಮಿಕೆಯಾಗಿರುವುದನ್ನು ನಾವು ಗಮನದಲ್ಲಿಟ್ಟುಕೊಳ್ಳಬೇಕು. ಗೀತೆಯು ಹೇಳಿದ ಈ ನಿತ್ಯಸಂನ್ಯಾಸವು ಮನಸ್ಸಿನ ಪರಿಷ್ಕರಣ ಮಾತ್ರವಾಗಿದ್ದು, ಭಗವದರ್ಪಣಭಾವನೆಯಿಂದ ನಾವು ಮಾಡುವ ಕರ್ತವ್ಯಾನುಷ್ಠಾನದಿಂದಲೇ ಅದು ಸಮಗ್ರತೆಯನ್ನು ಪಡೆಯುವುದು. ಹೀಗೆ ಈ ಸಂನ್ಯಾಸ ಹಾಗೂ ಕರ್ಮಯೋಗಗಳು ಪರಸ್ಪರ ಪೂರಕಗಳಾಗಿದ್ದು ರಾಗಾದಿ ಪರಿವರ್ಜನದಿಂದಲೇ ನಾವು ತೃಪ್ತರಾಗದೆ ನಿಷ್ಕಾಮಕರ್ಮಾಚರಣೆಯಿಂದ ನಮ್ಮ ಸಾಧನೆಗೆ ಪರಿಪೂರ್ಣತೆಯನ್ನು ತಂದುಕೊಳ್ಳಬೇಕು. ಈ ಅಭಿಪ್ರಾಯದಿಂದಲೇ,

**ತಯೋಸ್ತು ಕರ್ಮಸಂನ್ಯಾಸಾತ್ ಕರ್ಮಯೋಗೋ ವಿಶಿಷ್ಯತೇ ।**

ಎಂದು ಸಂನ್ಯಾಸಕ್ಕಿಂತಲೂ ಕರ್ಮಯೋಗಕ್ಕೆ ಹೆಚ್ಚಿನ ಮಹತ್ತ್ವವನ್ನು ಗೀತೆಯಲ್ಲಿ ಹೇಳಲಾಗಿದೆ. ಇಲ್ಲಿ ಬಂದಿರುವ ಕರ್ಮಸಂನ್ಯಾಸ ಹಾಗೂ ಕರ್ಮಯೋಗ ಶಬ್ದಗಳ ಭಾವಾರ್ಥಗಳನ್ನು ಗ್ರಹಿಸದೆ ಅನೇಕರು ಗೊಂದಲಕ್ಕೊಳಗಾಗಿದ್ದಾರೆ. ಅತಿ ಕ್ಲಿಷ್ಟವಾದ ರೀತಿಯಲ್ಲಿ ಈ ವಾಕ್ಯದ ಅರ್ಥವನ್ನು ವಿವರಿಸಲು ಪ್ರಯತ್ನಿಸಿದ್ದಾರೆ. ನಿಷ್ಕಾಮಕರ್ಮದ ಸಹಕಾರದಿಂದ ಪಡೆಯಲಾಗುವ, ಕರ್ಮಯೋಗಕ್ಕಿಂತಲೂ

ಶ್ರೇಷ್ಠ ಅವಸ್ಥೆ ಎನಿಸಿರುವ ಜ್ಞಾನಯೋಗವನ್ನು ಸಂನ್ಯಾಸವೆಂಬ ಶಬ್ದದಿಂದ ಪರಿಗ್ರಹಿಸಿ, ಈ ಸಂನ್ಯಾಸಕ್ಕಿಂತಲೂ ಕರ್ಮಯೋಗವು ಹೇಗೆ ಉತ್ತಮ ಎಂಬುದು ಎಲ್ಲರಿಗೂ ಸಮಸ್ಯೆಯಾಗಿತ್ತು. ಕರ್ಮಸಂನ್ಯಾಸವೆಂದರೆ ಕರ್ಮಯೋಗದ ನಂತರದ ಜ್ಞಾನಾವಸ್ಥೆಯೆಂದಾಗಲಿ ಸನಕಾದಿಗಳು ಅವಲಂಬಿಸಿದ ಜ್ಞಾನ ಪ್ರಧಾನವಾದ ಜ್ಞಾನಯೋಗ ಮಾರ್ಗವೆಂದಾಗಲಿ ಇಲ್ಲಿ ಅರ್ಥವಲ್ಲ. ಇವೆರಡರಲ್ಲಿಯೂ ವಾಸ್ತವವಾಗಿ ಕರ್ಮಸಂನ್ಯಾಸಕ್ಕೆ ಪ್ರಸಕ್ತಿಯೇ ಇರುವುದಿಲ್ಲ. ಮೋಕ್ಷಪರ್ಯಂತವಾಗಿ ಕರ್ಮವು ಅವಶ್ಯ ಆಚರಣೀಯವಿರುವುದರಿಂದ ಪ್ರತಿಯೊಂದು ಅವಸ್ಥೆಯಲ್ಲಿಯೂ ಕರ್ತವ್ಯದ ಸಂಬಂಧ ಇದ್ದೇ ಇರುವುದು. ಹೀಗಿರುವಾಗ ಕರ್ಮ ಸಂನ್ಯಾಸಕ್ಕೆ ಯಾವ ಸಂದರ್ಭದಲ್ಲಿಯೂ ಅವಕಾಶವೇ ಇರುವುದಿಲ್ಲ. ಆದುದರಿಂದ ಇಲ್ಲಿ ನಿರೂಪಿತವಾದ ಕರ್ಮಸಂನ್ಯಾಸವು ಕರ್ಮಯೋಗದ ಪೂರ್ವಾವಸ್ಥೆಯಾದ ನಿಷ್ಕಾಮಕರ್ಮದ ಸಾಧನೆಗೆ ಅತ್ಯಂತ ಸಹಾಯಕವೂ ಆದ ರಾಗದ್ವೇಷಾದಿಗಳ ತ್ಯಾಗವೇ ಆಗಿದೆ. ಕರ್ಮಯೋಗದಲ್ಲಿ ಪೂರ್ವರಂಗವೆನಿಸಿದ ಈ ಸಂನ್ಯಾಸಕ್ಕಿಂತ ಕರ್ಮಯೋಗವು ಶ್ರೇಷ್ಠವಾಗಿದ್ದು ರಾಗದ್ವೇಷಾದಿ ಪರಿತ್ಯಾಗದಲ್ಲಿಯೇ ನಮ್ಮ ಪ್ರಯತ್ನದ ಪರ್ಯವಸಾನವಾಗದೆ ಕರ್ಮಯೋಗಪರ್ಯಂತವಾಗಿ ಮುನ್ನಡೆದು ಆತ್ಯಂತಿಕ ಸಿದ್ಧಿಯನ್ನು ಪಡೆಯಬೇಕೆನ್ನುವ ಅರ್ಥದಲ್ಲಿ ಯಾವ ವಿಪರ್ಯಾಸ ಗೊಂದಲಗಳಿಗೂ ಎಡೆಯಿಲ್ಲ. ಶ್ರೀಮಧ್ವಾಚಾರ್ಯರು ಯಾವ ಕ್ಲಿಷ್ಟತೆಗೂ ಅವಕಾಶ ನೀಡದೆ ಈ ಸರಳಾರ್ಥವನ್ನು ಬೋಧಿಸಿ, ಗೀತೆಯ ನಿಜವಾದ ತಾತ್ಪರ್ಯವನ್ನು ಅರುಹಿದ್ದಾರೆ.

ಶ್ರೀ ಶಂಕರಾಚಾರ್ಯರ ವಿವೇಚನೆ ಹೀಗಿದೆ: ''ಸಂನ್ಯಾಸವೆಂದರೆ ಕರ್ಮಗಳ ಸಂಪೂರ್ಣ ಪರಿತ್ಯಾಗವೇ ಆಗಿದೆ. ಇಂತಹ ಸಂನ್ಯಾಸವೂ ನಿಷ್ಕಾಮ ಕರ್ಮಾನುಷ್ಠಾನರೂಪಿಯಾದ ಕರ್ಮಯೋಗವೂ ಪರಸ್ಪರ ವಿರೋಧಿಯಾಗಿವೆ. ಇವೆರಡು ಒಂದೇ ಕಡೆ ಇರಲು ಸಾಧ್ಯವೇ ಇಲ್ಲ. ಬ್ರಹ್ಮಜ್ಞಾನವು ಸಂಭವಿಸಿದ ಕೂಡಲೇ ಮಾಯಾಮಯವಾದ ಪ್ರಪಂಚವೇ ಕರಗಿ ಹೋಗುವುದರಿಂದ ಜ್ಞಾನಿಗೆ ವಿಶ್ವದ ಕಲ್ಪನೆಯೇ ಇರಲಾರದು. ಇಂತಹ ಅವಸ್ಥೆಯಲ್ಲಿ ಕರ್ಮದ ಆಚರಣೆಯೆಂತು? ಹೀಗೆ ಜ್ಞಾನಿಗೆ ಕರ್ಮಸಂನ್ಯಾಸದಲ್ಲಿ ಮಾತ್ರ ಅವಕಾಶವಿದ್ದು ಕರ್ಮಯೋಗದ ಪ್ರಸಕ್ತಿಯೇ ಇಲ್ಲದಿರುವಾಗ ಸಂನ್ಯಾಸಕ್ಕಿಂತಲೂ

ಕರ್ಮಯೋಗವೇ ಶ್ರೇಷ್ಠವೆನ್ನುವ ಮಾತಿಗೆ ಅರ್ಥವೇ ಉಳಿಯುವುದಿಲ್ಲ. ಎರಡು ಮಾರ್ಗಗಳನ್ನೂ ಪರಿಗ್ರಹಿಸಲು ಸಂದರ್ಭವಿದ್ದರೆ, ಒಂದನ್ನು ಶ್ರೇಷ್ಠವೆಂದೂ ಇನ್ನೊಂದನ್ನು ಅಮುಖ್ಯವೆಂದೂ ಹೇಳಬಹುದು. ಜ್ಞಾನಿಯಲ್ಲಿ ಕರ್ಮಯೋಗಕ್ಕೆ ಅವಕಾಶವೇ ಇಲ್ಲದಿರುವಾಗ ಸಂನ್ಯಾಸಕ್ಕಿಂತಲೂ ಕರ್ಮಯೋಗವು ಶ್ರೇಷ್ಠವೆಂದು ಹೇಳುವುದು ಅನುಚಿತವಾಗುವುದು. ಆದುದರಿಂದ ಗೀತೆಯ ಈ ಸಂದರ್ಭವು ಕರ್ಮಸಂನ್ಯಾಸದ ಅವಸ್ಥೆಯನ್ನು ತಲುಪದ ಅಜ್ಞಾನಿಯಾದ ವ್ಯಕ್ತಿಗೆ ಸಂಬಂಧಿಸಿರುವುದು. ಅಜ್ಞಾನಿಯಾದ ಪುರುಷನಿಗೆ ಕರ್ಮಸಂನ್ಯಾಸಕ್ಕಿಂತಲೂ ಕರ್ಮಯೋಗವೇ ಶ್ರೇಷ್ಠವೆಂದು ಗೀತೆಯ ಆಶಯವಾಗಿದೆ.''

ಗೀತೆಯಲ್ಲಿ ಸಾಮಾನ್ಯವಾಗಿ ಬಂದಿರುವ ಮಾತನ್ನು ತಮ್ಮ ವಿಚಾರ ಸಂಪ್ರದಾಯಗಳಿಗೆ ಅನುಗುಣವಾಗಿ ಎಳೆಯುವ ಪ್ರಯತ್ನವನ್ನು ಈ ವಿವೇಚನೆಯಲ್ಲಿ ಶ್ರೀಶಂಕರಾಚಾರ್ಯರು ಮಾಡಿದಂತಿದೆ. ಎಲ್ಲರಿಗೂ ಅನ್ವಯವಾಗುವ ವಿಚಾರವೆಂದು ಗೀತೆಯಲ್ಲಿ ಕಂಡುಬಂದಿರುವ ವಚನವನ್ನು ಅಜ್ಞಾನಿಗಳಿಗೆ ಮಾತ್ರ ಸಂಬಂಧಿಸಿದ್ದೆಂದು ಪರಿಮಿತಗೊಳಿಸುವುದು ಅಷ್ಟು ಸಮರ್ಪಕವೆನಿಸಲಾರದು. ಜ್ಞಾನಿಗಳಿಗೆ ಕರ್ಮಯೋಗದ ಪ್ರಸಂಗವಿಲ್ಲದಿರುವಂತೆ, ಅಜ್ಞಾನಿಗಳಿಗೆ ಕರ್ಮಸಂನ್ಯಾಸದ ಸಂದರ್ಭವೂ ಇರುವುದಿಲ್ಲ. ಶಂಕರಾಚಾರ್ಯರ ವಾದಸರಣಿಯಂತೆ ಜ್ಞಾನವನ್ನು ಪಡೆದನಂತರವೇ ಕರ್ಮಸಂನ್ಯಾಸವಾಗುವುದರಿಂದ ಜ್ಞಾನಿಗಳಲ್ಲಿ ಕರ್ಮಸಂನ್ಯಾಸ ಒಂದೇ ಉಳಿಯುವಂತೆ ಅಜ್ಞಾನಿಗಳಲ್ಲಿ ಕರ್ಮಯೋಗವು ಮಾತ್ರವಿರುತ್ತದೆ. ಇಂತಹ ಸಂದರ್ಭದಲ್ಲಿ ಕರ್ಮಸಂನ್ಯಾಸ ಹಾಗೂ ಕರ್ಮಯೋಗಗಳ ತುಲನೆಯನ್ನು ಮಾಡುತ್ತ ಒಂದರ ಶ್ರೇಷ್ಠತೆಯನ್ನು ವಿವೇಚಿಸುವ ಪ್ರಸಂಗವು ಎಂದಿಗೂ ಬರುವುದಿಲ್ಲ. ಹೀಗಾಗಿ ಗೀತೆಯ ಈ ವಾಕ್ಯವು ಅನಾವಶ್ಯಕವೆನಿಸುವ ಸನ್ನಿವೇಶ ಒದಗುವುದು. ಆದುದರಿಂದ ಶ್ರೀಮಧ್ವಾಚಾರ್ಯರು ಬೋಧಿಸಿದ ಸರಳಾರ್ಥವೇ ಸಮರ್ಪಕವೆನಿಸುತ್ತದೆ. ಸಂನ್ಯಾಸ ಮತ್ತು ಕರ್ಮಯೋಗಗಳಿಗೆ ವಿರೋಧವಿಲ್ಲ. ಇವು ಎರಡನ್ನೂ ಒಬ್ಬನಲ್ಲೇ ಸಮನ್ವಯಗೊಳಿಸಬೇಕು ಎಂಬುದಾಗಿ ಶ್ರೀಮಧ್ವಾಚಾರ್ಯರು ಬೋಧಿಸಿದ ವಿಚಾರವು ಗೀತೆಯಲ್ಲಿ ಅಲ್ಲಲ್ಲಿ ನಿರೂಪಿತವಾಗಿದೆ. ಸಂನ್ಯಾಸವೆಂದರೆ ಕರ್ಮತ್ಯಾಗವಲ್ಲ.

ಕಾಮನಾತ್ಯಾಗವೇ ಸಂನ್ಯಾಸವೆಂದು

**ಜ್ಞೇಯಃ ಸ ನಿತ್ಯಸಂನ್ಯಾಸೀ ಯೋ ನ ದ್ವೇಷ್ಟಿ ನ ಕಾಂಕ್ಷತಿ ।**
**ಕಾಮ್ಯಾನಾಂ ಕರ್ಮಣಾಂ ನ್ಯಾಸಂ ಸಂನ್ಯಾಸ ಕವಯೋ ವಿದುಃ ।**

ಮೊದಲಾದ ಕಡೆಗಳಲ್ಲಿ ಹೇಳಲಾಗಿದೆ.

**ಸ ಸಂನ್ಯಾಸೀ ಚ ಯೋಗೀ ಚ ।**

ಎಂದು ಆರನೆಯ ಅಧ್ಯಾಯದಲ್ಲಿ ಸಂನ್ಯಾಸ-ಕರ್ಮಯೋಗಗಳ ಸಮಾವೇಶವನ್ನು ಸುಸ್ಪಷ್ಟವಾಗಿ ತಿಳಿಸಲಾಗಿದೆ. ಇವೆಲ್ಲ ಮಾತುಗಳ ಬೆಳಕಿನಲ್ಲಿ ಈ ಭಾಗವನ್ನು ಪರಿಶೀಲಿಸಿದಲ್ಲಿ ರಾಗದ್ವೇಷಾದಿ ಮನೋವಿಕಾರಗಳ ಪರಿತ್ಯಾಗ ಹಾಗೂ ಭಕ್ತಿಯಿಂದ, ಸಮರ್ಪಣಬುದ್ಧಿಯಿಂದ ಕರ್ಮಾನುಷ್ಠಾನ ಇವೆರಡು ಜ್ಞಾನದ ಪ್ರಧಾನಸಾಧನಗಳ ವಿವೇಚನೆ ಮಾಡಿ, ಇವೆರಡರ ಆವಶ್ಯಕತೆಯನ್ನೂ ಪರಸ್ಪರ ಸಂಬಂಧವನ್ನೂ ಇಲ್ಲಿ ಪ್ರತಿಪಾದಿಸಿದ್ದಾರೆಂಬುದು ಸ್ಪಷ್ಟವಾಗುವುದು. ನಿಜವಾಗಿಯೂ ಇವೆರಡು ಸೇರಿಯೇ ಕರ್ಮಯೋಗದ ನಿಷ್ಪತ್ತಿಯಾಗುವುದು. ರಾಗದ್ವೇಷಾದಿ ಮನೋವಿಕಾರಗಳ ತ್ಯಾಗವು ಕರ್ಮಯೋಗದ ಮೊದಲನೇ ಭಾಗವಾಗಿದ್ದರೆ ಕರ್ಮಗಳನ್ನು ಆಚರಿಸಿ ಭಗವಂತನಿಗೆ ಅರ್ಪಿಸುವ ವ್ಯಾಪಾರವೇ ಅದರ ಉತ್ತರಾರ್ಧವೆನಿಸುವುದು. ಇವೆರಡರ ಸಮನ್ವಯವೇ ಸಮಗ್ರ ಕರ್ಮಯೋಗವೆನಿಸುವುದರಿಂದ ಇವುಗಳಲ್ಲಿ ಯಾವುದು ಶ್ರೇಷ್ಠವೆಂಬ ಪ್ರಶ್ನೆಯೇ ಉದ್ಭವಿಸುವುದಿಲ್ಲ. ಕಟ್ಟಡಕ್ಕೆ ತಳಹದಿಯೂ ಬೇಕು, ಮೇಲುಭಾಗದ ಮಾಡಿನ ಹೊದಿಕೆಯೂ ಬೇಕು. ಇವುಗಳಲ್ಲಿ ಯಾವುದು ಶ್ರೇಷ್ಠವೆಂದು ಯಾರೂ ಚರ್ಚಿಸುವುದಿಲ್ಲ. ಆದರೆ ತಳಹದಿಯನ್ನು ಮಾತ್ರ ಕಟ್ಟಿಸಿ ಮಾಡುಗೋಡೆಗಳನ್ನು ಕಟ್ಟಿಸದೆ ಮಧ್ಯದಲ್ಲಿಯೇ ಕೆಲಸ ನಿಲ್ಲಿಸಿದರೆ ಅವನ ಆವರೆಗಿನ ಶ್ರಮವು ವ್ಯರ್ಥವೆನಿಸಿ ಕ್ಲೇಶ - ಅಪಹಾಸಗಳಿಗೆ ಗುರಿಯಾಗುವನು. ಅದರಂತೆ -

**ಸಂನ್ಯಾಸಸ್ತು ಮಹಾಬಾಹೋ**
**ದುಃಖಮಾಪ್ತುಮಯೋಗತಃ ।**

ಮನೋವಿಕಾರದ ತ್ಯಾಗರೂಪವಾದ ಬಹುಶ್ರಮಸಾಧ್ಯವಾದ ಸಂನ್ಯಾಸದ ಕಂಬವನ್ನು ಕಟ್ಟಿ ಕರ್ಮಯೋಗದ ಸೇತುವೆಯನ್ನು ಮಾತ್ರ ನಿರ್ಮಿಸದೆ

ಅರ್ಧದಲ್ಲೇ ಬಿಟ್ಟರೆ ಈ ಪ್ರಯತ್ನ, ಸಾಹಸಗಳೆಲ್ಲ ವೃಥಾ ಶ್ರಮವೆನಿಸಿ ದುಃಖ, ಸಂಕಟಗಳಿಗೆ ನಿಮಿತ್ತವಾಗುವವು. ಕರ್ಮಾಚರಣೆಯಿಲ್ಲದ ಸಂನ್ಯಾಸವು ಮರ, ಸಸಿಗಳಿಲ್ಲದ ತೋಟದಂತೆ ಬರೀ ಶೂನ್ಯ. ಆದುದರಿಂದ ಕರ್ಮಯೋಗದ ಈ ಎರಡು ಅಂಗಗಳಲ್ಲಿ ಉತ್ತರಾರ್ಧವೆನಿಸಿದ ಕರ್ಮಸಮರ್ಪಣೆಯನ್ನೇ ಪ್ರಧಾನವೆಂದು ಪರಿಗಣಿಸಿದ್ದಾರೆ. ಯೋಗವಿಲ್ಲದ ಸಂನ್ಯಾಸವು ತಲೆಯಿಲ್ಲದ ಶರೀರದಂತಿದ್ದು ಅಪೂರ್ಣವೂ ದುಃಖಕಾರಣವೂ ಎಂದಿದ್ದಾರೆ.

## ಜ್ಞಾನ ಕರ್ಮಗಳಲ್ಲಿ ಅವಿರೋಧ

ಇಲ್ಲಿ ಒಂದು ಪ್ರಶ್ನೆ ಉದ್ಭವಿಸಬಹುದು. ರಾಗದ್ವೇಷವರ್ಜನ, ಕರ್ಮಾನುಷ್ಠಾನ ಇವೆರಡು ಸೇರಿ ಒಂದು ಸಮಗ್ರಸಾಧನೆಯಾಗುವುದು ಹೇಗೆ? ಒಂದು ಜ್ಞಾನಕ್ಕೆ ವಿರೋಧಿ, ಇನ್ನೊಂದು ಜ್ಞಾನಕ್ಕೆ ಪೋಷಕ. ಹೀಗೆ ವಿರುದ್ಧಮುಖಗಳಾದ ಈ ಸಂನ್ಯಾಸ ಹಾಗೂ ಕರ್ಮಗಳೆರಡೂ ಸುಸಂಗತಗಳಾಗಿ ಒಂದು ಮಹಾಫಲವನ್ನು ಹೇಗೆ ಸಾಧಿಸಿಕೊಡಬಲ್ಲವು? ವಿಷಯವೈರಾಗ್ಯವು ಜ್ಞಾನದ ಸಾಧನವಾಗಿದೆ. ಪ್ರಾಪಂಚಿಕ ವಿಷಯದಲ್ಲಿ ಆಸಕ್ತಿ ಇರುವವನಿಗೆ ಎಷ್ಟು ಉಪದೇಶಗಳನ್ನು ನೀಡಿದರೂ ಅದು ಬೆಂಕಿಗಾಗಿ ಹಸಿ ಕಟ್ಟಿಗೆಯನ್ನು ಊದಿದಂತೆ. ಎಷ್ಟು ಪ್ರಯತ್ನಪಟ್ಟರೂ ವಿಷಯವೈರಾಗ್ಯವಿಲ್ಲದ, ಆಸಕ್ತಿಯಿಂದ ತುಂಬಿದ ಹೃದಯದಲ್ಲಿ ಜ್ಞಾನದ ಕಿಡಿಯು ಮಿಂಚಲಾರದು. ಆದುದರಿಂದ ಕಾಮದ್ವೇಷಾದಿಗಳ ಪರಿತ್ಯಾಗವೆನ್ನುವ ವಿಷಯವೈರಾಗ್ಯರೂಪವಾದ ಸಂನ್ಯಾಸವು ಜ್ಞಾನಕ್ಕೆ ಅಂತರಂಗ ಸಾಧನವಾಗಿದೆ. ಆದರೆ ಕರ್ಮಾನುಷ್ಠಾನವನ್ನು ಜ್ಞಾನವಿರೋಧಿಯೆಂದೇ ಅನೇಕ ಕಡೆಗಳಲ್ಲಿ ವರ್ಣಿಸಿದ್ದಾರೆ. ಕರ್ಮಾನುಷ್ಠಾನ ಮಾಡುವವರನ್ನು ನಿಂದಿಸುವ ವಾಕ್ಯಗಳೂ ಉಪನಿಷತ್ ಹಾಗೂ ಭಾಗವತದಲ್ಲಿ ದೊರೆಯುವವು. ''ಅಗ್ನಿಮುಗ್ಧ''ರು-ಯಜ್ಞದ ಅಗ್ನಿಯಲ್ಲೇ ಮೋಹ ಗೊಂಡವರು ಅರ್ಥಾತ್ ಕರ್ಮಾಸಕ್ತರು. ''ಧೂಮತಾಂತ''ರು - ಹೋಮ ಧೂಮಗಳಿಂದ ಗ್ಲಾನಿಗೊಂಡವರು. ''ಧೂಮಧೂಮ್ರಾತ್ಮ''ರು - ಯಜ್ಞಾಗ್ನಿಯ ಹೊಗೆಯುನ್ನು ಸೇವಿಸಿ ಇವರ ಅಂತಃಕರಣವೇ ಮಲಿನವಾಗಿದೆ ಎಂದು ಮುಂತಾಗಿ ಕರ್ಮಾನುಷ್ಠಾತೃಗಳನ್ನು ಜರೆದಿದ್ದಾರೆ. ಈ ಕರ್ಮಮಾರ್ಗವು ಜ್ಞಾನಕ್ಕೆ

ವಿರೋಧಿಯೆಂದೂ ಅಲ್ಲಿ ಬಣ್ಣಿಸಿದ್ದಾರೆ. ಹೀಗಿರುವಾಗ ಜ್ಞಾನಕ್ಕೆ ಅಂತರಂಗಸಾಧನವಾದ ಸಂನ್ಯಾಸವನ್ನೂ ಜ್ಞಾನಕ್ಕೆ ವಿರೋಧಿಯಾದ ಕರ್ಮದ ಜಾಲವನ್ನೂ ಜೋಡಿಸಿ ಅದನ್ನು ಕರ್ಮಯೋಗವೆಂದು ಹೇಗೆ ಕರೆದಿದ್ದಾರೆ? ಸಂನ್ಯಾಸಕ್ಕಿಂತ ಕರ್ಮಾಚರಣೆ ಶ್ರೇಷ್ಠವೆನಿಸುವುದಾದರೂ ಹೇಗೆ?

ಈ ಪ್ರಶ್ನೆಯನ್ನು -

**ಸಾಂಖ್ಯಯೋಗೌ ಪೃಥಗ್ ಬಾಲಾಃ ಪ್ರವದಂತಿ ನ ಪಂಡಿತಾಃ।**

ಮುಂತಾದ ಶ್ಲೋಕಗಳಲ್ಲಿ ಪರಿಹರಿಸಲಾಗಿದೆ. ಭಾಗವತ ಮತ್ತು ಉಪನಿಷತ್ತುಗಳಲ್ಲಿ ಜ್ಞಾನದ ಪ್ರತಿರೋಧಿ ಎಂದು ನಿಂದಿಸಿರುವುದು ಗೀತೆಯು ಬೋಧಿಸಿದ ಕರ್ಮಯೋಗವನ್ನಲ್ಲ. ಸ್ವರ್ಗಭೋಗ ಮೊದಲಾದ ಫಲದ ಆಮಿಷಕ್ಕೆ ಒಳಗಾಗಿ ನಾವು ಮಾಡುತ್ತಿರುವ ವಿವಿಧ ಲೌಕಿಕ ಕರ್ಮಗಳನ್ನು ಮಾತ್ರ ಅಲ್ಲಿ ಅಪಹಾಸ ಮಾಡಲಾಗಿದೆ. ಗೀತೆಯು ಅಂತಹ ಕಾಮ್ಯ-ಕರ್ಮಗಳನ್ನು ಬಲವಾಗಿ ವಿರೋಧಿಸಿದೆ. ಕರ್ಮಯೋಗದಲ್ಲಿ ಅಡಕವಾದ ಕರ್ಮವು ನಿಷ್ಕಾಮವಾದ ಪವಿತ್ರ ಭಾಗವತ ಧರ್ಮವಾಗಿದ್ದು ಅದು ಜ್ಞಾನಕ್ಕೆ ಅತ್ಯಂತ ಪೋಷಕವೇ ಆಗಿದೆ. ನಿಷ್ಕಾಮಕರ್ಮವು ಅಂತಃಕರಣ ನೈರ್ಮಲ್ಯ ಹಾಗೂ ತತ್ತ್ವಜ್ಞಾನದ ಉದಯಕ್ಕೆ ಕಾರಣವಾಗಿ ಜೀವನದ ಪರಮ ಹಾಗೂ ಚರಮ ಫಲವೆನಿಸುವ ಮುಕ್ತಿಯ ಕಡೆಗೆ ನಮ್ಮನ್ನು ಒಯ್ಯುವುದು. ಆದುದರಿಂದ ಜ್ಞಾನದ ಸಾಧನಗಳೇ ಆದ ಸಂನ್ಯಾಸ ಮತ್ತು ಕರ್ಮಯೋಗ ಇವೆರಡನ್ನೂ ಜೋಡಿಸುವುದರಲ್ಲಿ ಯಾವ ಅನೌಚಿತ್ಯವೂ ಇಲ್ಲ. ಯತಿಗಳು ಜ್ಞಾನಯೋಗಿಗಳು, ಅವರಿಗೆ ಕರ್ಮದಲ್ಲಿ ಅಧಿಕಾರ ಇಲ್ಲವೆಂದೂ ಕರ್ಮಯೋಗಿಗಳಾದ ಗೃಹಸ್ಥರು ಸಾಂಖ್ಯಮಾರ್ಗವೆಂದು ಪ್ರಸಿದ್ಧವಾದ ಜ್ಞಾನಯೋಗದಲ್ಲಿ ತೊಡಗಲು ಅನರ್ಹರೆಂದೂ ಕೆಲವರ ಗ್ರಹಿಕೆ ಇದೆ. ಜ್ಞಾನ-ಕರ್ಮಗಳನ್ನು ಈ ರೀತಿ ವಿಂಗಡಿಸಿ ಅವುಗಳನ್ನು ಪ್ರತ್ಯೇಕವಾದ ಸ್ವತಂತ್ರ ಮಾರ್ಗಗಳೆಂದು ಭಾವಿಸಬಾರದು.

**ಏಕಂ ಸಾಂಖ್ಯಂ ಚ ಯೋಗಂ ಚ ಯಃ ಪಶ್ಯತಿ ಸ ಪಶ್ಯತಿ।**

ಸಾಧಕನಲ್ಲಿ ಈ ಜ್ಞಾನ-ಕರ್ಮಗಳೆರಡೂ ಜೊತೆಗೆ ಇರಲೇಬೇಕಾಗುವುದು.

ಜ್ಞಾನಯೋಗಿಗಳಲ್ಲಿ ಜ್ಞಾನದ ಹಾಗೂ ಕರ್ಮಯೋಗಿಗಳಲ್ಲಿ ಕರ್ಮದ ಪ್ರಧಾನತೆಯು ಇರಬಹುದಾದರೂ ಜ್ಞಾನ-ಕರ್ಮಗಳೆರಡರ ಸಹಾಯವಿಲ್ಲದೆ ಬರಿ ಒಂದರಿಂದ ಮುಕ್ತಿಯನ್ನು ಪಡೆಯಲು ಸಾಧ್ಯವಿಲ್ಲ. ತತ್ತ್ವಜ್ಞಾನ ಹಾಗೂ ನಿಷ್ಕಾಮಕರ್ಮ ಇವೆರಡರ ಗುರಿ ಒಂದೇ ಇರುವುದು.

**ಏಕಮಪ್ಯಾಸ್ಥಿತಃ ಸಮ್ಯಗ್ ಉಭಯೋರ್ವಿಂದತೇ ಫಲಂ ।**

ಜ್ಞಾನಯೋಗ ಹಾಗೂ ಕರ್ಮಯೋಗ ಇವೆರಡರಲ್ಲಿ ಒಂದನ್ನು ಸಮಗ್ರವಾಗಿ ಸಂಗ್ರಹಿಸಬೇಕಾದರೂ ಇವೆರಡರ ಸಮಾವೇಶವಾಗಿಯೇ ಪೂರ್ಣಫಲವನ್ನು ಪಡೆಯಬೇಕಾಗುವುದು. ಹೀಗೆ ಜ್ಞಾನ, ಕರ್ಮಸಂನ್ಯಾಸ ಹಾಗೂ ಕರ್ಮಗಳಿಗೆ ಇರುವ ಅನ್ಯೋನ್ಯ ಸಂಬಂಧವನ್ನು ಸಮರ್ಥಿಸಿ ಸಮಗ್ರ ಸಾಧನೆಯಲ್ಲಿ ಇವೆಲ್ಲವುಗಳೂ ಅಡಕವಾಗಿರುವುದರ ಆವಶ್ಯಕತೆಯನ್ನು ಈ ಪ್ರಕರಣದಲ್ಲಿ ಪ್ರತಿಪಾದಿಸಲಾಗಿದೆ.

## ಕರ್ಮಯೋಗಿಯ ನಿರ್ಲಿಪ್ತತೆ

ರಾಗದ್ವೇಷಾದಿತ್ಯಾಗ ಮತ್ತು ನಿಷ್ಕಾಮಕರ್ಮಾಚರಣೆ ಇವೆರಡನ್ನು ತನ್ನಲ್ಲಿ ಅಳವಡಿಸಿಕೊಂಡ ಕರ್ಮಯೋಗಿಯು ಎಲ್ಲರಂತೆ ಲೌಕಿಕ ವ್ಯವಹಾರ ಗಳನ್ನೇನೋ ನಡೆಸುತ್ತಿರುತ್ತಾನೆ. ಆದರೆ ಅವನ ಪ್ರತಿಯೊಂದು ಆಚರಣೆ ಯಲ್ಲಿಯೂ ಬ್ರಹ್ಮಾರ್ಪಣದೃಷ್ಟಿಯು ಅನುಸ್ಯೂತವಾಗಿರುವುದು. ಯಾವ ಕ್ಷಣದಲ್ಲಿಯೂ ತಾನು ಇದನ್ನು ಮಾಡಿದೆನೆಂಬ ಅಹಂಕಾರದ ಭಾವವೇ ಅವನಲ್ಲಿ ಉದಯವಾಗುವುದಿಲ್ಲ. ಭಗವಂತನ ಶಕ್ತಿ, ಇಚ್ಛೆಗಳಿಂದ ತನ್ನ ಶರೀರ, ಇಂದ್ರಿಯಗಳೆಲ್ಲ ಪ್ರವರ್ತಿಸುತ್ತವೆ ಎಂಬ ಭಾವನೆಯು ಅವನಲ್ಲಿ ನಿತ್ಯಜಾಗ್ರತ ವಾಗಿರುತ್ತದೆ.

ದೈನಂದಿನವಾದ ಪ್ರತಿಯೊಂದು ಸಾಧಾರಣ ಚಟುವಟಿಕೆ ನಡೆಯುತ್ತಿರು ವಾಗಲೂ ಈ ಅನುಸಂಧಾನವು ಅವನಲ್ಲಿ ಓತಪ್ರೋತವಾಗಿರುವುದು. ಆದುದರಿಂದಲೇ ಈ ಜಗತ್ತಿನ ಮಧ್ಯದಲ್ಲಿಯೇ ಸಾಂಸಾರಿಕ ವ್ಯವಹಾರಗಳ ಜಾಲದಲ್ಲಿ ಇದ್ದರೂ ಆತನು ನಿರ್ಲಿಪ್ತನೆನಿಸಿದ್ದಾನೆ. ಅಂತರಂಗದಲ್ಲಿ ನೈರ್ಮಲ್ಯ

ಹಾಗೂ ತತ್ತ್ವಜ್ಞಾನದ ಹಿನ್ನೆಲೆ ಇರುವುದರಿಂದ ಈ ಲೌಕಿಕ ಕರ್ಮಗಳಿಂದ ಪಾಪದ ಲವಲೇಶ ಸಂಪರ್ಕವೂ ಅವನಿಗೆ ತಾಗಲಾರದು.

**ಪದ್ಮಪತ್ರಮಿವಾಂಭಸಾ ।**

ವಿಶಾಲವಾದ ಜಲರಾಶಿಯ ಮಧ್ಯದಲ್ಲೇ ಇದ್ದು, ಅಲ್ಲೇ ಹುಟ್ಟಿ ಬೆಳೆದಿದ್ದರೂ ತಾವರೆಯ ಎಲೆಗೆ ತೇವ ಅಂಟುವುದೇ ಇಲ್ಲ. ಬಟ್ಟೆಯನ್ನು ನೀರಿನಲ್ಲಿ ಅದ್ದಿದರೆ ಅದು ಒದ್ದೆಯಾಗಿ ನೀರು ಬಟ್ಟೆಯನ್ನೆಲ್ಲಾ ವ್ಯಾಪಿಸುತ್ತದೆ. ತಾವರೆ ಎಲೆಯನ್ನು ನೀರಿನಲ್ಲಿ ಮುಳುಗಿಸಿದರೂ ಒಂದು ಹನಿಯೂ ಅದರಲ್ಲಿ ಅಂಟಿಕೊಳ್ಳುವುದಿಲ್ಲ. ನಿಷ್ಕಾಮಕರ್ಮದ ಪ್ರಕ್ರಿಯೆಯಲ್ಲಿ ಈ ಚಮತ್ಕಾರವು ಅಡಗಿದೆ. ಪಾಪದ ಸೋಂಕೂ ಸಂಭವಿಸದಂತೆ ಈ ಜಗತ್ತಿನ ವ್ಯವಹಾರದಲ್ಲಿ ಅವನು ಭಾಗಿಯಾಗಬಲ್ಲನು.

ಕರ್ಮಯೋಗಿಯಾದ ಒಬ್ಬ ರಾಜನಿದ್ದನು. ಹಳೆಯ ಮಿತ್ರನೊಬ್ಬ ಆತನ ಬಳಿಗೆ ಬಂದು ಭೋಗವ್ಯವಹಾರಗಳ ಮಧ್ಯದಲ್ಲಿಯೇ ನೀನಿದ್ದರೂ ಎಲ್ಲರೂ ನಿನ್ನನ್ನು ಕರ್ಮಯೋಗಿ ಎಂದು ಕರೆಯುತ್ತಾರೆ. ಇದರ ರಹಸ್ಯವೇನು? ಎಂದು ಕೇಳುವನು. ಆ ರಾಜನು ''ಅದರ ರಹಸ್ಯವನ್ನು ಸಾವಕಾಶವಾಗಿ ಹೇಳುವೆನು. ಮೊದಲು ನನ್ನ ಅರಮನೆಯ ಸಂದಿಗೊಂದಿಗಳನ್ನು ಬಿಡದೆ ಎಲ್ಲವನ್ನು ನೋಡಿಕೊಂಡು ಬಾ. ದರ್ಶನೀಯ ಕಲಾಕೃತಿಗಳನ್ನು ಕಣ್ಣು ತುಂಬ ನೋಡು. ಆದರೆ ಜೋಕೆ, ಅರಮನೆಯನ್ನು ನೋಡುವಾಗ ಕೈಯಲ್ಲಿ ಹಿಡಿದುಕೊಂಡಿರುವ ದೀಪವು ಆರದಂತೆ ಎಚ್ಚರಿಕೆ ಇರಲಿ'' ಎಂದು ಹೇಳಿದನು. ಅದರಂತೆ ಅರಮನೆಯನ್ನು ಸುತ್ತಾಡಿ ತಿರುಗಿ ಬಂದ ಮಿತ್ರನಲ್ಲಿ ''ಅರಮನೆಯನ್ನೆಲ್ಲ ನೋಡಿದೆಯಾ?'' ಎಂದು ವಿಚಾರಿಸಿದಾಗ ''ಎಲ್ಲ ಭಾಗವನ್ನು ನೋಡಿದರೂ ನೋಡಿದಂತೆ ಆಗಲಿಲ್ಲ. ಕೈಯಲ್ಲಿದ್ದ ದೀಪವು ಆರಬಾರದೆಂದು ನೀನು ನಿರ್ಬಂಧಿಸಿರುವುದರಿಂದ ನನ್ನ ಗಮನವು ಯಾವಾಗಲೂ ಅದರ ಕಡೆಗೇ ಇತ್ತು. ನನ್ನ ದೃಷ್ಟಿಯು ದೀಪದ ಕಡೆಗೇ ಇದ್ದುದರಿಂದ ಅರಮನೆಯನ್ನು ನೋಡಿದರೂ ನೋಡಿದಂತಾಗಲಿಲ್ಲ'' ಎಂದು ಅವನು ನುಡಿದನು. ''ಇದೇ ನನ್ನ ಜೀವನದ ರಹಸ್ಯ'' ಎಂದು ರಾಜನು ಉತ್ತರಿಸಿದನು. ''ಭೋಗದ ಹಾಗೂ ದೈನಂದಿನ ರಾಜಕೀಯ ವ್ಯವಹಾರದ ಮಧ್ಯದಲ್ಲಿ ನಾನಿದ್ದರೂ ನನ್ನ ಈ ಜೀವನಜ್ಯೋತಿಯು

ಸಂದರ್ಭದಂತೆ ನಾನು ಎಚ್ಚರಿಕೆ ವಹಿಸುತ್ತಿದ್ದೇನೆ. ನನ್ನ ಅಂತರಂಗದ ಜ್ಯೋತಿಯ ಕಡೆಗೆ ನನ್ನ ಲಕ್ಷ್ಯ ಸದಾ ಇರುತ್ತದೆ. ಆದ್ದರಿಂದ ನಾನು ಈ ಎಲ್ಲ ವ್ಯವಹಾರದಲ್ಲಿ ಭಾಗಿಯಾಗಿದ್ದರೂ ಇವುಗಳನ್ನು ಆಚರಿಸದವನಂತೆ ಇರುವೆನು. ಈ ನಿರ್ಲಿಪ್ತತೆ ಮತ್ತು ಅಂತರಂಗದಲ್ಲಿಯ ಈ ಜಾಗ್ರತ ಪ್ರಜ್ಞೆಯೇ ನನ್ನ ಜೀವನದ ಯಶಸ್ಸಿನ ಮೂಲವಾಗಿದೆ'' ಎಂದು ವಿವರಿಸುತ್ತಾನೆ. ಕರ್ಮಯೋಗಿಯ ಜೀವನದರ್ಶನವೆಲ್ಲ ಈ ಚಿಕ್ಕ ಹಾಗೂ ಮಾರ್ಮಿಕ ಕಥೆಯಲ್ಲಿ ಅಡಕವಾಗಿದೆ.

## ಜ್ಞಾನಿಯು ಲೋಕವಿಮುಖನಲ್ಲ

**ಸರ್ವಕರ್ಮಾಣಿ ಮನಸಾ ಸಂನ್ಯಸ್ಯಾಸ್ತೇ ಸುಖಂ ವಶೀ ।**

ಜ್ಞಾನಯೋಗಿಯಲ್ಲಿ ಕರ್ಮದ ಸಂಬಂಧವೇ ಇರುವುದಿಲ್ಲ ಎಂದು ಕೆಲವರ ಅಭಿಪ್ರಾಯವಿದೆ. ಕರ್ಮಯೋಗವು ಸಾಧಕನ ಪೂರ್ವಾವಸ್ಥೆಯಾಗಿದ್ದರೆ ಜ್ಞಾನಯೋಗವು ಅವನ ಕೊನೆಯ ಹಂತವಾಗಿದೆ. ಏಕಕಾಲದಲ್ಲಿ ಇವೆರಡೂ ಸಾಧಕನಲ್ಲಿ ಮೇಳೈಸಿರಲಾರವು. ಈ ಕ್ರಿಯೆ, ಕ್ರಿಯಾಫಲಸಂಬಂಧ ಹಾಗೂ ಇವುಗಳ ಕಾರಣಗಳೆನಿಸಿದ ಈ ಪ್ರಪಂಚ ಮಾಯಾಮಯವೆನಿಸಿದ್ದು ನಿದ್ದೆಯಿಂದ ಎಚ್ಚೆತ್ತವನಿಗೆ ಸ್ವಪ್ನರಾಜ್ಯದ ವಿಭ್ರಮ, ವಿಲಾಸಗಳೆಲ್ಲ ಕ್ಷಣ ಮಾತ್ರದಲ್ಲಿ ಅದೃಶ್ಯವಾಗುವಂತೆ ಜ್ಞಾನವನ್ನು ಪಡೆದವನ ಪಾಲಿಗೆ ಈ ಪ್ರಪಂಚವೆಲ್ಲ ಬರಿ ಕನಸೇ ಆಗಿರುವುದು. ಹಗ್ಗವನ್ನು ಸರಿಯಾಗಿ ನೋಡಿದವನು ಅಲ್ಲಿ ತಾನು ಕಲ್ಪಿಸಿಕೊಂಡ ಹಾವನ್ನು ಮತ್ತೆ ಕಾಣಲಾರನಷ್ಟೆ! ಅದರಂತೆ ಆತ್ಮಜ್ಞಾನವನ್ನು ಪಡೆದ ಮೇಲೆ ಅದರ ಅಧಿಷ್ಠಾನದಲ್ಲಿಯೇ ಕಲ್ಪನೆಗೊಂಡಿರುವ ಮಾಯಿಕವಾದ ಜಗತ್ತಿನ ದರ್ಶನವು ಜ್ಞಾನಿಗೆ ಆಗುವುದಿಲ್ಲ. ಇಂತಹ ದೆಶೆಯಲ್ಲಿ ಅವನು ಕರ್ಮವನ್ನು ಹೇಗೆ ಮಾಡಿಯಾನು? ಆದುದರಿಂದ ಯಜ್ಞರೂಪವಾದ ಸತ್ಕರ್ಮದ ಅನುಷ್ಠಾನವು ಅಜ್ಞಾನದಲ್ಲಿ ತೊಳಲಾಡುವ ವ್ಯಕ್ತಿಗಳಿಗೆ ಮಾತ್ರ ಮೀಸಲಾದುದು. ಬ್ರಹ್ಮಜ್ಞಾನವನ್ನು ಪಡೆದ ವ್ಯಕ್ತಿಯು, ಜ್ಞಾನ ಹಾಗೂ ಕರ್ಮ ಸಂನ್ಯಾಸದಲ್ಲಿ ಮಾತ್ರ ಅಧಿಕೃತನು. ಅವನು ತನ್ನ ಶರೀರ ರಕ್ಷಣೆಗೆ ಮಾತ್ರ ಆವಶ್ಯಕವೆನಿಸುವ ಕಾರ್ಯಗಳನ್ನು ನಿರ್ಲಿಪ್ತತೆಯಿಂದ ನಿರ್ವಹಿಸುವನು. ಇತರ ನಿತ್ಯ-ನೈಮಿತ್ತಿಕ ಧಾರ್ಮಿಕ-ಸಾಮಾಜಿಕವೆನಿಸುವ ಯಾವ ಕಾರ್ಯಗಳನ್ನೂ ಜ್ಞಾನಿಯಾದವನು

ಮಾಡಲಾರನೆಂದು ಶ್ರೀಶಂಕರಾಚಾರ್ಯ ಮೊದಲಾದವರು ಪ್ರತಿಪಾದಿಸಿ, ಇದರ ಸಮರ್ಥನೆಗಾಗಿ

**ಸರ್ವಕರ್ಮಾಣಿ ಮನಸಾ ಸಂನ್ಯಸ್ಯಾಸ್ತೇ ಸುಖಂ ವಶೀ ।**
**ನ ಕರ್ತೃತ್ವಂ ನ ಕರ್ಮಾಣಿ ।**
**ನೈವ ಕುರ್ವನ್ ನ ಕಾರಯಾನ್ ।**
**ಶಾರೀರಂ ಕೇವಲಂ ಕರ್ಮ ।**

ಮುಂತಾದ ಶ್ಲೋಕಗಳನ್ನು ಉದಾಹರಿಸುತ್ತಾರೆ. ಈ ವಾಕ್ಯಗಳನ್ನು ಪರಾಮರ್ಶಿಸುವಾಗಲೇ ಇವರು ಹೇಳುವ ಕರ್ಮಸಂನ್ಯಾಸವು ಗೀತೆಗೆ ಸಮ್ಮತವಲ್ಲವೆಂದು ಸ್ಪಷ್ಟವಾಗುವುದು. ಸರ್ವ ಕರ್ಮಗಳ ಕಾಯಿಕ ತ್ಯಾಗವನ್ನು ಹೇಳಿರದೆ ಮಾನಸಿಕ ತ್ಯಾಗವನ್ನಷ್ಟೇ ಇಲ್ಲಿ ವಿಧಾನ ಮಾಡಲಾಗಿದೆ. ''ಸರ್ವಕರ್ಮಾಣಿ ಮನಸಾ ಸಂನ್ಯಸ್ಯ'' ಈ ವಾಕ್ಯದಲ್ಲಿ ಮಾನಸಿಕವಾಗಿ ಯಾವ ಫಲಾಭಿಲಾಷೆಯನ್ನೂ ಮಾಡಲಾಗದು ಮತ್ತು ತಾನು ಕರ್ತಾ ಎಂಬ ಸ್ವಾತಂತ್ರ್ಯದ ಅಭಿಮಾನವೂ ಮನಸ್ಸಿನಲ್ಲಿರಬಾರದು ಎಂಬ ಆಶಯವೇ ವ್ಯಕ್ತವಾಗುತ್ತದೆ. ''ಮನಸಾ'' ಎಂಬ ಪದವು ಇಲ್ಲಿ ಅರ್ಥಪೂರ್ಣವಾಗಿದೆ.

**ಪಶ್ಯನ್ ಶೃಣ್ವನ್ ಸ್ಪೃಶನ್ ಜಿಘ್ರನ್**
**ಅಶ್ನನ್ ಗಚ್ಛನ್ ಸ್ವಪನ್ ಶ್ವಸನ್ ।**
**ಪ್ರಲಪನ್ ವಿಸೃಜನ್ ಗೃಹ್ಣನ್**
**ಉನ್ಮಿಷನ್ ನಿಮಿಷನ್ನಪಿ ॥**

ಎಂದು ಜ್ಞಾನಿಗೆ ಸಕಲ ವ್ಯವಹಾರಗಳನ್ನು ನಿರೂಪಿಸಿ ಜ್ಞಾನಿಯು ಬ್ರಹ್ಮಾರ್ಪಣಬುದ್ಧಿಯಿಂದ ಪರಮಾತ್ಮನ ಸ್ವತಂತ್ರ ಕ್ರಿಯಾಶಕ್ತಿಯ ನಿರಂತರ ಅನುಸಂಧಾನದ ಜೊತೆಗೆ ಅನಾಸಕ್ತಿಯಿಂದ ಈ ಎಲ್ಲ ವ್ಯವಹಾರಗಳನ್ನೂ ನಿರ್ವಹಿಸುವನೆಂದು ಹೇಳಿರುವುದರಿಂದ ಕಾಯಿಕವಾಗಿ ಕರ್ಮಗಳ ಪರಿತ್ಯಾಗವನ್ನು ಇಲ್ಲಿ ಪ್ರತಿಪಾದಿಸಿಲ್ಲವೆಂದು ಸುಸ್ಪಷ್ಟವಾಗುವುದು. ಅಹಂಕಾರ ಮತ್ತು ಫಲಾಶೆಗಳ ಪರಿವರ್ಜನೆಯೇ ಕರ್ಮದ ಮಾನಸಿಕ ತ್ಯಾಗವೆನಿಸಿದೆ. ಕಾಮ್ಯಕರ್ಮಗಳ ವರ್ಜನವೇ ಸಂನ್ಯಾಸವೆಂದೂ ಸರ್ವಲೌಕಿಕ ಫಲಗಳನ್ನು ಬಿಡುವುದೇ ತ್ಯಾಗವೆಂದೂ ಹದಿನೆಂಟನೆಯ ಅಧ್ಯಾಯದಲ್ಲಿ ವರ್ಣಿಸಲಾಗಿದೆ.

ಪ್ರಪಂಚವು ಕಾಲ್ಪನಿಕವಾಗಿದ್ದು ಜ್ಞಾನಿಯಾದವನಿಗೆ ಈ ಜಗತ್ತು ಕಾಣುವುದೇ ಇಲ್ಲವಾದರೆ ತನ್ನ ರಕ್ಷಣೆಗಾಗಿ ಉಪಯುಕ್ತವಾದ ಕಾರ್ಯಗಳನ್ನಾದರೂ ಅವನು ಹೇಗೆ ಮಾಡಬಲ್ಲನು? ಶರೀರ ಹಾಗೂ ಇತರ ಆಹಾರಾದಿ ಪದಾರ್ಥಗಳೂ ಜಗತ್ತಿನ ಜೊತೆಗೆ ನಿವೃತ್ತಿ ಹೊಂದಿರುವುದರಿಂದ ಅವನು ಯಾವ ಕ್ರಿಯೆಯನ್ನೂ ಮಾಡಲಾರನಷ್ಟೆ. ಹೀಗಿರುವಾಗ ನಿತ್ಯಜೀವನೋಪಯುಕ್ತ ಕಾರ್ಯಗಳ ಮಟ್ಟಿಗೆ ಅವನಿಗೆ ಅವಕಾಶವನ್ನು ನಲ್ಲಿಸಿರುವುದು ಅತ್ಯಂತ ಅರ್ಥಶೂನ್ಯವಾಗಿದೆ. ಲೋಕಾನುಗ್ರಹಕಾರಕವೂ ಆತ್ಮೋನ್ನತಿಪೋಷಕವೂ ಆದ ವಿಸ್ತಾರವಾದ ಶ್ರೇಷ್ಠ ಕರ್ತವ್ಯಗಳನ್ನೆಲ್ಲ ದೂರ ಸರಿಸಿ ಉದರ ಪೋಷಣೆಗೆ ಅವಶ್ಯವೆನಿಸಿದ ಕಾರ್ಯಗಳ ಮಟ್ಟಿಗೆ ಜ್ಞಾನಿಯ ಕರ್ತವ್ಯವನ್ನು ಮೊಟಕುಗೊಳಿಸುವುದರಿಂದ ಜ್ಞಾನಿಯ ಮಟ್ಟವನ್ನೇ ಕೆಳಗಿಳಿಸಿದಂತಾಗುವುದು. ಬ್ರಹ್ಮಜ್ಞಾನಿಯಾದ ಉದಾರ, ವಿಶಾಲ ಮನಸ್ಸಿನ ಮಹಾಪುರುಷನು ಈ ಜಗತ್ತಿನಲ್ಲಿ ಶರೀರ ಹಾಗೂ ಅದಕ್ಕೆ ಸಂಬಂಧಿಸಿದ ವಸ್ತುಗಳನ್ನು ಮಾತ್ರ ಕಾಣುವನು. ಉಳಿದ ಪ್ರಪಂಚವೆಲ್ಲ ಅವನಿಗೆ ಶೂನ್ಯವೆನ್ನುವುದು ಅರ್ಥರಹಿತವಾದ ವಿಚಾರವೆನಿಸುವುದು. ಜಗತ್ತು ಮಾಯಿಕವಾದುದರಿಂದ ಬ್ರಹ್ಮಜ್ಞಾನಿಗೆ ಇದು ಗೋಚರವಾಗುವುದಿಲ್ಲ ವೆನ್ನುವುದರಿಂದ ಆಧ್ಯಾತ್ಮಿಕ ಪ್ರಪಂಚ ಹಾಗೂ ಜಗತ್ತಿನ ಸಂಬಂಧವನ್ನೇ ಕಡಿದುಹಾಕಿದಂತೆ. ಬ್ರಹ್ಮದರ್ಶನವನ್ನು ಹೊಂದಿದ ಮಹಾನುಭಾವನಿಂದಲೇ ಲೋಕದ ಜನರು ಪರಮಾತ್ಮನ ವಿಚಾರವನ್ನರಿಯಬೇಕು. ಬ್ರಹ್ಮಜ್ಞಾನಿಯಾದ ಜೀವನ್ಮುಕ್ತನಿಗೆ ಈ ಜಗತ್ತೇ ಕಾಣದಾದರೆ ಭಗವಂತನ ಸಂದೇಶವನ್ನು ಲೋಕಕ್ಕೆ ನೀಡುವವರು ಬೇರೆ ಯಾರು ? ಪರಮಾತ್ಮನನ್ನೂ ಅಜ್ಞಾನಿ ಜನತೆಯನ್ನೂ ಜೋಡಿಸುವ ಸೇತುವೆಯೇ ಬ್ರಹ್ಮಜ್ಞಾನಿಯಾಗಿದ್ದು, ಅವನ ಲೋಕದರ್ಶನ ವನ್ನೇ ಅಲ್ಲಗಳೆದರೆ ಋಷಿಗಳ ಸಾಕ್ಷಾತ್ಕಾರದ ಪ್ರತಿಧ್ವನಿಗಳೂ ಅವರ ಅನುಭವದ ಉದ್ಗಾರಗಳೂ ಎನಿಸಿದ ಈಗ ದೊರೆಯುವ ಶಾಸ್ತ್ರೀಯ ಉಪದೇಶಗಳೆಲ್ಲ ಅಜ್ಞಾನಿಗಳಾದ ಸಾಧಕರ, ಅನುಭವದ ಹಿನ್ನೆಲೆಯಿಲ್ಲದ, ಅಪ್ರಗಲ್ಭ ವಿಚಾರಗಳೆನಿಸುವವು. ಜ್ಞಾನಿಗಳೂ ಅಜ್ಞಾನಿಗಳೂ ಎಲ್ಲರೂ ಈ ಲೋಕದಲ್ಲಿ ಸ್ವಕರ್ತವ್ಯವನ್ನು ಮಾಡಲೇಬೇಕೆಂದು ಬೋಧಿಸುವ ಗೀತೆಗೆ ಈ ವಾದವು ಸರ್ವಥಾ ಸಮ್ಮತವಲ್ಲ.

ಬ್ರಹ್ಮಣ್ಯಾಧಾಯ ಕರ್ಮಾಣಿ
ಸಂಗಂ ತ್ಯಕ್ತ್ವಾ ಕರೋತಿ ಯಃ ।

ಎಂದು ಗೀತೆಯಲ್ಲಿ ನಿರೂಪಿಸಿದಂತೆ ಅಸಂಗ ಮತ್ತು ಬ್ರಹ್ಮಾರ್ಪಣ ಬುದ್ಧಿಯಿಂದ ಸ್ವಕರ್ತವ್ಯಾಚರಣೆ ಹಾಗೂ ಲೋಕವ್ಯವಹಾರ ಇವೆರಡೂ ಬ್ರಹ್ಮಜ್ಞಾನಿಗಳಲ್ಲೂ ಇವೆ ಎಂಬುದನ್ನು ಅರಿತುಕೊಂಡು ಅವರು ತೋರಿಸಿದ ಹಾದಿಯಲ್ಲಿ ಅವರು ನಡೆಯುವ ರೀತಿಯಲ್ಲಿ ಹೆಜ್ಜೆ ಇಡಲು ನಾವು ಪ್ರಯತ್ನಿಸಬೇಕು.

## ಜ್ಞಾನಿಯ ಸಮದೃಷ್ಟಿ

ಪ್ರತಿಯೊಬ್ಬರ ವ್ಯವಹಾರಗಳ ಹಿನ್ನೆಲೆಯಲ್ಲಿಯೂ ಪರಮಾತ್ಮನ ಶಕ್ತಿಯನ್ನು ಕಾಣುವ ಬ್ರಹ್ಮಜ್ಞಾನಿಗಳು ಪ್ರಪಂಚದ ದರ್ಶನ, ವ್ಯವಹಾರಗಳಲ್ಲಿಯೂ ದಿವ್ಯ ಆನಂದವನ್ನೇ ಅನುಭವಿಸಬಲ್ಲರು. ಪ್ರತಿಯೊಂದು ವಸ್ತುವಿನಲ್ಲೂ ಪರಮಾತ್ಮನ ದಿವ್ಯರೂಪದ ದರ್ಶನವನ್ನು ಪಡೆಯುತ್ತಿರುವ ಅವರು ಈ ಪ್ರಾಪಂಚಿಕ ಸಂಪರ್ಕದಿಂದ ವಿಚಲಿತರೂ ವಿಕಾರವಶರೂ ಆಗಲಾರರು. ವಿದ್ಯಾವಿನಯ ಸಂಪನ್ನರಾದ ಸಜ್ಜನರಲ್ಲಿಯೂ ಹಿಂಸಾಜೀವಿಗಳೆನಿಸಿದ ಅನಾಗರಿಕ ಕ್ರೂರ ಮನುಷ್ಯರಲ್ಲಿಯೂ ಹುದುಗಿದ ಭಗವತ್ತತ್ತ್ವವನ್ನು ಅವರು ಕಾಣಬಲ್ಲರು. ಈ ಪ್ರಪಂಚದಲ್ಲಿ ಎಷ್ಟೇ ಭೇದ, ವೈಚಿತ್ರ್ಯಗಳಿದ್ದರೂ ಈ ಜಗತ್ತಿನಲ್ಲಿ ಅಂತರ್ಯಾಮಿ ಎನಿಸಿದ ಜಗತ್ಪ್ರಚೋದಕ ಶಕ್ತಿಯಾದ ಪರಮಾತ್ಮನು ಎಲ್ಲ ಕಡೆಗಳಲ್ಲಿಯೂ ಏಕರೂಪವಾಗಿ ನೆಲೆಸಿರುವನು. ಪ್ರಪಂಚದಲ್ಲಿ ವ್ಯವಹರಿಸುವಾಗ ಭಗವಂತನ ಈ ಸಮತೆಯ ದರ್ಶನವಾದವನಿಗೆ ಬಾಹ್ಯಪ್ರಪಂಚದ ಏರುಪೇರುಗಳು ಮತ್ತು ವಿಕೃತಿ, ಸಂಸ್ಕೃತಿಗಳ ದರ್ಶನದಿಂದ ಯಾವುದೇ ಕ್ಷೋಭವಾಗುವುದಿಲ್ಲ. ಎಲ್ಲಿ ನೋಡಿದರೂ ಭಗವಂತನ ಚಿದಾನಂದಮಯರೂಪ ಮತ್ತು ಅವನ ಅದ್ಭುತ ಶಕ್ತಿಕ್ರಿಯಾವಿಲಾಸವಿಭ್ರಮಗಳನ್ನು ಕಾಣುವ ಯೋಗಿಯು ಪ್ರಪಂಚದ ಪ್ರತಿಯೊಂದು ಪದಾರ್ಥದಲ್ಲಿಯೂ ಆನಂದವನ್ನೇ ಅನುಭವಿಸುವನು. ಶ್ರೀಮಧ್ವಾಚಾರ್ಯರು ಸಂನ್ಯಾಸಿಯಾಗಲು ಹೊರಟಾಗ ಎದುರಿಗೆ ಇದ್ದ ಹೊಲ ಮರಗಳ ಕಡೆಗೂ ನಮಸ್ಕರಿಸುತ್ತಿದ್ದುದನ್ನು ಕಂಡು ಅಚ್ಚರಿಗೊಂಡ ಅವರ ಬಂಧುಗಳು ಇದೇನು ನಿನ್ನ ಈ ವಿಚಿತ್ರ ವ್ಯವಹಾರವೆಂದು ಕೇಳಲು, ನನ್ನ

ಪ್ರೀತಿಯ ವಸ್ತುವು ಎಲ್ಲ ಕಡೆಗಳಲ್ಲಿಯೂ ಗೋಚರವಾಗುತ್ತಿರುವಾಗ ಅದಕ್ಕೆ ತಲೆಬಾಗದೆ ಹೇಗೆ ಇರಲಿ ಎಂದರಂತೆ. ಹೀಗೆ ಜ್ಞಾನಿಗಳಿಗೆ ಎಲ್ಲಿ ನೋಡಿದರೂ ಮಂಗಲಮಯದರ್ಶನ ಹಾಗೂ ನಿತ್ಯಾನಂದದ ಅನುಭವವೇ ದೊರೆಯುತ್ತಿರುವುದರಿಂದ ವೈಷಮ್ಯಪೂರಿತವಾದ ರುದ್ರಬೀಭತ್ಸವೆನಿಸಿದ ಈ ಜಗತ್ತಿಗೆ ಅವರು ಹೆದರುವುದಿಲ್ಲ.

ಜಗತ್ತಿನ ಎಲ್ಲ ಪದಾರ್ಥಗಳಲ್ಲಿಯೂ ಏಕರೂಪವಾಗಿ ಭಗವಚ್ಛಕ್ತಿ ಪ್ರವಹಿಸಿಕೊಂಡಿದೆ. ವಿದ್ಯುಚ್ಛಕ್ತಿಯು ಎಲ್ಲ ಕಡೆಗಳಲ್ಲಿಯೂ ಒಂದೇ ರೀತಿಯಿಂದ ಹರಿಯುತ್ತಿದ್ದರೂ ಬಲ್ಬ್‌ಗಳಿಗನುಗುಣವಾಗಿ ಹೆಚ್ಚು ಕಡಿಮೆ ಪ್ರಮಾಣದಲ್ಲಿ ಅದು ಅಭಿವ್ಯಕ್ತವಾಗುವಂತೆ, ಭಗವಂತನು ಎಲ್ಲರಲ್ಲಿಯೂ ಏಕಪ್ರಕಾರವಾಗಿ ಅನುಸೂತ್ಯನಾಗಿದ್ದರೂ ಅಧಿಷ್ಠಾನವಾದ ಪದಾರ್ಥ ಹಾಗೂ ವ್ಯಕ್ತಿಯ ಸ್ವರೂಪ, ಯೋಗ್ಯತೆಗಳಿಗನುಸಾರವಾಗಿ ಪ್ರಕಟನಾಗುತ್ತಿರುವನು. ದುಷ್ಟರಲ್ಲಿ ಭಗವಂತನ ಸನ್ನಿಧಾನವಿದ್ದರೂ ಅವರ ದೌಷ್ಟ್ಯ, ದರ್ಪಗಳಲ್ಲಿ ಅಡಗಿದ ಭಗವತ್ತತ್ತ್ವವನ್ನು ಕಾಣುವುದು ಸಾಮಾನ್ಯ ಜನರಿಗೆ ಸಾಧ್ಯವಾಗದ ಕಾರ್ಯವಾಗಿದ್ದರೆ ದುಷ್ಟ, ಶಿಷ್ಟರಿಬ್ಬರಲ್ಲಿಯೂ ಭಗವಂತನ ಹಾಗೂ ಅವನ ಏಕತ್ವದ ದರ್ಶನವನ್ನು ಪಡೆಯುವ ಭಾಗ್ಯ ಜ್ಞಾನಿಗಳದ್ದಾಗಿದೆ. ಪರಮಾತ್ಮನು ಎಲ್ಲರಲ್ಲಿಯೂ ಒಂದೇ ರೀತಿಯಿಂದ ವ್ಯಾಪ್ತನಾಗಿದ್ದರೂ ಆಯಾಯ ವ್ಯಕ್ತಿಗಳ ಸ್ವಭಾವ ಮತ್ತು ಮೂಲಭೂತ ಅಭಿರುಚಿಗಳನ್ನನುಸರಿಸಿ ಜಗತ್ತಿನಲ್ಲಿ ದುಷ್ಟ ಶಿಷ್ಟರ ವಿಭಾಗ ವ್ಯವಸ್ಥೆಯಾಗಿದೆ. ಪರಮಾತ್ಮನು ಎಲ್ಲ ಕಡೆ ಇದ್ದಾನೆ ಎಂಬುದರಿಂದ ಸಜ್ಜನರು, ದುರ್ಜನರು ಎಲ್ಲರೂ ಸಮಾನರು ಎಂಬುದಾಗಿ ಸಮತೆಯ ಅರ್ಥವಿಪರ್ಯಾಸವನ್ನು ನಾವು ಮಾಡಬಾರದು.

**ಪಂಡಿತಾಃ ಸಮದರ್ಶಿನಃ ||**

ಈ ವಾಕ್ಯವನ್ನು ನಾನಾ ರೀತಿಯಿಂದ ವಿಪರೀತವಾಗಿ ಎಳೆಯುವ ಪ್ರಯತ್ನವು ನಡೆದಿದೆ. ಪ್ರತಿಯೊಬ್ಬನಿಗೂ ಅವನ ಸದ್ಗುಣ, ಸತ್ಕಾರ್ಯಗಳಿಗನುಗುಣವಾಗಿ ಗೌರವ ಪುರಸ್ಕಾರಗಳು ಲಭಿಸುತ್ತಿದ್ದರೆ ಆ ಸಮಾಜವು ಹಿತಕರವಾದ ರೀತಿಯಲ್ಲಿ ಬೆಳೆಯಬಹುದು. ಸಜ್ಜನಿಕೆ ಹಾಗೂ ದೌರ್ಜನ್ಯಗಳಲ್ಲಿ ಯಾವ ಭೇದಭಾವವನ್ನೂ ಇಟ್ಟುಕೊಳ್ಳದೆ ಎಲ್ಲರನ್ನೂ ಸಮಾನ ದೃಷ್ಟಿಯಿಂದ

ನೋಡಬೇಕೆನ್ನುವ ಸಮತೆಯನ್ನು ಯಾರೂ ಅಪೇಕ್ಷಿಸಲಾರರು. ಅದರಂತೆ ಜ್ಞಾನಿಗಳೂ ಪಾಮರರೂ ಕ್ರಿಯಾಶೀಲರೂ ಅಲಸರೂ ಸೌಜನ್ಯಸದ್ಗುಣ ಶಾಲಿಗಳೂ ದುರ್ನಡತೆಯವರೂ ಈ ಎಲ್ಲರಲ್ಲಿಯೂ ಭಗವಂತನು ನೆಲೆಸಿದ್ದರೂ ಅವರವರ ಅಂತಸ್ತಿಗೆ ಅನುಗುಣವಾಗಿ ಸಮಾಜದಲ್ಲಿ ಸ್ಥಾನಮಾನಗಳನ್ನು ನೀಡುವುದೇ ನಿಜವಾದ ಸಮತೆ ಎನಿಸುವುದು. ಚಿಕ್ಕ ಮಕ್ಕಳು ಹಾಗೂ ದೊಡ್ಡವರಿಗೆ ಒಂದೇ ರೀತಿಯಾಗಿ ಆಹಾರವಿತರಣೆಯನ್ನು ಮಾಡಿದಲ್ಲಿ ಅದು ಸಮತೆ ಎನಿಸಲಾರದು. ಜ್ಞಾನ, ಸದ್ಗುಣ, ಸತ್ಕಾರ್ಯಗಳಿಗನುಸಾರವಾಗಿ ಮಾಡುವ ತರತಮ ಭಾವವೇ ನಿಜವಾದ ಸಾಮ್ಯದೃಷ್ಟಿಯಾಗುವುದು. ವ್ಯಕ್ತಿಯ ದುಡಿತ, ಸೇವೆಗಳಿಗೆ ಅನುಸಾರವಾಗಿ ಪ್ರತಿಫಲದಲ್ಲಿ ಹೆಚ್ಚು ಕಡಿಮೆ ಮಾಡಿದರೆ ವೈಷಮ್ಯದ ಆರೋಪವನ್ನು ಯಾರೂ ಮಾಡಲಾರರು. ಅದರ ಬದಲಾಗಿ ಅತ್ಯಂತ ಬುದ್ಧಿವಂತನಾದ ವಿದ್ಯಾರ್ಥಿಯನ್ನು ಕಡಿಮೆ ಅಂಕವನ್ನು ಪಡೆದ ವಿದ್ಯಾರ್ಥಿಯೊಂದಿಗೆ ಸಮವಾಗಿ ನಡೆಸಿದರೆ ಅದನ್ನೇ ವೈಷಮ್ಯ, ಪಕ್ಷಪಾತವೆಂದು ಕರೆಯಲಾಗುತ್ತದೆ. ದೇಶದಲ್ಲಿ ಸುಜನ-ದುರ್ಜನ ವಿವೇಕವನ್ನು ಮಾಡದೆ ರಾಜ್ಯಭಾರವನ್ನು ನಡೆಸಿದಲ್ಲಿ ಅದು ಅರಾಜಕತೆಗೆ ಆಹ್ವಾನವಿತ್ತಂತೆ. ಈ ಎಲ್ಲ ವಿಚಾರವನ್ನು ಗಮನಿಸಿಕೊಂಡು ಗೀತೆಯ ''ಸಮದರ್ಶಿನಃ'' ಎಂಬುದರ ಭಾವವನ್ನು ನಾವು ತಿಳಿದುಕೊಳ್ಳಬೇಕು. ಶ್ರೇಷ್ಠ ವ್ಯಕ್ತಿಗಳಲ್ಲಿಯೂ, ಕನಿಷ್ಠ ಮನುಷ್ಯರಲ್ಲಿಯೂ ಸುಜನರಲ್ಲಿಯೂ ದುರ್ಜನರಲ್ಲಿಯೂ ಪರಮಾತ್ಮ ನೇನೋ ಏಕರೂಪದಲ್ಲಿ ನೆಲೆಸಿರುವನು. ಬೇರೆ ಬೇರೆ ಯಂತ್ರಗಳಲ್ಲಿ ವಿದ್ಯುತ್ತು ಏಕರೂಪವಾಗಿ ಹರಿಯುತ್ತಿದ್ದರೂ ಅವುಗಳ ಸ್ವಭಾವ ರಚನೆಗಳಿಗೆ ಅನುಗುಣವಾಗಿ ಅವುಗಳಿಂದ ಭಿನ್ನ ಭಿನ್ನ ಕಾರ್ಯಗಳು ನಡೆಯುತ್ತವೆ. ವಿದ್ಯುತ್ತು ಏಕರೂಪವಾಗಿ ಹರಿಯುತ್ತಿದ್ದರೂ ಎಲ್ಲ ಯಂತ್ರಗಳೂ ಒಂದೇ ಕಾರ್ಯವನ್ನು ಮಾಡಲಾರವು, ಒಂದೇ ರೀತಿಯಲ್ಲಿ ಮಾಡಲಾರವು. ಅದರಂತೆ ಜೀವರ ಸ್ವಭಾವಗಳಿಗನುಸಾರವಾಗಿ ಈ ಜಗತ್ತಿನಲ್ಲಿ ವ್ಯತ್ಯಾಸವು ಅನಿವಾರ್ಯವೇ ಆಗಿದೆ. ಪರಮಾತ್ಮನು ಜಗತ್ತಿನಲ್ಲಿ ವ್ಯಾಪಿಸಿದ್ದರೂ ಸ್ವಭಾವ ಗುಣಗಳ ಆಧಾರದಲ್ಲಿರುವ ಈ ಲೋಕಪ್ರವೃತ್ತಿಯನ್ನು ಬದಲಿಸಲಾರನು.

ಸ್ವಭಾವಸ್ತು ಪ್ರವರ್ತತೇ ।

ಪ್ರತಿಯೊಂದು ಲೋಕವ್ಯವಹಾರಕ್ಕೂ ಸ್ವಯಂಭುವಾದ ಪರಮಾತ್ಮ ಮತ್ತು ವ್ಯಕ್ತಿಯ ಮೂಲಭೂತ ಸ್ವಭಾವ ಇವೆರಡೂ ಕಾರಣವಾಗಿರುವುದರಿಂದ ವೈಷಮ್ಯಪಕ್ಷರಹಿತನಾದ ಭಗವಂತನು ಇದ್ದೂ ಜಗತ್ತಿನಲ್ಲಿ ಹೀಗೇಕೆ ಒಬ್ಬೊಬ್ಬರು ಒಂದೊಂದು ರೀತಿಯಿಂದ ವರ್ತಿಸುತ್ತಿದ್ದಾರೆಂದು ಆಕ್ಷೇಪಿಸಲು ಅವಕಾಶವಿಲ್ಲ.

**ತತ್ರ ತತ್ರ ಸ್ಥಿತೋ ವಿಷ್ಣು**
**ಸ್ತತ್ತಚ್ಛಕ್ತೀಃ ಪ್ರಬೋಧಯನ್ ॥**

-ಸೂತ್ರಭಾಷ್ಯ

ಪ್ರತಿಯೊಂದು ಜಡ-ಚೇತನದಲ್ಲೂ ಇದ್ದು ಅವರವರ ಸ್ವಭಾವ ಹಾಗೂ ಶಕ್ತಿಗಳನ್ನು ಪ್ರಬೋಧನೆ ಮಾಡುವುದೇ ಪರಮಾತ್ಮನ ಸೃಷ್ಟಿಯ ವಿಧಾನವಾಗಿದೆ. ಲೋಕದಲ್ಲಿ ಎಲ್ಲ ಗಿಡಗಳಿಗೂ ಸರಿಯಾದ ನೀರು, ಗೊಬ್ಬರಗಳನ್ನು ಹಾಕಿದರೂ ಅವುಗಳ ಬೀಜದ ಮೂಲ ಸ್ವಭಾವಕ್ಕನುಗುಣವಾಗಿ ಹಣ್ಣುಗಳ ರಸ-ರುಚಿಗಳಲ್ಲಿ ಭೇದವು ಉಂಟಾದಲ್ಲಿ ತೋಟಗಾರನು ಅದಕ್ಕೆ ಹೊಣೆಗಾರನಾಗುವನೆ? ಅದರಂತೆ ಸೃಷ್ಟಿಯ ಈ ವೈವಿಧ್ಯ, ವಿಭಿನ್ನತೆಗಳಿಗೆ ಜೀವ, ಜಡರ ಮೂಲಭೂತ ವ್ಯಕ್ತಿತ್ವ, ಅಭಿರುಚಿಗಳೇ ಹಿನ್ನೆಲೆಯಾಗಿರುವುದರಿಂದ ಭಗವಂತನನ್ನೂ ಅವನ ಸಮತೆಯನ್ನೂ ನಾವು ದೂಷಿಸಲಾರೆವು.

**ನಾದತ್ತೇ ಕಸ್ಯಚಿತ್ ಪಾಪಂ ನ ಚೈವ ಸುಕೃತಂ ವಿಭುಃ ।**

ಸರ್ವಕರ್ತನೂ ಸರ್ವವ್ಯಾಪಿಯೂ ಆದ ಪರಮಾತ್ಮನು ಒಂದು ನೀತಿ, ನಿಯಮವನ್ನು ಆಧರಿಸಿಯೇ ಜಗತ್ತಿನ ವ್ಯವಹಾರವನ್ನು ನಡೆಸುವುದರಿಂದ ಯಾವ ವೈಷಮ್ಯ ದೋಷಕ್ಕೂ ಆತನು ಪಾತ್ರನಾಗಲಾರ. ಮಾನವರ ಸತ್, ಅಸತ್ ಕಾರ್ಯಗಳಿಂದ ಆಗುವ ಸುಕೃತ, ದುಷ್ಕೃತ ಲೇಪವೂ ಅವನಿಗೆ ಇರುವುದಿಲ್ಲ. ಅದರಂತೆ ಅಧಿಷ್ಠಾನವಾದ ಜೀವ-ಜಡರಲ್ಲಿರುವ ಮೂಲಭೂತ ಗುಣದೋಷಗಳ ಪರಿಣಾಮ ಆಘಾತಗಳು ಅವುಗಳಲ್ಲಿ ನೆಲೆಸಿರುವ ಪರಮಾತ್ಮನಿಗೆ ಸ್ವಲ್ಪವೂ ಆಗುವುದಿಲ್ಲ. ಅವನು ಎಂದೆಂದಿಗೂ ಪರಿಶುದ್ಧನೂ ಗುಣಪೂರ್ಣನೂ ಆಗಿರುವವನು. ವಸ್ತುಭೇದದಿಂದ ಅವನ ಅಭಿವ್ಯಕ್ತಿಯ ತಾರತಮ್ಯವಿರಬಹುದಾದರೂ ಅವನ ಸ್ವರೂಪಕ್ಕೆ ಯಾವ ಚ್ಯುತಿ, ವಿಕಾರಗಳೂ

ಬಾಹ್ಯ ಪದಾರ್ಥಗಳ ಸಂಪರ್ಕದಿಂದ ಉಂಟಾಗಲಾರವು. ಆದುದರಿಂದಲೇ ಅಸಂಗನೆಂದು ಪರಮಾತ್ಮನನ್ನು ಉಪನಿಷತ್ತುಗಳು ವರ್ಣಿಸಿರುತ್ತವೆ.

**ವಿಷಮೇಷ್ವಪಿ ಜೀವೇಷು ಸಮೋ ವಿಷ್ಣುಃ ಸದೈವ ತು ।**

-ಗೀತಾತಾತ್ಪರ್ಯ

ಸರ್ವೋತ್ತಮ ಚೈತನ್ಯವೆನಿಸಿದ ಪರಮಾತ್ಮನು ವಿಚಿತ್ರ ವಿಭಿನ್ನ ಪ್ರವೃತ್ತಿಯ ಈ ಎಲ್ಲ ಜೀವ-ಜಡ ಪ್ರಪಂಚದಲ್ಲಿ ಅನುಸ್ಯೂತನಾಗಿ ನೆಲೆಸಿದ್ದರೂ ಅವುಗಳ ಸಂಪರ್ಕದಿಂದ ಯಾವುದೇ ವಿಕೃತಿ, ವಿಷಮತೆಗಳನ್ನು ಅವನು ಪಡೆದಿರುವುದಿಲ್ಲ. ಅವನು ಎಂದೆಂದಿಗೂ ನಿರ್ವಿಕಾರನೂ ಏಕರೂಪನೂ ಆಗಿರುವನು.

ಬಾಹ್ಯವಸ್ತುವನ್ನು ಅವಲೋಕಿಸುವುದರ ಜೊತೆಗೆ ಈ ನಿರ್ವಿಕಾರವಾದ ಪರತತ್ತ್ವದ ದರ್ಶನವಾಗುವುದರಿಂದಲೇ ಪ್ರಪಂಚದ ಮಧ್ಯದಲ್ಲಿದ್ದರೂ ಜ್ಞಾನಿಯು ಈ ಅನುಪಮ ಆನಂದವನ್ನು ಸವಿಯುವನು.

## ಆಧ್ಯಾತ್ಮಿಕ ಸುಖದ ವೈಶಿಷ್ಟ್ಯ

ಆತ್ಮದರ್ಶನದಿಂದ ದೊರೆಯುವ ಈ ದಿವ್ಯ ಆನಂದವು, ಜೀವನದಲ್ಲಿ ನಾವು ಪಡೆಯಬಹುದಾದ ಉಳಿದ ಎಲ್ಲ ಸುಖಗಳಿಗಿಂತ ಶ್ರೇಷ್ಠವೂ ಪವಿತ್ರವೂ ಆಗಿದೆ. ಸಾಂಸಾರಿಕ ಸುಖಭೋಗದಿಂದ ನಮಗೆ ದೊರೆಯುವ ಅಲ್ಪಸುಖಕ್ಕಿಂತ ಮಿಗಿಲಾದ ಪವಿತ್ರವಾದ ಸಾತ್ತ್ವಿಕಾನಂದವನ್ನು ಭೋಗಪದಾರ್ಥಗಳ ತ್ಯಾಗದಿಂದ ನಾವು ಪಡೆಯಬಲ್ಲೆವು. ಭೋಗದ ಆನಂದಕ್ಕಿಂತಲೂ ತ್ಯಾಗದ ಆನಂದದ ಸವಿಯೇ ಹೆಚ್ಚು. ನಮ್ಮ ಪದಾರ್ಥಗಳನ್ನು ಭೋಗಿಸುವುದರಲ್ಲಿ ಸಹಜವಾಗಿ ನಾವು ಸುಖವನ್ನು ಅನುಭವಿಸುತ್ತೇವೆ. ಇದು ಪ್ರಾಕೃತಿಕವಾದ, ಸಾಮಾನ್ಯ ಜನರು ಪಡೆಯುವ ಸುಖ. ಇನ್ನು, ಮತ್ತೊಬ್ಬರ ವಸ್ತುಗಳನ್ನು ಕಸಿದು ತಾನು ಪಡೆಯುವ ಸುಖವು ವಿಕೃತವಾದ ತಾಮಸ ಸುಖವೆನಿಸುವುದು. ತನ್ನ ಲಾಲಸೆಯನ್ನು ಹತ್ತಿಕ್ಕಿ ತನ್ನ ಪ್ರೀತಿಯ ವಸ್ತುಗಳನ್ನೇ ಮತ್ತೊಬ್ಬರಿಗೆ ನೀಡಿ ತಾನು ಪಡೆಯುವ ಆನಂದವೇ ನಿಜವಾದ ಸುಸಂಸ್ಕೃತವಾದ ಸಾತ್ತ್ವಿಕ ಆನಂದವೆನಿಸುವುದು. ನಮ್ಮ ಮೂಲಭೂತವಾದ ಚೈತನ್ಯರೂಪಿ ಆನಂದವನ್ನೇ

ನಾವು ತ್ಯಾಗದ ಆನಂದದಲ್ಲಿ ಕಾಣುವೆವೆಂದು ಶ್ರೀಮದಾಚಾರ್ಯರು ಅಪ್ಪಣೆ ಕೊಡಿಸಿದ್ದಾರೆ. ಹೀಗೆ ಪ್ರಾಕೃತಿಕ ಭೋಗಕ್ಕಿಂತ ಶ್ರೇಷ್ಠವಾದ ಸ್ವರೂಪಸುಖವನ್ನು ವೈಷಯಿಕ ಪದಾರ್ಥಗಳ ಹಾಗೂ ಆಂತರಿಕ ಕಾಮನೆಯ ತ್ಯಾಗದಲ್ಲಿ ತಾನು ಅನುಭವಿಸಬಹುದಾದರೂ ಅದು ಸ್ಥಿರವಾಗಿ ನಮ್ಮಲ್ಲಿ ನೆಲೆನಿಲ್ಲಲು ಪರಮಾತ್ಮನ ಧ್ಯಾನದ ಆಸರೆಯು ಆವಶ್ಯಕವಾಗಿದೆ. ತ್ಯಾಗದಿಂದ ತಾತ್ಕಾಲಿಕವಾದ ಸಾತ್ತ್ವಿಕ ಆನಂದವು ದೊರಕಬಹುದಾದರೂ ಧ್ಯಾನಯೋಗದಲ್ಲಿ ಪರಮಾತ್ಮನಲ್ಲಿ ನಮ್ಮ ಬುದ್ಧಿಯನ್ನು ಕೇಂದ್ರೀಕರಿಸುವುದರಿಂದ ಸ್ಥಿರವಾದ ಅಕ್ಷಯವಾದ ಆನಂದವು ದೊರಕುವುದು. ಆದುದರಿಂದ ತ್ಯಾಗಯೋಗಗಳ ಸಮನ್ವಯದಿಂದಲೇ ಶಾಶ್ವತ ಸುಖಾನುಭವವನ್ನು ನಾವು ಹೊಂದಬಲ್ಲೆವು.

ವಿಷಯ ಸಂಪರ್ಕದಿಂದ ಪಡೆಯುವ ಸುಖ ಹಾಗೂ ತ್ಯಾಗ, ಧ್ಯಾನಾದಿಗಳಿಂದ ಪಡೆಯುವ ಆತ್ಮಾನಂದ ಇವುಗಳಿಗೆ ಬಹಳ ಅಂತರವಿದೆ. ಭೌತಿಕ ಸುಖವನ್ನು ಪಡೆಯುವಾಗ ಅದರಲ್ಲಿ ಬಹಳ ಆತುರತೆ, ಆಸಕ್ತಿಗಳು ಮೂಡುವವು. ಅದನ್ನು ಪಡೆಯಲು ನಮ್ಮ ಮನಸ್ಸು ಅತಿಯಾಗಿ ಚಡಪಡಿಸುತ್ತದೆ. ಇದೆಲ್ಲ ಲವಲವಿಕೆ ಅದನ್ನು ಪಡೆಯುವವರೆಗೆ ಮಾತ್ರ. ಪಡೆದಮೇಲೆ ಅದರಲ್ಲಿ ಅಷ್ಟೇ ಜಿಗುಪ್ಸೆ, ತಿರಸ್ಕಾರಬುದ್ಧಿ ಉಂಟಾಗುತ್ತದೆ. ಆರಂಭದಲ್ಲಿ ತಾತ್ಕಾಲಿಕ ಸುಖವು ದೊರೆತರೂ ವಿಷಯಪದಾರ್ಥಗಳ ಸೇವನೆಯು ದುಃಖ, ಜಿಗುಪ್ಸೆಗಳನ್ನೇ ಮುಂದೆ ನಿರ್ಮಿಸು ವುದು. ಕಜ್ಜಿ ತುರಿಸುವಾಗ ತಾತ್ಕಾಲಿಕವಾಗಿ ದೊರೆಯುವ ತಾಮಸ ಆನಂದದಂತೆ ಈ ವೈಷಯಿಕ ಸುಖ ಇದೆ. ಕಜ್ಜಿ ತುರಿಸಿದ ನಂತರ ಆಗುವ ಕ್ಲೇಶವಿಕಾರದಂತೆ ಭೌತಿಕ ಸುಖವನ್ನು ಅನುಭವಿಸಿದ ನಂತರದ ಪಾಡೂ ಶೋಚನೀಯವೇ ಆಗುವುದು.

**ಕಂಡೂಯನೇನ ಕರಯೋರಿವ ದುಃಖದುಃಖಂ ।**

- ಭಾಗವತ

ಆಧ್ಯಾತ್ಮಿಕ ಸುಖದ ಸ್ಥಿತಿಯು ಇದಕ್ಕಿಂತ ತೀರ ವ್ಯತಿರಿಕ್ತವಾಗಿದೆ. ಈ ಸುಖವನ್ನು ಪಡೆಯುವ ಮೊದಲು ಇದಕ್ಕಾಗಿ ತ್ಯಾಗ, ತಪಸ್ಸು, ಕ್ಲೇಶಗಳ ಆವಶ್ಯಕತೆಯು ಬಹಳ ಶ್ರಮವೆನಿಸಬಹುದಾದರೂ ಈ ಆಧ್ಯಾತ್ಮಿಕ ಸಾಧನೆಯು

ನಂತರ ಸಾವು ಪಡೆಯಬಹುದಾದ ತೃಪ್ತಿ, ಆನಂದಗಳು ಅನುಪಮವಾದವು. ಆ ಪವಿತ್ರವಾದ ಸಾತ್ತ್ವಿಕ ಆನಂದದ ಮುಂದೆ ಪ್ರಪಂಚದ ಮಿಕ್ಕ ಸಮಸ್ತ ಭೋಗೈಶ್ವರ್ಯಗಳ ಆನಂದವು ತುಚ್ಛ ಹಾಗೂ ಕೃತ್ರಿಮವೆನಿಸುವುದು. ಪ್ರಾರಂಭದಲ್ಲಿ ಕಷ್ಟ, ಅನಾಸ್ಥೆಗಳಿಗೆ ಅವಕಾಶವಿದ್ದರೂ ಪರಿಣಾಮದಲ್ಲಿ ನಮಗೆ ಪೂರ್ಣತೆಯ ಅನುಭವವನ್ನು ನೀಡಬಲ್ಲ ಈ ಆಧ್ಯಾತ್ಮಿಕ ಸಿದ್ಧಿಗಾಗಿ ಪ್ರಯತ್ನಿಸುವುದೇ ನಮ್ಮ ಜೀವನದ ಮುಖ್ಯ ಸಾಧನೆಯಾಗಿರಬೇಕು. ಈ ವಿಚಾರಗಳನ್ನು -

**ಬಾಹ್ಯಸ್ಪರ್ಶೇಷ್ವಸಕ್ತಾತ್ಮಾ ವಿಂದತ್ಯಾತ್ಮನಿ ಯತ್ ಸುಖಂ ।**
**ಸ ಬ್ರಹ್ಮಯೋಗಯುಕ್ತಾತ್ಮಾ ಸುಖಮಕ್ಷಯಮಶ್ನುತೇ ।**
**ಯೇ ಹಿ ಸಂಸ್ಪರ್ಶಜಾ ಭೋಗಾ ದುಃಖಯೋನಯ ಏವ ತೇ ।**

ಮುಂತಾದ ಶ್ಲೋಕಗಳಲ್ಲಿ ವಿವರಿಸಲಾಗಿದೆ.

ಹೀಗೆ ಜೀವನದಲ್ಲಿ ತಾನು ತ್ಯಾಗ ಮತ್ತು ಕರ್ಮಯೋಗ ಇವೆರಡನ್ನೂ ಅಳವಡಿಸಿಕೊಂಡು ಧ್ಯಾನದ ಮಾರ್ಗದಲ್ಲಿ ಮುನ್ನಡೆದು ಸ್ಥಿರವಾದ ಆತ್ಮಿಕ ಆನಂದವನ್ನು ಪಡೆಯಬೇಕೆನ್ನುವುದನ್ನು ಐದನೆಯ ಅಧ್ಯಾಯದಲ್ಲಿ ಸಮರ್ಥಿಸಲಾಗಿದೆ.

## ಕರ್ಮಯೋಗದಿಂದ ಧ್ಯಾನಯೋಗಕ್ಕೆ

ಸಾಕ್ಷಾತ್ಕಾರಕ್ಕೆ ಮುಖ್ಯ ಸಾಧನಗಳು ಎರಡು. ಒಂದು ಕರ್ಮಯೋಗ; ಇನ್ನೊಂದು ಧ್ಯಾನಯೋಗ. ಕರ್ಮಯೋಗದ ವಿಸ್ತಾರವಾದ ವಿವೇಚನೆಯನ್ನು ಈವರೆಗೆ ಮಾಡಲಾಗಿದೆ. ಧ್ಯಾನಯೋಗದ ನಿರೂಪಣೆಯನ್ನು ಆರನೆಯ ಅಧ್ಯಾಯದಲ್ಲಿ ಮಾಡಲಾಗುವುದು.

ಹಿಂದೆ ಹೇಳಿದ ಕಾಮನಾತ್ಯಾಗ ಮತ್ತು ಕರ್ಮಾನುಷ್ಠಾನವೆಂಬ ಎರಡು ಮುಖದ ಕರ್ಮಯೋಗವನ್ನು ಆಚರಿಸಿ, ಯೋಗಿಯೂ ಸಂನ್ಯಾಸಿಯೂ ಎನಿಸಿದ ವ್ಯಕ್ತಿಯೇ ಮುಂದಿನ ಭೂಮಿಕೆಯಾಗಿ ಧ್ಯಾನಯೋಗವನ್ನು ಅನುಷ್ಠಿಸಬೇಕು. ಕರ್ಮಯೋಗದಿಂದ ಸಮಾಧಿಯ ಅವಸ್ಥೆಯನ್ನು ಹೊಂದಿ, ನಂತರ ಸಾಕ್ಷಾತ್ಕಾರವನ್ನು ಪಡೆಯುವುದರಿಂದ ನಮ್ಮ ಈ ಸಾಧನೆಯು

ಸಮಗ್ರವಾಗುವುದು. ಅಪರೋಕ್ಷಜ್ಞಾನಕ್ಕಿಂತ ಮೊದಲು ಧ್ಯಾನಯೋಗಕ್ಕೆ ಬೇಕಾಗುವ ಹೃದಯಸಂಸ್ಕಾರವು ಸಿದ್ಧವಾಗಲು ಕರ್ಮಯೋಗವು ಮುಖ್ಯ ಸಾಧನ. ಕರ್ಮಯೋಗ ಹಾಗೂ ಅಂತಃಕರಣ ಶುದ್ಧಿಯ ಹಿನ್ನೆಲೆಯಿಲ್ಲದೆ ಒಮ್ಮೆಲೇ ಧ್ಯಾನಯೋಗದ ಕಡೆಗೆ ಹಾರುವ ಅನುಚಿತ ಸಾಹಸವನ್ನು ಮಾಡಿದರೆ ಮಧ್ಯದಲ್ಲಿ ಮುಗ್ಗರಿಸಿ ಬೀಳುವ ಸಂದರ್ಭ ಒದಗಬಹುದು. ಆದುದರಿಂದ ಧ್ಯಾನ ಹಾಗೂ ಅಪರೋಕ್ಷ ಜ್ಞಾನಕ್ಕೆ ಪೂರ್ವಸಿದ್ಧತೆ ಎನಿಸಿದ ಕರ್ಮಯೋಗವನ್ನೇ ಎಲ್ಲ ಜನರೂ ಸಾಮಾನ್ಯವಾಗಿ ತಮ್ಮಲ್ಲಿ ಅಳವಡಿಸಿಕೊಳ್ಳಲು ಪ್ರಯತ್ನಿಸಬೇಕು. ಸೇವೆ, ಕರ್ತವ್ಯಗಳನ್ನು ಅಲಕ್ಷಿಸುವ ಆಧ್ಯಾತ್ಮಿಕ ಪ್ರವೃತ್ತಿಯು ನಮ್ಮ ಪ್ರಗತಿಗೆ ಏನೂ ಸಹಾಯಕವಾಗಲಾರದು.

## ಕರ್ಮಯೋಗಿಗೆ ಲೋಕಸೇವೆ ಅನಿವಾರ್ಯ

ಧ್ಯಾನಯೋಗದ ಮೊದಲು ನಾವು ಮಾಡುವ ಕರ್ಮಗಳೆಂದರೆ ಜಪ, ಪೂಜೆ ಹಾಗೂ ಇತರ ವರ್ಣಾಶ್ರಮೋಚಿತ ಕರ್ತವ್ಯಗಳೆಂದು ಮಾತ್ರ ನಾವು ಭಾವಿಸಿದ್ದೇವೆ. ಪಾಠ-ಪ್ರವಚನ ಮುಂತಾದ ಆಯಾಯ ವರ್ಣಗಳು ಮಾಡುವ ವಿಶೇಷ ಧರ್ಮಗಳು ಮಾತ್ರವಲ್ಲದೆ, ಎಲ್ಲ ವರ್ಣದವರು ಮಾಡಲೇಬೇಕಾದ, ಸರ್ವಸಾಧಾರಣವೆನಿಸುವ ಒಂದು ಶ್ರೇಷ್ಠ ಕರ್ತವ್ಯವೂ ಇದೆ. ಅದೇ ನಾನಾಜನಶುಶ್ರೂಷೆ. ಈ ಜಗತ್ತಿನಲ್ಲಿರುವ ಅನೇಕ ಬಗೆಯ ಜನತೆಯ ಸೇವೆಯೂ ಸಾಧಕನು ಅನುಷ್ಠಿಸಬೇಕಾದ ಮುಖ್ಯ ಕರ್ತವ್ಯಗಳಲ್ಲಿ ಒಂದೆನಿಸಿದೆ. ಎಲ್ಲಿ ದುಃಖ, ರೋಗ, ಹಸಿವುಗಳಿವೆಯೋ ಅಂತಹ ಆರ್ತಜನರಿಗಾಗಿ ನಮ್ಮ ಹೃದಯ ಮಿಡುಕಬೇಕು. ಎಲ್ಲ ಜನರಲ್ಲಿರುವ ಹರಿಯನ್ನು ಸ್ಮರಿಸಿ ಸ್ವಾರ್ಥ ಭಾವನೆಯನ್ನು ತ್ಯಜಿಸಿ ಜನಸೇವೆಯನ್ನು ಕೈಗೊಳ್ಳುವುದರಿಂದ ಭಗವಂತನು ಪ್ರೀತನಾಗುವನು.

**ತಸ್ಯ ಪ್ರಾಣ್ಯುಪಕಾರೇಣ ಸಂತುಷ್ಟೋ ಭವತೀಶ್ವರಃ ।**

-ಗೀತಾತಾತ್ಪರ್ಯ

ಸಾಕ್ಷಾತ್ಕಾರವನ್ನು ಪಡೆಯುವವರೆಗೆ ತನ್ನ ಜಪಪೂಜಾದಿಗಳ ಜೊತೆಗೆ ಸಾಧಕನು ಈ ಜನಶುಶ್ರೂಷೆಯ ಕಾರ್ಯವನ್ನೂ ಕೈಗೊಳ್ಳಬೇಕು. ಇದು

ಐಚ್ಛಿಕವಲ್ಲ. ಕಡ್ಡಾಯವಾಗಿ ಈ ಸೇವೆಯನ್ನು ನಾವು ಆಚರಿಸಲೇಬೇಕು. ಸರಕಾರಕ್ಕೆ ಕರ, ಕಂದಾಯಗಳನ್ನು ಕೊಡುವುದು ಹೇಗೆ ಅನಿವಾರ್ಯವೋ ಅದರಂತೆ ನಾನಾಜನಸೇವೆಯು ಭಗವಂತನು ನಮಗೆ ವಿಧಿಸಿದ ಕಡ್ಡಾಯದ ಕರ್ತವ್ಯವಾಗಿದೆ. ಇದು ಜಗತ್ತಿನ ಅಧಿದೇವತೆಗೆ ನಾವು ಸಲ್ಲಿಸಬಹುದಾದ ಕಂದಾಯವೆನಿಸಿದೆ. ಕರ, ಕಂದಾಯಗಳನ್ನು ಕೊಡಲು ತಪ್ಪಿದಲ್ಲಿ ಅವನು ರಾಷ್ಟ್ರದ ಯೋಗ್ಯ ನಾಗರಿಕನಾಗಬಲ್ಲನೆ? ಅದರಂತೆ ವಿಶ್ವರಾಜ್ಯದ ಏಕಮೇವ ಸಾರ್ವಭೌಮನೆನಿಸಿದ ಭಗವಂತನಿಗಾಗಿ ದೀನ ದಲಿತರ ಸೇವೆಯನ್ನು ನಡೆಸದಿದ್ದರೆ ನಾವು ಹೇಗೆ ವಿಶ್ವದ ಯೋಗ್ಯ ಪ್ರಜೆಗಳೆನಿಸಬಲ್ಲೆವು?

ನಾನಾಜನಸ್ಯ ಶುಶ್ರೂಷಾ ಕರ್ಮಾಖ್ಯಾ ಕರವನ್ಮಿತೇಃ।

-ಗೀತಾತಾತ್ಪರ್ಯ

ಲೋಕಸೇವೆಯ ಅನಿವಾರ್ಯತೆಯನ್ನೂ ಅದರ ಹಿಂದಿರುವ ಪವಿತ್ರವಾದ ಭಾವವನ್ನೂ ಇದು ವಿವರಿಸುತ್ತದೆ. ಶ್ರೀಮಧ್ವಾಚಾರ್ಯರು ಜನಸೇವೆಯು ಸಾಧಕನಿಗೆ ಆವಶ್ಯಕವೆಂದು ಪ್ರತಿಪಾದಿಸಲು ಗೀತಾತಾತ್ಪರ್ಯದಲ್ಲಿ ಉದಾಹರಿಸಿದ ಶ್ಲೋಕವಿದು. ಇದು ನಮಗೆ ಪ್ರಿಯವಾದ ಧ್ಯೇಯವಾಕ್ಯವೆನಿಸಿದೆ. ಕರ್ಮಾಚರಣೆಯು ಅವಶ್ಯವೆಂದು ಭಾವಿಸಿ, ತಮ್ಮ ವೈಯಕ್ತಿಕ ಧರ್ಮಕರ್ಮ ಗಳನ್ನು ಮಾತ್ರ ಆಚರಿಸಿ, ಸಮಾಜದ ಬಗ್ಗೆ ಉದಾಸೀನವಾಗಿರುವ ಪ್ರವೃತ್ತಿಯನ್ನೇ ನಾವು ಹೆಚ್ಚಾಗಿ ಕಾಣುತ್ತೇವೆ. ಸಮಾಜದ ಸೇವೆಯೆಂದರೆ ಅದೊಂದು ಲೌಕಿಕಕಾರ್ಯವೆಂದೂ ಅದನ್ನು ತೊರೆದು ದಿನವಿಡೀ ಜಪ-ತಪ ಮೊದಲಾದ ವೈಯಕ್ತಿಕವಾದ ಆಧ್ಯಾತ್ಮಿಕ ಕಾರ್ಯಗಳಲ್ಲಿ ತೊಡಗುವವನೇ ಕಟ್ಟಾ ಧಾರ್ಮಿಕನೆಂಬ ಒಂದು ಭಾವನೆಯು ಪ್ರಚಲಿತವಿದೆ. ಗೀತೆಯಲ್ಲಿ ಹೇಳಿದ ಕರ್ಮದ ಸಂದೇಶವನ್ನು ವರ್ಣಾಶ್ರಮ ಪದ್ಧತಿಯಿಂದ ಬಂದ ನಮ್ಮ ನಮ್ಮ ವೃತ್ತಿ ಹಾಗೂ ಜಪ-ಪೂಜಾದಿಗಳಲ್ಲೇ ನಾವು ಪರಿಮಿತಗೊಳಿಸಿದ್ದೇವೆ. ನಮ್ಮ ಆಧ್ಯಾತ್ಮಿಕ ಸಾಧನೆಯಲ್ಲಿ ಆರ್ತಜನತೆಯ ಸೇವೆಯು ಒಂದು ಪ್ರಧಾನವಾದ ಅಂಶವಾಗಿದೆಯೆಂದೂ ಸಾಧಕನು ತನ್ನ ನಿತ್ಯಾನುಷ್ಠಾನಗಳ ಜೊತೆಗೆ ಈ ಸೇವಾಕಾರ್ಯವನ್ನು ಆಚರಿಸಲೇಬೇಕೆನ್ನುವುದು ಗೀತೆಯ ಆದೇಶವೆಂದೂ

ಶ್ರೀಮಧ್ವಾಚಾರ್ಯರು ಪ್ರತಿಪಾದಿಸಿದ್ದಾರೆ. ವೇದಾಂತವು ಸಮಾಜವಿಮುಖವಾದ ದೃಷ್ಟಿಯನ್ನು ನಮಗೆ ನೀಡದೆ ವೈಯಕ್ತಿಕ ಹಾಗೂ ಸಮಾಜದ ಉನ್ನತಿಗೆ ಪ್ರೋಷಕವಾದ ವಿಧಾಯಕವಾದ ಮಾರ್ಗವನ್ನು ಹೇಗೆ ತೋರಿಸುತ್ತದೆ ಎಂಬುದನ್ನು ಇದರಿಂದ ನಾವು ಮನಗಾಣಬಹುದು.

ಲೋಕದಲ್ಲಿ ಎರಡು ಬಗೆಯ ಜನರಿರುವರು. ಜಪಾನುಷ್ಠಾನ ನಿರತರಾಗಿ ಸಾಮಾಜಿಕ ಕಾರ್ಯವನ್ನು ತೊರೆಯುವವರು ಕೆಲವರು. ಸಮಾಜಸೇವೆಯಲ್ಲಿಯೇ ನಿರತರಾಗಿ ದೇವರನ್ನೇ ಮರೆಯುವವರು ಕೆಲವರು. ಈ ಎರಡು ಬಗೆಯ ಜನರ ಜೀವನವೂ ಅಪೂರ್ಣವೆನಿಸುತ್ತದೆ. ಸಮಾಜಸೇವೆಯಿಲ್ಲದ ನಿತ್ಯಕರ್ಮಗಳು ಪೂರ್ಣ ಧರ್ಮವೆನಿಸಲಾರವು. ಪರಮಾತ್ಮನ ಭಕ್ತಿಪೂಜೆಗಳಿಲ್ಲದ ಸಮಾಜಸೇವೆಯೂ ಪರಿಪೂರ್ಣ ಸೇವೆ ಎನಿಸಲಾರದು. ಧರ್ಮದ ಒಂದು ಮುಖವನ್ನು ಮಾತ್ರ ಪರಿಗ್ರಹಿಸಿ ಇನ್ನೊಂದು ಭಾಗವನ್ನು ಅಲಕ್ಷಿಸಿದರೆ ನಮ್ಮ ಧರ್ಮವು ಪರಿಪೂರ್ಣವೆನಿಸಲಾರದು. ಆನೆಯ ಒಂದೊಂದು ಭಾಗವನ್ನು ಮಾತ್ರ ಮುಟ್ಟಿ ಕುರುಡರು ತಾವು ಆನೆಯನ್ನು ಅರಿತೆವೆಂದು ಭಾವಿಸಿಕೊಂಡಂತೆ ನಮ್ಮ ಪರಿಸ್ಥಿತಿಯಾಗುವುದು. ಆನೆಯ ಬಾಲವನ್ನು ಮಾತ್ರ ಮುಟ್ಟಿ ಆನೆಯು ಹಗ್ಗದಂತಿದೆ ಎಂದು ಆ ಕುರುಡರು ಹೇಳಿದಂತೆ. ಅದರಂತೆ ಧರ್ಮದ ಒಂದು ಭಾಗವೆನಿಸುವ ನಿತ್ಯಕರ್ಮಾನುಷ್ಠಾನವನ್ನು ಮಾತ್ರ ಆಚರಿಸಿ ಇನ್ನೊಂದು ಭಾಗವೆನಿಸುವ ಲೋಕಸೇವೆಯನ್ನು ಪರಿತ್ಯಜಿಸಿದರೆ ನಮ್ಮ ಧರ್ಮವು ಅಪೂರ್ಣವಾಗುವುದು. ಆದುದರಿಂದ ಧಾರ್ಮಿಕರೆನಿಸುವವರು ಸಮಾಜ ಸೇವೆಯ ಮಹತ್ತ್ವವನ್ನೂ ಸಾಮಾಜಿಕ ಕಾರ್ಯಕರ್ತರು ನಿಃಸ್ವಾರ್ಥ ಸೇವಾಭಾವದ ಸ್ಫೂರ್ತಿಗೆ ಆಧಾರವೆನಿಸಿದ ಭಗವದ್ಭಕ್ತಿಯನ್ನೂ ಅರಿತುಕೊಂಡು ಅವೆರಡನ್ನೂ ತಮ್ಮ ಜೀವನದಲ್ಲಿ ಸಮ್ಮಿಲಿತಗೊಳಿಸಬೇಕು.

ಕಾಶೀಯಾತ್ರೆಯನ್ನು ಮುಗಿಸಿ ಗಂಗಾತೀರ್ಥವನ್ನು ಪಾತ್ರೆಗಳಲ್ಲಿ ತುಂಬಿಕೊಂಡು ಕೆಲವರು ಸಾಧುಗಳು ಹಿಂದಿರುಗುತ್ತಿದ್ದರು. ಆ ತೀರ್ಥವನ್ನು ರಾಮೇಶ್ವರದಲ್ಲಿ ಅಭಿಷೇಕ ಮಾಡಬೇಕೆಂದು ಅವರ ಸಂಕಲ್ಪವಾಗಿತ್ತು. ಹಿಂದಿರುಗುವ ದಾರಿಯಲ್ಲಿ ರಾಜಸ್ಥಾನದ ಮರುಭೂಮಿಯಲ್ಲಿ ಒಂಟೆಯೊಂದು ನೀರಿಲ್ಲದೆ ಪ್ರಾಣಸಂಕಟದಿಂದ ನರಳುತ್ತಿತ್ತು. ಅದನ್ನು ಕಂಡು

ಸಾಧುಗಳಿಗೆ ಮರುಕವೇನೋ ಆಯಿತು. ಆದರೆ ಅದರ ಸಂಕಟವನ್ನು ನಿವಾರಿಸಲು ನೀರಿನ ಅನೂಕೂಲವಿಲ್ಲದೆ ಅವರೆಲ್ಲ ನಿರುಪಾಯರಾಗಿದ್ದರು. ಅವರಲ್ಲಿ ಒಬ್ಬನು ತನ್ನ ಕೈಯಲ್ಲಿದ್ದ ಗಂಗಾಪಾತ್ರೆಯನ್ನೇ ಒಡೆದು ಆ ನೀರನ್ನೇ ಒಂಟೆಯ ಬಾಯಿಗೆ ಸುರುವಿದನು. ರಾಮೇಶ್ವರನ ಅಭಿಷೇಕಕ್ಕಾಗಿ ಸಂಗ್ರಹಿಸಿದ್ದ ಗಂಗಾತೀರ್ಥವನ್ನು ಒಂಟೆಯ ಬಾಯಿಗೆ ಹಾಕಿದ ಬಗ್ಗೆ ಉಳಿದವರು ಆಕ್ಷೇಪಿಸಿದಾಗ ತನಗೆ ಈ ಒಂಟೆಯಲ್ಲೇ ರಾಮೇಶ್ವರನ ದರ್ಶನವಾಯಿತೆಂದೂ ಕಷ್ಟದಲ್ಲಿ ಸಿಲುಕಿದ ಪ್ರಾಣಿಗಳಿಗೆ ಮಾಡುವ ಉಪಕಾರವೂ ಈಶ್ವರನ ಪೂಜೆಯೇ ಆಗಿರುವುದೆಂದೂ ಆ ಸಾಧುವು ಅವರಿಗೆ ಬೋಧಿಸಿದನು. ಪರಮಾತ್ಮನು ನಮ್ಮಿಂದ ಬಹುದೂರದಲ್ಲಿ ಇಲ್ಲ; ನಮ್ಮ ಸೇವೆಯನ್ನು ಸ್ವೀಕರಿಸಲು ಸಿದ್ಧನಾಗಿ ನಮ್ಮ ಮುಂದೆಯೇ ಎಲ್ಲ ಪ್ರಾಣಿಗಳಲ್ಲಿ ನೆಲೆಸಿದ್ದಾನೆ. ಜನತೆಯಲ್ಲಿರುವ ಪರಮಾತ್ಮನನ್ನು ಗುರುತಿಸಿಕೊಂಡು ಲೋಕಾರಾಧನೆಯನ್ನು ಮಾಡುವುದೇ ವಿಶೇಷವಾದ ಪರಮಾತ್ಮನ ಪೂಜೆಯೆಂದು ಪ್ರಹ್ಲಾದನು ಉಪದೇಶಿಸಿರುವುದನ್ನು ಭಾಗವತದಲ್ಲಿ ವರ್ಣಿಸಲಾಗಿದೆ.

ಆದರೆ ಲೋಕಸೇವೆಯನ್ನು ಮಾಡುವಾಗಲೂ ಅಲ್ಲಿ ಪರಮಾತ್ಮನ ವಿಸ್ಮರಣೆಯು ಸಲ್ಲದು. ಯಾವುದೇ ಕಾರ್ಯಕ್ಕೆ ಹಿನ್ನೆಲೆಯಾಗಿ ಒಂದು ಉದ್ದೇಶವು ಇರಲೇಬೇಕಾಗುವುದು. ಭಗವಂತನನ್ನು ಮರೆತು ಅವನ ಪ್ರೀತಿಯ ಉದ್ದೇಶವಿಲ್ಲದೆ ಪ್ರವರ್ತಿಸಿದಾಗ ಸಹಜವಾಗಿ ಇತರ ಲೌಕಿಕ ಕಾಮನೆಗಳ ಉದಯವಾಗುವುದು ಅನಿವಾರ್ಯ. ಲೋಕಸೇವೆಯನ್ನು ಮಾಡುವಾಗಲೂ ಲೋಕದ ಅಂತರಂಗದಲ್ಲಿ ನೆಲೆಸಿದ ಭಗವಂತನ ಸೇವಾಭಾವನೆ ಇಲ್ಲದಿದ್ದರೆ ಅಲ್ಲಿಯೂ ಸ್ವಾರ್ಥಪ್ರವೃತ್ತಿಯ ಪ್ರವೇಶವಾಗಿ ಕೀರ್ತಿ, ಪ್ರತಿಷ್ಠೆ, ಅಧಿಕಾರ ಮೊದಲಾದವುಗಳ ಆಕಾಂಕ್ಷೆಯಿಂದ ಆ ಸೇವೆಯಲ್ಲಿ ಕೃತ್ರಿಮತೆಯು ನೆಲೆಸುವುದು. ಭಗವತ್ಪ್ರೀತ್ಯರ್ಥವಲ್ಲದ ಸ್ವಾರ್ಥಪೂರ್ಣ ಕಾರ್ಯಗಳೆಲ್ಲ ಎಷ್ಟೇ ಪರೋಪಕಾರಿಗಳಾಗಿದ್ದರೂ ಇವೆಲ್ಲ ಇಷ್ಟಾಪೂರ್ತಗಳಾಗಿದ್ದು ತಾತ್ಕಾಲಿಕ ಫಲಕಾರಿಗಳಾಗಿವೆ. ಆದುದರಿಂದ ಲೋಕಸೇವೆಯನ್ನು ಮಾಡುವಾಗಲೂ ಭಗವತ್ಸೇವಾದೃಷ್ಟಿ ಜಾಗೃತವಾಗಿರಬೇಕು.

ಉದ್ಧರೇದಾತ್ಮನಾಽಽತ್ಮಾನಂ ।

ಅಂತೂ ಗೀತೆಯಲ್ಲಿ ಇಷ್ಟರವರೆಗೆ ಹೇಳಿದ ರೀತಿಯಲ್ಲಿ ಕರ್ಮ ಯೋಗವನ್ನಾಚರಿಸಿದ ವ್ಯಕ್ತಿಯೇ ಧ್ಯಾನಯೋಗಕ್ಕೆ ಅಧಿಕಾರಿ ಎನಿಸುವನು. ಈ ಧ್ಯಾನಯೋಗವೇ ಮುಂದೆ ಅಪರೋಕ್ಷಜ್ಞಾನದ ಮೂಲಕ ಮುಕ್ತಿಸುಖಕ್ಕೆ ಕಾರಣವಾಗಿರುವುದರಿಂದ ಮನಸ್ಸನ್ನು ಸ್ವಾಧೀನಗೊಳಿಸಿ ಈ ಧ್ಯಾನಯೋಗದ ಬಗ್ಗೆ ವಿಶೇಷ ಅಭಿನಿವೇಶದಿಂದ ನಾವು ಪ್ರವೃತ್ತರಾಗಬೇಕು. ನಮ್ಮ ಉದ್ಧಾರದ ಕೀಲಿಕೈಯು ನಮ್ಮಲ್ಲಿಯೇ ಇದೆ.

ನಮಗೆ ಅತ್ಯಂತ ಪ್ರಿಯವಾದ ಆತ್ಮವಸ್ತುವನ್ನು ಸಾಂಸಾರಿಕ ಕ್ಲೇಶವಿದೂರ ವನ್ನಾಗಿ, ಪರಮಸುಖಭಾಜನವನ್ನಾಗಿ ಮಾಡುವುದು ನಮ್ಮ ಆದ್ಯ ಕರ್ತವ್ಯ ವಾಗಿದೆ. ನಮ್ಮ ಮನಸ್ಸಿನ ಮೂಲಕವೇ ನಾವು ಇದನ್ನು ಸಾಧಿಸಬೇಕು.

**ಮನ ಏವ ಮನುಷ್ಯಾಣಾಂ ಕಾರಣಂ ಬಂಧಮೋಕ್ಷಯೋಃ ।**

ನಮ್ಮ ಉದ್ಧಾರ ಹಾಗೂ ಅವನತಿಯ ಮೂಲವು ನಮ್ಮ ಮನಸ್ಸೇ ಆಗಿರುವುದು. ಆ ಮನಸ್ಸು ನಮ್ಮ ಶತ್ರುವೂ ಆಗಬಲ್ಲದು; ಮಿತ್ರನಾಗಿ, ಬಂಧುವಾಗಿ ನಮಗೆ ಆತ್ಯಂತಿಕ ಉಪಕಾರವನ್ನೂ ಮಾಡಬಲ್ಲದು. ಪೆಟ್ಟಿಗೆಯನ್ನು ಮುಚ್ಚಲೂ ತೆರೆಯಲೂ ಸಹಾಯಕವಾಗುವ ಬೀಗದ ಕೈಯಂತೆ ಮನಸ್ಸೇ ಬಂಧ ಮೋಕ್ಷಗಳಿಗೆ ಕಾರಣ. ಹೀಗೆ ನಮ್ಮ ಉದ್ಧಾರದ ಕೀಲಿಕೈಯು ನಮ್ಮಲ್ಲಿಯೇ ಇರುವಾಗ ನಾವು ಉತ್ಸಾಹದಿಂದ ಮುಕ್ತಿಸಾಧನೆಯ ಬಗ್ಗೆ ಏಕೆ ಮುನ್ನಡೆಯಬಾರದು? ಆದರೆ ಈ ಮನಸ್ಸು ದೊಡ್ಡ ಆನೆಯಂತೆ ಇದೆ. ಪಳಗಿದ ಆನೆಯಿಂದ ನಾವು ಬೇಕಾದ ಕೆಲಸಗಳನ್ನು ಸಾಧಿಸಬಹುದು. ಆದರೆ ಆನೆ ಪಳಗಿರದಿದ್ದರೆ ಅದೇ ನಮಗೆ ಮಾರಕವೂ ಆಗಬಹುದು. ಮನಸ್ಸಿನ ಮೇಲೆ ನಿಯಂತ್ರಣವನ್ನು ಸಾಧಿಸಿದಲ್ಲಿ ಅದು ನಮಗೆ ಪರಮಮಿತ್ರನಾಗಿ ಪರಿಣಮಿಸುವುದು. ಆದರೆ ಪಳಗದಿರುವ ಅನಿಯಂತ್ರಿತ ಮನಸ್ಸು ಮಹಾ ಶತ್ರುವಾಗಿ ಸಂಸಾರದ ಪ್ರಪಾತದಲ್ಲಿ ನಮ್ಮನ್ನು ಒಗೆಯಬಹುದು. ಈ ವಿಷಯದಲ್ಲಿ ನಾವು ಬಹಳ ಜಾಗರೂಕರಾಗಿ ವರ್ತಿಸಬೇಕು.

ನಮ್ಮ ಶತ್ರುಮಿತ್ರರಿಬ್ಬರೂ ನಮ್ಮಲ್ಲೇ ಇರುವರು. ನಮ್ಮ ಶತ್ರುಗಳು ಹೊರಗಿರುವರೆಂದು ಹೊರಗಿನ ಜನರಲ್ಲಿ ನಾವೇಕೆ ದ್ವೇಷಾಸೂಯೆಗಳನ್ನು

ಮಾಡಬೇಕು? ಸ್ವಾರ್ಥಿ ಭಕ್ತನೊಬ್ಬನು "ದೇವ, ನಿನ್ನ ಆಯುಧಗಳು ನನ್ನ ಶತ್ರುಗಳ ಮೇಲೆ ಎರಗಲಿ!" ಎಂದು ದೇವರನ್ನು ಪ್ರಾರ್ಥಿಸಿದ. ಆಯುಧಗಳು ಅವನ ಮೇಲೆಯೇ ಬೀಳಲು ಅಣಿಯಾದಾಗ ಗಾಬರಿಯಿಂದ ಆ ಭಕ್ತನು ಭಗವನ್, ನನ್ನ ಶತ್ರುಗಳ ಮೇಲೆ ಪ್ರಯೋಗಿಸಬೇಕೆಂದು ನಾನು ಕೇಳಿರುವಾಗ ನನ್ನ ಮೇಲೆಯೇ ಈ ಆಯುಧಗಳ ಪ್ರಯೋಗವೇಕೆ ನಡೆದಿದೆ? ನಿನ್ನ ಗುರಿ ತಪ್ಪಿದೆಯೆ? ಎಂದು ಪ್ರಶ್ನಿಸಿದನು. "ನನ್ನ ಗುರಿ ಏನೂ ತಪ್ಪಿಲ್ಲ. ನಿನ್ನ ಮೊದಲ ಶತ್ರುವು ನಿನ್ನಲ್ಲಿಯೇ ಇರುವನು. ಅದಕ್ಕಾಗಿ ನಿನ್ನ ಪ್ರಾರ್ಥನೆಯಂತೆ ನಿನ್ನ ಮೇಲೆಯೇ ಈ ಶಸ್ತ್ರದ ಪ್ರಹಾರ" ಎಂದು ಭಗವಂತನು ಉತ್ತರಿಸಿದನಂತೆ. ಅರ್ಥಾತ್ ನಮ್ಮ ಶತ್ರುವು ನಮ್ಮಲ್ಲಿಯೇ ಅಡಗಿರುವನೆಂದು ಭಾವಿಸಿ ನಮ್ಮನ್ನು ಸುಧಾರಿಸಿಕೊಳ್ಳಲು ನಾವು ಪ್ರಯತ್ನಿಸಬೇಕಲ್ಲದೆ ದ್ವೇಷಜರ್ಝರಿತರಾಗಿ ಶತ್ರುಗಳೆಂದು ಬೇರೆ ಜನರಲ್ಲಿ ಪ್ರತೀಕಾರಭಾವನೆಯನ್ನು ಬೆಳೆಸಿ ನಮ್ಮ ಅಮೂಲ್ಯ ಜೀವನವನ್ನು ಹಾಳುಗೆಡವಬಾರದು. ನಮ್ಮ ಪ್ರಥಮ ಶತ್ರುವೆನಿಸಬಹುದಾದ ಮನಸ್ಸಿನ ಮೇಲೆ ವಿಜಯ ಸಾಧಿಸಿ, ಜೀವನದಲ್ಲಿ ಆಧ್ಯಾತ್ಮಿಕ ಪ್ರಗತಿಯನ್ನು ಸಾಧಿಸುವುದೇ ನಮ್ಮ ಪರಮ ಕರ್ತವ್ಯವಾಗಿದೆ.

ಧ್ಯಾನಯೋಗದಲ್ಲಿ ಯಶಸ್ವಿಯಾಗಲು ಮನೋನಿಗ್ರಹವು ಆವಶ್ಯಕವಿರುವಂತೆ ಭಗವಂತನ ಅನುಗ್ರಹವೂ ಬೇಕು. ನಾವು ಭಕ್ತಿ, ಸ್ವಕರ್ತವ್ಯಗಳಿಂದ ಅವನನ್ನು ಪ್ರಸನ್ನಗೊಳಿಸಿದರೆ ಮಾತ್ರ ಧ್ಯಾನಕ್ಕೆ ಅವಶ್ಯವೆನಿಸಿದ ಮಾನಸಿಕ ಬಲವನ್ನು ಅವನು ನೀಡುವನು. ಅವನ ಅನುಗ್ರಹಬಲವಿಲ್ಲದೆ ಕೇವಲ ಸ್ವಪ್ರಯತ್ನದಿಂದಲೇ ಅವನನ್ನು ಧ್ಯಾನಿಸಲೂ ಸಾಕ್ಷಾತ್ಕರಿಸಲೂ ಸಾಧ್ಯವಿಲ್ಲ.

**ಯಮೇವೈಷ ವೃಣುತೇ ತೇನ ಲಭ್ಯಃ ।**

ಕಠೋಪನಿಷತ್ತು

ಎಂದು ಉಪನಿಷತ್ತಿನಲ್ಲಿ ಅವನ ಅನುಗ್ರಹದಿಂದಲೇ ನಮಗೆ ಅವನ ದರ್ಶನ ಲಾಭವೆಂದು ಹೇಳಲಾಗಿದೆ. ನಮ್ಮ ಭಕ್ತಿ, ಧರ್ಮಗಳಿಗೊಲಿದು ನಮಗೆ ಮೋಕ್ಷದಾತನಾಗಬಹುದಾದ ಪರಮಾತ್ಮನು ನಮ್ಮ ಸ್ವೇಚ್ಛಾವೃತ್ತಿ ಹಾಗೂ ಲೋಕಘಾತಕ ಪ್ರವೃತ್ತಿಯಿಂದ ಮುನಿದರೆ ನಮಗೆ ಆತನು ಮಿತ್ರನಾಗಿ

ಉಳಿಯಲಾರ. ಭಗವಂತನಿಂದ ನಾವು ಘೋರ ಶಿಕ್ಷೆಯನ್ನೇ ಅನುಭವಿಸ ಬೇಕಾಗುತ್ತದೆ. ಆದುದರಿಂದ ಭಗವಂತನ ಒಲವನ್ನು ಪಡೆಯಲು ಅವನು ಜಗತ್ತಿನ ಹಿತಕ್ಕಾಗಿ ಏರ್ಪಡಿಸಿದ ನಿಯಮ, ಶಿಸ್ತುಗಳನ್ನು ನಿಷ್ಠೆಯಿಂದ ಅನುಸರಿಸುವುದೂ ಆತ್ಮದ ಪ್ರಗತಿಗೆ ಅವಶ್ಯವಾಗಿದೆ.

ಹೀಗೆ ಕರ್ತವ್ಯನಿಷ್ಠೆ, ಮನೋನಿಗ್ರಹ, ಹರಿಪ್ರಸಾದ ಈ ತ್ರಿವಿಧ ಸಾಧನೆಗಳಿಂದ ಧ್ಯಾನಯೋಗದ ಮಾರ್ಗದಲ್ಲಿ ನಡೆಯಲು ಉಪಕ್ರಮಿಸಬೇಕು.

## ಧ್ಯಾನಯೋಗದ ಸ್ವರೂಪ ಮತ್ತು ವಿಧಾನ

ತನ್ನ ಮಾನಸಿಕ ಪ್ರಸನ್ನತೆಗೆ ಅನುಕೂಲವಾದ ಪ್ರದೇಶದಲ್ಲಿ ವಸ್ತ್ರ, ಅಜಿನ, ದರ್ಭಗಳ ಮೇಲೆ ಸ್ಥಿರವಾದ ಯೋಗ್ಯ ಆಸನದಲ್ಲಿ ಕುಳಿತು ಇಂದ್ರಿಯವ್ಯಾಪಾರಗಳನ್ನು ನಿಯಮಿಸಿಕೊಂಡು ಏಕಾಗ್ರ ಮನಸ್ಸಿನಿಂದ ಧ್ಯಾನವನ್ನು ಆರಂಭಿಸಬೇಕು. ಸುತ್ತಮುತ್ತಲೂ ಕಣ್ಣು ಹರಿಸದೆ ಮೂಗಿನ ತುದಿಯನ್ನೇ ನೋಡುತ್ತ ಮನಸ್ಸನ್ನು ಏಕಾಗ್ರಗೊಳಿಸಲು ಪ್ರಯತ್ನಿಸಬೇಕು. ಶರೀರವು ಸರಳವಾಗಿರಬೇಕು. ಶರೀರವು ಚಲಿಸಿದಂತೆ ಮನಸ್ಸೂ ಹರಿದಾಡಲು ಉಪಕ್ರಮಿಸುವುದು. ಈ ಧ್ಯಾನಯೋಗಕ್ಕೆ ಅನುಕೂಲವಾಗುವಂತೆ ಶರೀರದ ಸುಸ್ಥಿತಿಯ ಕಡೆಗೂ ಗಮನ ಕೊಡಬೇಕು. ಯೋಗವಿಘಾತಕವಾಗುವಂತಹ ಕಾಯಕ್ಲೇಶಕರವಾದ ವ್ಯಾಪಾರವನ್ನು ತೊರೆಯಬೇಕು. ಅತಿ ಆಹಾರಸೇವನೆಯೂ ಸಲ್ಲದು; ನಿರಾಹಾರನಾಗಿ ಶಕ್ತಿಹ್ರಾಸವನ್ನೂ ತಂದುಕೊಳ್ಳ ಬಾರದು. ವೃಥಾ ನಿದ್ರಾತ್ಯಾಗದಿಂದಲೂ ಅತಿಯಾದ ನಿದ್ರೆಯಿಂದಲೂ ಯೋಗಾಭ್ಯಾಸಕ್ಕೆ ಹಾನಿಯೇ ಒದಗುವುದು. ಉಚಿತವಾದ ಪ್ರಮಾಣದಲ್ಲಿ ಆಹಾರ, ನಿದ್ರಾ, ವಿಹಾರಗಳನ್ನು ಕೈಗೊಂಡು ನಿಯಮಬದ್ಧ ಜೀವನವನ್ನು ನಡೆಸಿದರೆ ಧ್ಯಾನಯೋಗಕ್ಕೆ ಹಿತವಾದ ಶರೀರ ಸ್ಥಿತಿಯನ್ನು ಪಡೆಯಬಹುದು. ಗಾಳಿಯಿಂದ ಪ್ರತಿಕ್ಷಣವೂ ದೀಪವು ಚಲಿಸುತ್ತಿರುವಂತೆ ವಿಷಯ ಪದಾರ್ಥಗಳ ಸಂಪರ್ಕದಿಂದ ಮನಸ್ಸು ವಿಕಾರವಶವಾಗುತ್ತಲೇ ಇರುತ್ತದೆ. ಗಾಳಿ ಇಲ್ಲದ ಕಡೆ ನಿಶ್ಚಲವಾಗಿರುವ ದೀಪದಂತೆ ಯೋಗಿಯದು ವಿಷಯವಿಮುಕ್ತವಾದ ಮನಸ್ಸು. ಭಗವಂತನನ್ನು ಹೊರತು ಬೇರೆ ಯಾವುದೂ ಆತನಿಗೆ ಕಾಣುವುದಿಲ್ಲ. ನಿಶ್ಚಲ

ಮನಸ್ಸಿನಿಂದ ಭಗವಂತನನ್ನೇ ಚಿಂತಿಸುತ್ತಿರುವಾಗ ಅನುಭವಮಾತ್ರ ವೇದ್ಯವಾದ ಇಂದ್ರಿಯಾತೀತ ಅತಿಶಯಿತ ಆನಂದವನ್ನು ಯೋಗಿಯು ಪಡೆಯುವನು. ಅದಕ್ಕಿಂತ ಮಿಗಿಲಾದ ಆನಂದವು ಪ್ರಪಂಚದಲ್ಲಿ ಆತನಿಗೆ ಎಲ್ಲಿಯೂ ದೊರೆಯಲಾರದು. ಭೋಗದ ಸುಖಕ್ಕಿಂತಲೂ ತ್ಯಾಗದ ಸುಖ ಮಿಗಿಲಾಗಿದ್ದರೆ ಅದಕ್ಕೂ ಪೂರ್ಣತೆಯ ಸೊಬಗನ್ನು ನೀಡುವ ಈ ಯೋಗದ ಆನಂದವು ನಾವು ಜೀವನದಲ್ಲಿ ಪಡೆಯಬಹುದಾದ ಆನಂದದ ಗೌರೀಶಂಕರವೆನಿಸಿದೆ.

ತೂತುಗಳಿಂದ ತುಂಬಿರುವ ಪಾತ್ರದಲ್ಲಿ ನೀರು ನಮಗೆ ಅರಿಯದಂತೆಯೇ ಸೋರಿಹೋಗುವಂತೆ ನಮ್ಮ ಮನಸ್ಸಿನ ಸ್ಥಿತಿಯಾಗಿದೆ. ಉತ್ತಮ ವಿಚಾರಗಳೆಲ್ಲ ನಮ್ಮ ಚಿತ್ತದಲ್ಲಿ ಕ್ಷಣಮಾತ್ರದಲ್ಲಿ ಮಾಯವಾಗುವವು. ಯೋಗಿಯು ಮನಸ್ಸಿನ ಶತಚ್ಛಿದ್ರಗಳನ್ನೆಲ್ಲ ತುಂಬಿ ಭಗವದ್‌ಜ್ಞಾನದ ಅಮೃತಜಲಧಾರೆಯಿಂದ ತನ್ನ ಹೃದಯಕುಂಭವನ್ನು ತುಂಬಿಕೊಳ್ಳುವನು. ಜ್ಞಾನದ ಒಂದು ಬಿಂದುವೂ ಹೊರಗೆ ಸೋರಿ ಹೋಗದಂತೆ ಅವನು ಜಾಗೃತನಾಗಿರುವನು.

**ಯತೋ ಯತೋ ನಿಸ್ಸರತಿ ಮನಶ್ಚಂಚಲಮಸ್ಥಿರಂ ।**
**ತತಸ್ತತೋ ನಿಯಮ್ಯೈತತ್ ...**

ಇಂತಹ ಅವಿರತ ಜಾಗರೂಕ ಪ್ರಯತ್ನದಿಂದ ಪರಮಾತ್ಮನ ಪೂರ್ಣಚಿತ್ರವನ್ನು ಚಿತ್ತಭಿತ್ತಿಯಲ್ಲಿ ಅವನು ಮೂಡಿಸಿಕೊಳ್ಳುವನು. ಭಗವಂತನ ನಿರಂತರ ಚಿಂತನ ದಿಂದಲೇ ಕ್ರಮದಿಂದ ಅಪರೋಕ್ಷ ದರ್ಶನವಾಗುವುದು. ಈ ಅಪರೋಕ್ಷ ಜ್ಞಾನವೇ ಜೀವನದಲ್ಲಿ ನಾವು ಪಡೆಯಬಹುದಾದ ಅಮೂಲ್ಯ ಫಲ. ಅಪರೋಕ್ಷ ಜ್ಞಾನಿಯು, ಎಲ್ಲರಲ್ಲಿ ಭಗವಂತನನ್ನೂ ಭಗವಂತನಲ್ಲಿಯೇ ಎಲ್ಲವನ್ನೂ ಕಾಣುವನು. ಪರಮಾತ್ಮನು ಎಲ್ಲರಿಗೂ ಆಧಾರನೆನಿಸಿ ಎಲ್ಲರ ಹೊರಗೂ ವ್ಯಾಪಿಸಿರುವಂತೆ ಅಂತರ್ಯಾಮಿಯಾಗಿ ಪ್ರೇರಕನಾಗಿ ಎಲ್ಲರ ಒಳಗೂ ನೆಲೆಸಿರುತ್ತಾನೆ.

**ತದಂತರಸ್ಯ ಸರ್ವಸ್ಯ ತದು ಸರ್ವಸ್ಯ ಬಾಹ್ಯತಃ ।**

**ಈಶೋಪನಿಷತ್**

ಹೀಗೆ ಒಳಗೂ ಹೊರಗೂ ಎಲ್ಲೆಲ್ಲಿಯೂ ಪರಮಾತ್ಮನ ದರ್ಶನವೇ

ಸಮಾಧಿಸ್ಥನಿಗೆ ದೊರಕುವುದು. ಪರಮಾತ್ಮನೆಂಬ ಅಮೃತ ಸಮುದ್ರದಲ್ಲಿ ಮೀನಿನಂತೆ ಈ ಸಮಾಧಿಸ್ಥನು ಈಸುವನು.

**ಯೋ ಮಾಂ ಪಶ್ಯತಿ ಸರ್ವತ್ರ ಸರ್ವಂ ಚ ಮಯಿ ಪಶ್ಯತಿ ।**

ಹೀಗೆ ಹರಿಯನ್ನು ಸಕಲ ಜಗತ್ತಿನ ಆಧಾರನೆಂದೂ ಅಂತರ್ಗತನೆಂದೂ ಕಂಡು ಆನಂದಿಸುವ ಸ್ಥಿತಿಯೇ ಭಕ್ತಿಯ ಪರಮ ಚರಮಾವಸ್ಥೆಯಾಗಿದ್ದು ಧ್ಯಾನಯೋಗವೇ ಇದರ ಪ್ರಧಾನ ಸಾಧನವಾಗಿದೆ.

ಧ್ಯಾನದ ಅವಸ್ಥೆಯಲ್ಲಿ ನಮಗೆ ತೋರುವ ವಸ್ತುವೇ ಭಗವಂತನಲ್ಲ. ಗುರುಗಳ ಉಪದೇಶದಿಂದ ನಮಗೆ ಪರಮಾತ್ಮ ಸ್ವರೂಪದ ಸುದೃಢ ಜ್ಞಾನವಾಗಿರುತ್ತದೆ. ಆ ಸಂಸ್ಕಾರದ ಬಣ್ಣದಿಂದ ನಾವು ರೂಪಿಸುವ ಚಿತ್ರವೇ ಧ್ಯಾನದ ಕಾಲದಲ್ಲಿ ನಮಗೆ ಗೋಚರವಾಗುತ್ತದೆ. ಸಂಸ್ಕಾರಮಯವಾದ ಈ ಚಿತ್ರವೇ ಜ್ಞಾನಾನಂದಮಯವಾದ ಭಗವಂತನ ರೂಪವೆಂದು ನಾವು ಭಾವಿಸಬಾರದು. ಹೊರಗೆ ನಾವು ಪೂಜಿಸುವ ಕಲ್ಲಿನ ಪ್ರತಿಮೆಯೇ ದೇವರಾಗಿರದೆ ಅದು ಅವನ ಪ್ರತೀಕವಾಗಿರುವಂತೆ ಧ್ಯಾನದಲ್ಲಿ ಮನಸ್ಸಿನ ಮೇಲೆ ಮೂಡುವ ಚಿತ್ರವೂ ದೇವರ ಪ್ರತಿಮೆ ಎಂದೇ ಭಾವಿಸಿ ಅದಕ್ಕಿಂತ ಬೇರೆಯಾದ ಚಿನ್ಮಯರೂಪವನ್ನೇ ನಾವು ಚಿಂತಿಸಬೇಕು.

**ನೇದಂ ಯದಿದಮುಪಾಸತೇ ।**

ತಲವಕಾರೋಪನಿಷತ್

ಉಪಾಸನೆಯ ಕಾಲದಲ್ಲಿ ಮನಸ್ಸಿನಲ್ಲಿ ಚಿತ್ರಿತವಾಗುವ ರೂಪವೇ ದೇವರಲ್ಲ. ಆದುದರಿಂದ ಧ್ಯಾನದ ಕಾಲದಲ್ಲಿ ನಮಗೆ ಪರಮಾತ್ಮನ ದರ್ಶನವಾಗುವುದಿಲ್ಲ. ಆಗ ಪರಮಾತ್ಮನ ಈ ಮಾನಸ ಪ್ರತೀಕದ ದರ್ಶನವೂ ಅವನ ಚಿದಾನಂದಮಯ ರೂಪದ ಸ್ಮರಣೆಯೂ ಅಖಂಡವಾಗಿ ನಡೆಯುತ್ತದೆ. ಈ ಧ್ಯಾನದ ಪರಾಕಾಷ್ಠೆಯನ್ನು ತಲುಪಿದ ಮೇಲೆಯೇ ಚಿದಾನಂದರೂಪಿಯಾದ ಭಗವಂತನ ಸಾಕ್ಷಾದ್ದರ್ಶನವು ಯೋಗಿಗೆ ದೊರೆಯುವುದು. ಪರೋಕ್ಷಜ್ಞಾನದ ಚರಮ ಸೀಮೆಯೇ ಧ್ಯಾನವಾಗಿದ್ದು ಪರಮಾತ್ಮನ ಈ ಏಕಾಗ್ರವಾದ ನಿರಂತರ ಚಿಂತನದಿಂದಲೇ ಒಂದು ದಿವ್ಯವಾದ ಅಲೌಕಿಕ ಆನಂದದ ಅನುಭವವು

ಅವನಿಗಾಗುವುದು. ಈ ಧ್ಯಾನಾವಸ್ಥೆಯ ಕೊನೆಯ ಹಂತವನ್ನು ತಲುಪಿದಾಗ ಪರಮಾತ್ಮನ ದಿವ್ಯಮೂರ್ತಿಯೇ ದೃಗ್ಗೋಚರವಾಗುವಂತಹ ಅಪರೋಕ್ಷಾನುಭವ ಸೌಭಾಗ್ಯವೂ ಅವನಿಗೆ ಪ್ರಾಪ್ತವಾಗುವುದು. ಧ್ಯಾನದ ಮಹಾಫಲವೇ ಅಪರೋಕ್ಷಾನುಭವವಾಗಿದೆ.

ಧ್ಯಾನಯೋಗದ ಸ್ಥಿತಿಯಲ್ಲಿ ಪರಮಾತ್ಮನ ಸ್ವರೂಪದ ಹೊರತು ಬೇರೆ ಯಾವ ಪದಾರ್ಥಗಳೂ ಚಿತ್ತದಲ್ಲಿ ಸುಳಿಯಬಾರದು. ಹೀಗೆ ಭಗವದ್ವಿಷಯಕವಾದ ಅಖಂಡ ಚಿತ್ತವೃತ್ತಿಯೇ ಧ್ಯಾನವಾಗಿದೆ.

ದ್ರೋಣಾಚಾರ್ಯರು ರಾಜಕುಮಾರರಿಗೆ ಧನುರ್ವಿದ್ಯೆಯ ಪರೀಕ್ಷೆಯನ್ನು ಮಾಡುವ ಸಂದರ್ಭದಲ್ಲಿ ಒಂದು ದೊಡ್ಡ ಮರದಲ್ಲಿ ಕೃತಕ ಹಕ್ಕಿಯನ್ನಿಟ್ಟು ಅದರ ಕಣ್ಣಿಗೆ ಗುರಿಯಿಟ್ಟು ಬಾಣಪ್ರಯೋಗ ಮಾಡಲು ಶಿಷ್ಯರಿಗೆ ಆದೇಶ ನೀಡಿದರು. ಗುರಿ ಹೊಡೆಯಲು ನಿಂತ ಪ್ರತಿಯೊಬ್ಬರಲ್ಲಿಯೂ ''ನಿಮಗೆ ಅಲ್ಲಿ ಏನು ತೋರುತ್ತಿದೆ?'' ಎಂದು ಕೇಳಲು ಎಲ್ಲರೂ ಎದುರಿಗೆ ನಿಂತಿರುವ ಮರ ಮತ್ತು ಅದರ ಶಾಖೋಪಶಾಖೆಗಳನ್ನು ವರ್ಣಿಸಿ ಹೇಳಿದರು. ಅರ್ಜುನನಿಗೆ ಮಾತ್ರ ಎದುರಿಗಿರುವ ಕೃತಕ ಹಕ್ಕಿಯ ಕಣ್ಣಿನ ವಿನಾ ಬೇರೇನೂ ತೋರಲಿಲ್ಲವಂತೆ. ಸಾಧನೆಯಲ್ಲಿ ಅರ್ಜುನನ ಈ ಏಕಾಗ್ರದೃಷ್ಟಿಯನ್ನು ನಾವು ಅಳವಡಿಸಿ ಕೊಳ್ಳಬೇಕು. ಧನುರ್ಧಾರಿಯು ಉಳಿದ ಕಡೆಗೆ ಕಣ್ಣು ಹಾಯಿಸದೆ ಗುರಿಯ ಕಡೆಗೆ ಮಾತ್ರ ತನ್ನ ದೃಷ್ಟಿಯನ್ನು ಕೇಂದ್ರೀಕರಿಸುವಂತೆ ಉಳಿದೆಲ್ಲವನ್ನೂ ಮರೆತು ಬ್ರಹ್ಮನೊಬ್ಬನನ್ನೇ ಚಿತ್ತಪಟಲದಲ್ಲಿ ಚಿತ್ರಿಸಬಲ್ಲವನೇ ಧ್ಯಾನದಲ್ಲಿ ಯಶಸ್ವಿಯಾಗಬಲ್ಲನು. ಗಣಪತಿಯ ಚಿತ್ರವನ್ನು ಬರೆಯಲು ಉಪಕ್ರಮಿಸಿ ಅದು ಒಂದು ಕಪಿಯ ಚಿತ್ರವಾಗಿ ಪರಿಣಮಿಸಿದಂತೆ ನಮ್ಮ ಸ್ಥಿತಿಯಾಗಿದೆ. ದೇವರ ಧ್ಯಾನಕ್ಕೆ ಕುಳಿತ ನಮ್ಮ ಮನೋರಂಗದಲ್ಲಿ ದೇವರ ಬದಲು ಬೇರೆ ಏನೇನೋ ವಿಕೃತ ಚಿತ್ರಗಳೇ ಕುಣಿದಾಡುತ್ತವೆ. ಪರಮಾತ್ಮನೊಬ್ಬನೇ ನಮ್ಮ ಹೃದಯಸಿಂಹಾಸನದಲ್ಲಿ ವಿರಾಜಮಾನನಾಗುವಂತೆ ಮಾನಸಿಕ ಏಕಾಗ್ರತೆಯನ್ನು ನಾವು ಸಾಧಿಸಬೇಕು.

ಪ್ರಣವೋ ಧನುಃ ಶರೋ ಹ್ಯಾತ್ಮಾ
ಬ್ರಹ್ಮ ತಲ್ಲಕ್ಷ್ಯಮುಚ್ಯತೇ ।

**ಅಪ್ರಮತ್ತೇನ ವೇದ್ಧವ್ಯಂ**
**ಶರವತ್ತನ್ಮಯೋ ಭವೇತ್ ॥**

ಆಥರ್ವಣೋಪನಿಷತ್

ನಮ್ಮ ಮನಸ್ಸು ಒಂದು ಬಾಣವಾಗಿದೆ. ಬ್ರಹ್ಮನ ಕಡೆಗೆ ಗುರಿಯಿಟ್ಟು ಇದನ್ನು ಪ್ರಯೋಗಿಸಬೇಕು. ಧನುಸ್ಸಿನ ಆಸರೆಯಿಲ್ಲದಿದ್ದರೆ ಬಾಣವು ಗುರಿಯನ್ನು ಮುಟ್ಟಲಾರದೆ ಮಧ್ಯದಲ್ಲಿಯೇ ಕೆಳಗೆ ಬೀಳುತ್ತದೆ. ಧನುಸ್ಸಿನ ಆಧಾರದಿಂದಲೇ ಅದು ವೇಗವನ್ನು ಪಡೆಯಬಲ್ಲದು. ಮನಸ್ಸೂ ವೇಗವನ್ನು ದೊರಕಿಸಿಕೊಳ್ಳಲು ವೇದದ ಆಸರೆಯನ್ನು ಪಡೆಯಬೇಕು. ವೇದದ ಅಧ್ಯಯನದಿಂದ ಶಕ್ತಿ ಸಂಪನ್ನವಾದ ಮನಸ್ಸು ಬ್ರಹ್ಮನ ಕಡೆಗೆ ವೇಗದಿಂದ ಸಾಗಬಹುದು. ವೇದವೇ ಇದಕ್ಕೆ ಧನುಸ್ಸು. ಬಾಣವನ್ನು ಬಿಡುವಾಗ ಗುರಿಕಾರನಿಗೆ ಸ್ಥಿರದೃಷ್ಟಿಯಿರಬೇಕಾಗುವಂತೆ ಅಪ್ರಮತ್ತನಾಗಿ ಅನ್ಯ ವ್ಯಾಸಂಗವಿಲ್ಲದೆ ಪರಮಾತ್ಮನ ಕಡೆಗೆ ಚಿತ್ತವೃತ್ತಿಯ ನಿರಂತರ ಧಾರೆಯನ್ನು ಹರಿಸಬೇಕು.

## ಧ್ಯಾನ ಮಾರ್ಗವು ಕಠಿಣ, ಆದರೆ ನಿರಪಾಯ

ಗೀತೆಯಲ್ಲಿ ಹಾಗೂ ಉಪನಿಷತ್ತಿನಲ್ಲಿ ಹೇಳಿರುವ ಈ ಧ್ಯಾನಯೋಗವನ್ನಾಚರಿಸುವುದು ನಿಜಜೀವನದಲ್ಲಿ ನಮಗೆ ಬಹಳ ಕಠಿಣವೆನಿಸುತ್ತದೆ. ಮನಸ್ಸು ಮರ್ಕಟನಂತಿದೆ. ಗಾಳಿಯನ್ನು ಒಂದೇ ಕಡೆ ಶೇಖರಿಸಿಡುವುದು ಹೇಗೋ ಹಾಗೆ ಮನಸ್ಸಿನ ಕೇಂದ್ರೀಕರಣವೂ ಕೈಲಾಗದ ಕಾರ್ಯವೆಂದು ನಮಗನಿಸುತ್ತದೆ. ಎಷ್ಟು ಪ್ರಯತ್ನಿಸಿದರೂ ಮನಸ್ಸು ಅಚಲವಾಗಿ ಭಗವಂತನಲ್ಲಿ ನೆಲೆನಿಲ್ಲುವಂತೆ ಮಾಡಲು ನಮಗೆ ಸಾಧ್ಯವಾಗುತ್ತಿಲ್ಲ. ಮನಸ್ಸಿನಲ್ಲಿರುವ ಈ ಚಂಚಲತೆಯು ಧ್ಯಾನಯೋಗದಲ್ಲಿ ನಮ್ಮನ್ನು ತೀರ ಅಸಮರ್ಥರನ್ನಾಗಿ ಮಾಡಿದೆ. ಇದು ನಮ್ಮೆಲ್ಲರನ್ನೂ ಕಾಡಿಸುತ್ತಿರುವ ಅನಾದಿಯಾದ ಸಮಸ್ಯೆಯಾಗಿದೆ. ನಮ್ಮೆಲ್ಲರ ಪರವಾಗಿಯೇ ಅರ್ಜುನನು ಈ ಪ್ರಶ್ನೆಯನ್ನು ಭಗವಂತನ ಮುಂದಿಡುತ್ತಾನೆ.

**ಚಂಚಲಂ ಹಿ ಮನಃ ಕೃಷ್ಣ ಪ್ರಮಾಥಿ ಬಲವದ್ ದೃಢಂ ।**

ಶ್ರೀಕೃಷ್ಣನು ಮನಸ್ಸಿನ ಈ ಕುಚೇಷ್ಟೆಯನ್ನು ಎದುರಿಸಲು ಎರಡು

ಮಾರ್ಗಗಳನ್ನು ಬೋಧಿಸಿದ್ದಾನೆ. ಒಂದು ನಿರಂತರ ಅಭ್ಯಾಸ, ಇನ್ನೊಂದು ವಿಷಯವೈರಾಗ್ಯ. ನಮ್ಮ ಮನಸ್ಸಿನೊಳಗೆ ಪರಮಾತ್ಮ ಕಾಲಿಡಲೇ ಸಾಧ್ಯವಿಲ್ಲ. ವಿಷಯಾಸಕ್ತಿಯ ಹೊಲಸಿನಿಂದ ಅದು ತುಂಬಿಹೋಗಿದೆ. ಮೊದಲು ನಮ್ಮಲ್ಲಿ ಅಂಟಿಕೊಂಡಿರುವ ಈ ಕಿಲುಬನ್ನು ತೆಗೆದು ಅಂತರಂಗವನ್ನು ಪರಿಶುದ್ಧಿಗೊಳಿಸಿದರೆ ನಮ್ಮ ಹೃದಯಮಂದಿರಕ್ಕೆ ಪರಮಾತ್ಮನನ್ನು ಸ್ವಾಗತಿಸಲು ನಮಗೆ ಏನೂ ಕ್ಲೇಶ, ಸಂಕಟಗಳೆನಿಸವು. ವಿಷಯ ಪ್ರೇಮವಿರುವವರೆಗೆ ಪರಮಾತ್ಮನ ಪ್ರೇಮ ಉದಯಿಸಲಾರದು. ಪರಮಾತ್ಮನನ್ನು ಸ್ಮರಿಸಬೇಕೆಂದರೂ ಅವನನ್ನು ಸುಲಭವಾಗಿ ಮರೆಯುತ್ತಿರುವೆವು. ಆದರೆ ವಿಷಯಪದಾರ್ಥಗಳನ್ನು ಮರೆಯಬೇಕೆಂದು ಪ್ರಯತ್ನಿಸಿದರೂ ಅವುಗಳ ವಿಚಾರವನ್ನು ತಲೆಯಿಂದ ಹೊರಗೆ ಹಾಕಲು ಸಾಧ್ಯವಾಗುತ್ತಿಲ್ಲ. ವಿಷಯ ಪ್ರೇಮವು ಅಷ್ಟು ಸುದೃಢವಾಗಿ ನಮ್ಮ ಮನಸ್ಸಿನಲ್ಲಿ ಬೇರೂರಿದೆ. ಧ್ಯಾನದಲ್ಲಿ ನಾವು ಯಶಸ್ವಿಯಾಗದಿರುವುದಕ್ಕೆ ಈ ಲೌಕಿಕ ಪ್ರೇಮದ ಒತ್ತಡ ಹಾಗೂ ಪರಮಾತ್ಮನ ಪ್ರೇಮದ ಅಭಾವಗಳೇ ಕಾರಣಗಳಾಗಿವೆ. ನಾವು ನಮ್ಮ ಮಡದಿ, ಮಕ್ಕಳು, ಮನೆ, ಮಹಡಿಗಳಲ್ಲಿ ಮಾಡುವಷ್ಟು ಪ್ರೀತಿಯನ್ನು ಪರಮಾತ್ಮನಲ್ಲಿ ಮಾಡದಿರುವಾಗ ನಾವು ಹೇಗೆ ಅವನ ಧ್ಯಾನವನ್ನು ಮಾಡಬಲ್ಲೆವು? ಎಲ್ಲಿ ಪ್ರೇಮವಿದೆಯೋ ಅಲ್ಲಿ ಮನಸ್ಸು ಕ್ರೇಂದ್ರೀಕೃತವಾಗಲು ಏನೂ ಪ್ರಯಾಸವಾಗುವುದಿಲ್ಲ. ನಮಗೆ ಪ್ರಿಯವಾದ ಲೌಕಿಕ ವಸ್ತುಗಳನ್ನು ಎಲ್ಲ ದೈನಂದಿನ ವ್ಯವಹಾರಗಳ ಮಧ್ಯದಲ್ಲೂ ಸ್ವಪ್ನದಲ್ಲೂ ಸದಾ ಚಿಂತಿಸುತ್ತಿರುವೆವು. ಶ್ರೀಹರಿಯನ್ನು ಒಂದು ಗಳಿಗೆಯಾದರೂ ಚಿಂತಿಸಲು ನಮಗೆ ಏಕೆ ಸಾಧ್ಯವಾಗುತ್ತಿಲ್ಲ? ಇದು ಮನಸ್ಸಿನಲ್ಲಿಯೇ ನಾವು ಪ್ರಶ್ನಿಸಿಕೊಳ್ಳಬೇಕಾದ ಸಂಗತಿಯಾಗಿದೆ. ನಮ್ಮ ಹೃದಯದಲ್ಲಿ ಭಕ್ತಿಯ ಸೆಲೆಯೇ ಬತ್ತಿಹೋಗಿದೆ. ನಾವು ಭಕ್ತಿಯ ಪ್ರದರ್ಶನವನ್ನು ಮಾಡುತ್ತಿರುವೆವೇ ಹೊರತು ನಿಜವಾದ ಭಕ್ತಿಯನ್ನಲ್ಲ.

ತನ್ನ ಪತಿಯ ಕಡೆಗೆ ಹೊರಟ ಮುಗುದೆಯೊಬ್ಬಳು ಧ್ಯಾನಾರೂಢನಾದ ರಾಜನನ್ನು ಅನ್ಯಮನಸ್ಕತೆಯಿಂದ ತುಳಿದು, ಅದರ ಪರಿವೆ ಇಲ್ಲದೆ ಮುಂದುವರಿಯಲು, ಅವಮಾನಿತನಾಗಿ ಕೋಪಗೊಂಡ ರಾಜನು ಅವಳನ್ನು ಕರೆಸಿ ವಿಚಾರಣೆಗೊಳಪಡಿಸಿದಾಗ ಅವಳು ನಗುತ್ತ ಉತ್ತರಿಸಿದಳು: ನಾನು

ಸಾಮಾನ್ಯ ಮಾನವನಾದ ನನ್ನ ಪ್ರಿಯ ಪತಿಯನ್ನು ನೆನೆದುಕೊಂಡು ಹೋಗುವ ಭರದಲ್ಲಿ ಕಾಲಿನಿಂದ ರಾಜನನ್ನು ಮುಟ್ಟಿದ್ದು ನನಗೇ ತಿಳಿಯಲಿಲ್ಲ; ಹೀಗಿರುವಾಗ ಅನಂತ ಗುಣಶಾಲಿಯಾದ ಜಗದೊಡೆಯನನ್ನೇ ತಲ್ಲೀನತೆಯಿಂದ ಸ್ಮರಿಸುವ ಈ ರಾಜನಿಗೆ ಅದು ಹೇಗೆ ತಿಳಿಯಿತು? ನನಗೆ ಇರುವ ಪತಿಪ್ರೇಮದಷ್ಟೂ ಹರಿಪ್ರೇಮವು ಈತನಿಗಿಲ್ಲವೆ? ಎಂದು ಅವಳು ಸವಾಲು ಹಾಕಿದಳು. ಇದು ವಾಸ್ತವವಾದ ಪ್ರಶ್ನೆಯಾಗಿದೆ. ನಮ್ಮ ಸೊತ್ತು ಪರಿವಾರಗಳಲ್ಲಿ ಮಾಡುವ ಪ್ರೀತಿಯ ಅರ್ಧದಷ್ಟೂ ನಾವು ಪರಮಾತ್ಮನನ್ನು ಪ್ರೀತಿಸುತ್ತಿಲ್ಲ. ಆದುದರಿಂದಲೇ ನಮ್ಮ ಹೃದಯ ದೇಗುಲದಲ್ಲಿ ಪರಮಾತ್ಮನ ಪ್ರತಿಮೆಯು ಚಲವಾಗಿದೆ. ಸ್ಥಿರ ಪ್ರತಿಮೆಯನ್ನು ಸ್ಥಾಪಿಸಲು ನಾವು ಅಶಕ್ತರಾಗಿರುವೆವು. ವಿಷಯವೈರಾಗ್ಯ ಮತ್ತು ಭಗವತ್ ಪ್ರೇಮಗಳಿಂದಲೇ ನಾವು ಇದರಲ್ಲಿ ಯಶಸ್ವಿಯಾಗಬಲ್ಲೆವು.

**ಯತತೋಽಪಿ ಹರೇಃ ಪದಸಂಸ್ಮರಣೇ**
**ಸಕಲಂ ಹ್ಯಘಮಾಶು ಲಯಂ ವ್ರಜತಿ ।**

ದ್ವಾದಶಸ್ತೋತ್ರ

ಎಂದು ಶ್ರೀಮದಾಚಾರ್ಯರು ಅಪ್ಪಣೆ ಕೊಡಿಸಿದಂತೆ ಪರಮಾತ್ಮನ ಧ್ಯಾನವನ್ನು ಏಕಾಗ್ರತೆಯಿಂದ ಮಾಡಲು ನಮಗೆ ಶಕ್ಯವಾಗದಿದ್ದರೂ ಅದಕ್ಕಾಗಿ ಪ್ರಾಮಾಣಿಕ ಪ್ರಯತ್ನವನ್ನು ಮಾಡುವುದರಿಂದಲೂ ನಮ್ಮ ಸಕಲ ಪಾಪಗಳ ಪರಿಹಾರವಾಗುವುದು.

ಧ್ಯಾನಮಾರ್ಗದಲ್ಲಿ ಅಯಶಸ್ವಿಯಾಗಿ ಯೋಗಭ್ರಷ್ಟನಾದವನು ಇಹಪರಗಳೆರಡಕ್ಕೂ ಎರವಾಗುವನೆ? ಎಂಬ ಅರ್ಜುನನ ಸಂಶಯಕ್ಕೂ ಶ್ರೀಕೃಷ್ಣನು ಇದೇ ರೀತಿಯ ಪರಿಹಾರವನ್ನು ಹೇಳಿದ್ದಾನೆ.

**ನ ಹಿ ಕಲ್ಯಾಣಕೃತ್ ಕಶ್ಚಿದ್ ದುರ್ಗತಿಂ ತಾತ ಗಚ್ಛತಿ ।**

ಒಳ್ಳೆಯ ಕೆಲಸವನ್ನು ಮಾಡುವವನಿಗೆ ಅದನ್ನು ಪೂರ್ಣಗೊಳಿಸಲಾಗದಿದ್ದರೂ ದುರ್ಗತಿಯು ಖಂಡಿತ ಬರುವುದಿಲ್ಲ. ಸದುದ್ದೇಶದಿಂದ ಮಾಡಿದ ಪ್ರಾಮಾಣಿಕ ಪ್ರಯತ್ನಕ್ಕೆ ಉತ್ತಮ ಫಲವು ನಿಶ್ಚಯವಾಗಿ ದೊರೆಯುವುದು. ಇದು

ಭಗವಂತನು ನೀಡಿದ ಭರವಸೆಯಾಗಿದೆ. ಮಂತ್ರಿ ಮಾಗಧರು ನೀಡುವ ಆಶ್ವಾಸನದಂತೆ ಇದು ಹುಸಿಯಾಗುವುದಿಲ್ಲ. ಈ ಜನ್ಮದಲ್ಲಿ ನಮ್ಮ ಸಾಧನೆ ಅಪೂರ್ಣವಾದಲ್ಲಿ ಜನ್ಮಾಂತರದಲ್ಲಿ ಅದನ್ನು ಮುಂದುವರಿಸುವ ಸನ್ನಿವೇಶವನ್ನು ಪರಮಾತ್ಮನು ಒದಗಿಸುತ್ತಾನೆ. ಪರಮಾತ್ಮನ ಈ ನಿಯಮ, ಸುವ್ಯವಸ್ಥೆಗಳಲ್ಲಿ ನಾವು ಪೂರ್ಣ ವಿಶ್ವಾಸವನ್ನಿಟ್ಟು ಧೈರ್ಯದಿಂದ ಸಾಧನೆಯನ್ನು ನಡೆಸಿಕೊಂಡು ಹೋಗಬೇಕು. ನಾವೀಗ ಎಲ್ಲರೂ ಧ್ಯಾನ, ಸಮಾಧಿಗಳನ್ನು ಮಾಡಬೇಕೆಂದು ಕರೆ ನೀಡುತ್ತಿಲ್ಲ. ತಮಗೆ ಸಾಧ್ಯವಾಗುವಂತಹ ಆಧ್ಯಾತ್ಮಿಕ ಸಾಧನೆಯನ್ನು ಪ್ರತಿಯೊಬ್ಬರೂ ನಿರ್ವಂಚನೆಯಿಂದ ಕೈಗೊಳ್ಳಲಿ. ಪ್ರತಿದಿನವೂ ಸಂಧ್ಯಾವಂದನ ದಂತಹ ಸರಳ ಶಾಸ್ತ್ರೀಯ ಪ್ರಾರ್ಥನೆಯನ್ನಾದರೂ ಪ್ರತಿಯೊಬ್ಬರೂ ಆಚರಿಸಿ ಕ್ರಮಕ್ರಮವಾಗಿ ಆತ್ಮೋನ್ನತಿಯನ್ನು ಸಾಧಿಸಲಿ. ಇಂತಹ ಪ್ರಾರಂಭಿಕ ಪ್ರಯತ್ನದಿಂದ ಮುಂದಿನ ಹಾದಿಯು ಸಹಜವಾಗಿ ಏನೂ ಶ್ರಮವಿಲ್ಲದೆ ಅವನಿಗೆ ಗೋಚರವಾಗುವುದು.

## ಭಕ್ತಿಯೂ ಮಾಹಾತ್ಮ್ಯಜ್ಞಾನವೂ

ಧ್ಯಾನಕ್ಕೆ ಭಕ್ತಿಯ ಹಿನ್ನೆಲೆಯು ಅವಶ್ಯವೆಂದು ಹಿಂದೆ ನಿರೂಪಿಸಿದೆಯಷ್ಟೆ. ಈ ಭಕ್ತಿಯ ಸ್ವರೂಪವರ್ಣನೆಯನ್ನು ಏಳನೆಯ ಅಧ್ಯಾಯದಲ್ಲಿ ಮಾಡಲಾಗುವುದು. ಭಕ್ತಿಯಲ್ಲಿ ಎರಡು ಅಂಶಗಳು ಅಡಕವಾಗಿವೆ. ಒಂದು ಜ್ಞಾನ ಹಾಗೂ ಇನ್ನೊಂದು ಪ್ರೇಮ. ಜ್ಞಾನಪ್ರೇಮಗಳ ಸಮನ್ವಯವೇ ಭಕ್ತಿ ಎನಿಸುವುದು. ಪರಮಾತ್ಮನ ಮಾಹಾತ್ಮ್ಯಜ್ಞಾನವನ್ನು ಪಡೆದು ಅವನ ಕಡೆಗೆ ಹರಿಸುವ ನಿರಂತರ ಪ್ರೇಮಧಾರೆಯೇ ಭಕ್ತಿಯಾಗಿದೆ. ಒಬ್ಬನ ಗುಣ, ಮಹಿಮೆಗಳ ಪರಿಚಯವಿಲ್ಲದೆ ಅವನಲ್ಲಿ ಮಾಡುವ ಪ್ರೀತಿಯು ಆಸಕ್ತಿ ಎನಿಸುವುದು. ಮಕ್ಕಳು ಹಾಗೂ ಪರಿವಾರವನ್ನು ಪ್ರೀತಿಸುವಾಗ ಈ ಆಸಕ್ತಿಯು ತುಂಬಿರುತ್ತದೆ. ಅವರ ಗುಣ, ನಡತೆಗಳ ಕಡೆಗೆ ಗಮನ ನೀಡದೆ ನಮ್ಮವರು ಎಂಬ ಇಷ್ಟೇ ಭಾವದಿಂದ ಪ್ರೀತಿಸುತ್ತೇವೆ. ಅದರಂತೆ ಭಗವಂತನ ಮಹಿಮೆಯನ್ನು ತಿಳಿಯದೆ ಅವನಲ್ಲಿ ಮಾಡುವ ಪ್ರೇಮವು ಕುರುಡು ಭಕ್ತಿಯಾಗುವುದು. ಅವನ ಮಹಿಮೆಯನ್ನು ತಿಳಿದಷ್ಟೂ ವಿಶುದ್ಧ ಭಕ್ತಿಯು ಮನಸ್ಸಿನಲ್ಲಿ

ಒಡಮೂಡುವುದು. ಆದುದರಿಂದಲೇ ಸಕಲ ವೇದಗಳೂ ಭಗವಂತನ ಮಹಿಮೆಯನ್ನು ಗಾನ ಮಾಡಲು ಹೊರಟಿವೆ. ಗೀತೆಯಲ್ಲಿಯೂ ಈ ಭಕ್ತಿಭಾವವನ್ನು ಬಲಗೊಳಿಸುವು ದಕ್ಕಾಗಿಯೇ ಪರಮಾತ್ಮನ ಮಾಹಾತ್ಮ್ಯದ ವರ್ಣನೆಯನ್ನು ಮಾಡಲಾಗಿದೆ.

ಈ ವಿಶ್ವವನ್ನು ನಿರೀಕ್ಷಿಸಿದಂತೆ ವಿಶ್ವಕರ್ತನ ವಿಚಿತ್ರ ಅದ್ಭುತ ಶಕ್ತಿಯ ಪರಿಚಯವು ನಮಗಾಗುತ್ತದೆ. ಪರಮಾತ್ಮನನ್ನು ಮತ್ತು ಅವನ ಅಪಾರಶಕ್ತಿಯನ್ನು ಸಿದ್ಧಪಡಿಸಲು ಬೇರಾವ ದಾಖಲೆ ಆಧಾರಗಳೂ ಬೇಡ. ಈ ವಿಶ್ವವೇ ಪರಮಾತ್ಮನ ಅಸ್ತಿತ್ವವನ್ನು ಸಾರಿ ಹೇಳುತ್ತದೆ. ಈ ವಿಶ್ವವು ಅವ್ಯವಸ್ಥಿತವಾಗಿ ರೂಪುಗೊಂಡಿರುವುದಿಲ್ಲ. ಇದು ಕ್ರಮಬದ್ಧವಾಗಿ ಸುಯೋಜಿತ ರೀತಿಯಿಂದ ನಿರ್ಮಿತವಾಗಿದೆ. ಪ್ರತಿಯೊಂದು ವಸ್ತುವಿನ ಸೃಷ್ಟಿ ಹಾಗೂ ಬೆಳವಣಿಗೆಗಳಲ್ಲಿ ನೂರಾರು ನಿಯಮಗಳ ಸಂಯೋಜನವನ್ನು ನಾವು ಕಾಣಬಹುದು. ನಮ್ಮ ಇಂದ್ರಿಯಗಳ ರಚನೆ, ಶರೀರದ ರೀತಿ, ನಮ್ಮ ಆಹಾರವು ಜೀರ್ಣವಾಗಲು ಇರುವ ಸಂವಿಧಾನ, ಗ್ರಹ-ನಕ್ಷತ್ರಗಳ ಸಂಬಂಧ ಸುವ್ಯವಸ್ಥೆಗಳು, ಶ್ವಾಸೋಚ್ಛ್ವಾಸದ ಪ್ರಕ್ರಿಯೆಗಳು - ಹೀಗೆ ನೂರಾರು ಪ್ರಾಕೃತಿಕ ವ್ಯಾಪಾರ ವ್ಯವಸ್ಥೆಗಳನ್ನು ನೋಡುವಾಗ ಉದ್ದೇಶ ಪೂರ್ವಕವಾಗಿ ಒಂದು ಸುಯೋಜಿತವಾದ ಏರ್ಪಾಡನ್ನು ಈ ಪ್ರಪಂಚದಲ್ಲಿ ಮಾಡಲಾಗಿದೆ ಎಂದು ಕಂಡುಬರುತ್ತದೆ. ಒಂದೆರಡು ಘಟನೆಗಳಾಗಿದ್ದರೆ ಅದು ಆಕಸ್ಮಿಕವೆಂದು ನಾವು ತಳ್ಳಿಹಾಕಬಹುದಿತ್ತು. ಲಕ್ಷಗಟ್ಟಲೆ ನಿಯಮಗಳು, ಕೋಟ್ಯಂತರ ಪದಾರ್ಥಗಳು ಜಗತ್ತಿನ ಸೃಷ್ಟಿ, ಬೆಳವಣಿಗೆಗಳಿಗೆ ಅನುಕೂಲವಾಗುವಂತೆ ಸಂಯೋಜಿತವಾಗಿರುವುದನ್ನು ಕಂಡಾಗ ಇವೆಲ್ಲ ಆಕಸ್ಮಿಕವೆಂದು ನಾವು ಹೇಗೆ ಹೇಳಬಲ್ಲೆವು? ಉದ್ದೇಶವಿಲ್ಲದೆ ಸುಮ್ಮನೆ ಸಂಸ್ಕೃತವರ್ಣಗಳನ್ನು ವರ್ಷಗಟ್ಟಲೆ ಜೋಡಿಸುತ್ತಿದ್ದರೂ ಶಾಕುಂತಲ ನಾಟಕದ ಒಂದು ಪದ್ಯದ ರಚನೆಯೂ ಆಕಸ್ಮಿಕವಾಗಿ ಆಗಲಾರದು. ಹೀಗಿರುವಾಗ ಇಂತಹ ಸುವ್ಯವಸ್ಥಿತ ವಿಶಾಲ ವಿಶ್ವದ ರಚನೆಯು, ಹಿಂದೆ ಯಾವ ಚೇತನ ಶಕ್ತಿಯ ಕೈವಾಡವೂ ಇಲ್ಲದ, ಕೇವಲ ಪ್ರಕೃತಿ ನಿರ್ಮಾಣವೆಂದು ನಾವು ಸಿದ್ಧಪಡಿಸಲಾರೆವು. ನಿಯಮ ಬದ್ಧವಾದ ಈ ಜಗತ್ತು ಒಬ್ಬ ಮಹಾ ಬುದ್ಧಿವಂತನಿಂದ ರಚಿತವಾದಂತೆ ಅತ್ಯಂತ ಸುಯೋಜಿತವಾಗಿದೆ ಎಂದು ಐನ್‌ಸ್ಟೈನ್ ಹೇಳಿದ್ದಾನೆ. ಈ ಜಗತ್ತನ್ನೂ ಅದರ

ಪ್ರಾಕೃತಿಕ ವೈಚಿತ್ರ್ಯಗಳನ್ನೂ ಕಂಡಷ್ಟು ವಿಶ್ವಕರ್ತನ ಅಸ್ತಿತ್ವದಲ್ಲಿ ವಿಶ್ವಾಸವು ದೃಢವಾಗುತ್ತದೆ.

ಕಣ್ಣಿಗೆ ಕಾಣದ ಭಗವಂತನನ್ನು ನಾನು ಹೇಗೆ ನಂಬಲಿ? ಎಂದು ಶ್ವೇತಕೇತು ಪ್ರಶ್ನಿಸಿದಾಗ, ತಂಬಿಗೆ ತುಂಬ ನೀರಲ್ಲಿ ಉಪ್ಪು ಸೇರಿಸಿ ಆ ನೀರನ್ನು ಸ್ವಲ್ಪ ಕುಡಿಯುವಂತೆ ತಂದೆ ಉದ್ದಾಲಕನು ಅವನಿಗೆ ಹೇಳುವನು. ಆ ನೀರಿನ ಯಾವ ಭಾಗವನ್ನು ಕುಡಿದರೂ ಅದು ಉಪ್ಪಾಗಿತ್ತು. ಆ ನೀರಿನಲ್ಲಿರುವ ಉಪ್ಪನ್ನು ತೆಗೆದು ತೋರಿಸುವೆಯಾ? ಎಂದು ಉದ್ದಾಲಕನು ಪ್ರಶ್ನಿಸುವನು. ಪರಮಾತ್ಮನ ಅಸ್ತಿತ್ವವೂ ಇದೇ ರೀತಿಯಾಗಿದೆ. ನೀರಿನಲ್ಲಿರುವ ಉಪ್ಪು ಪ್ರತ್ಯಕ್ಷವಾಗಿ ಕಾಣಿಸದಿದ್ದರೂ ನೀರಿನ ಕಣಕಣಗಳಲ್ಲಿಯೂ ಅದರ ವ್ಯಾಪ್ತಿಯನ್ನು ನಾವು ಅನುಭವಿಸುತ್ತಿರುವಂತೆ ವಿಶ್ವದ ಪ್ರತಿ ಪದಾರ್ಥವೂ ಪರಮಾತ್ಮನ ಅಸ್ತಿತ್ವವನ್ನು ನಮಗೆ ಸಾರಿ ಹೇಳುತ್ತದೆ. ಪರಮಾತ್ಮನು ಇಂದ್ರಿಯಗಳಿಗೆ ಅಗೋಚರನಾದರೂ ಅವನ ಶಕ್ತಿ, ನಿಯಮಗಳನ್ನು ಪ್ರಪಂಚದ ಪ್ರತಿಯೊಂದು ವಸ್ತುವಿನಲ್ಲೂ ನಾವು ಕಾಣಬಲ್ಲೆವು.

**ಮಯಿ ಸರ್ವಮಿದಂ ಪ್ರೋತಂ ಸೂತ್ರೇ ಮಣಿಗಣಾ ಇವ ।**

ಈ ವಿಶ್ವವು, ನೆಲದಲ್ಲಿ ವಿಕ್ಷಿಪ್ತವಾಗಿ ಚದುರಿದ ಮಣಿಗಳಂತಿರದೆ ಒಂದು ಸೂತ್ರದಲ್ಲಿ ಪೋಣಿಸಲ್ಪಟ್ಟ ಮಣಿಮಾಲೆಯಂತಿದೆ. ಈ ಪ್ರಪಂಚವನ್ನು ಜೋಡಿಸಿರುವ ಅನುಸೂತ್ಯವಾದ ಸೂತ್ರವೇ ಭಗವಂತ. ಅವನನ್ನು ಆಧರಿಸಿ ಅವನ ಬಲದಿಂದ ಜಗತ್ತಿನ ಸಕಲ ಪ್ರವೃತ್ತಿ, ವ್ಯವಹಾರಗಳೂ ನಡೆದಿವೆ. ಜಡಪ್ರಕೃತಿ ಮತ್ತು ಪೃಥಿವಿ, ಜಲ, ತೇಜಸ್ಸು, ವಾಯು, ಆಕಾಶ ಮುಂತಾದ ಪ್ರಕೃತಿಯ ಕಾರ್ಯಗಳು ಮತ್ತು ಈ ಜಡ ತತ್ತ್ವಗಳಿಗೆ ಆಧಾರಶಕ್ತಿಯೆನಿಸಿದ ಚಿತ್‌ಪ್ರಕೃತಿ ಇವೆಲ್ಲವುಗಳ ದ್ವಾರದಿಂದ ಭಗವಂತನೇ ನಿಖಿಲ ಬ್ರಹ್ಮಾಂಡವನ್ನು ನಿರ್ಮಿಸುತ್ತಾನೆ. ಕುಂಬಾರನು ಗಡಿಗೆಯನ್ನು ನಿರ್ಮಿಸುವಂತೆ ದೇವರು ಈ ಜಗತ್ತನ್ನು ಸೃಷ್ಟಿಸುವುದಿಲ್ಲ. ಕುಂಬಾರನಿಗೆ ಗಡಿಗೆಯ ಗುಣಧರ್ಮಗಳ ಮೇಲೆ ಪ್ರಭುತ್ವವಿಲ್ಲ. ಗಡಿಗೆಯಿಂದ ಪ್ರತ್ಯೇಕವಾಗಿ ಒಂದು ಕಡೆ ಕುಳಿತು ಅದನ್ನು ಸೃಜಿಸುತ್ತಾನೆ. ಭಗವಂತನೋ ಎಲ್ಲಿಯೋ ಒಂದು ಮೂಲೆಯಲ್ಲಿದ್ದು ಈ

ಪ್ರಪಂಚವನ್ನು ರಚಿಸುವುದಲ್ಲ. ಪ್ರಪಂಚದ ಕಾರಣಗಳೆನಿಸಿದ ಪದಾರ್ಥಗಳಲ್ಲೆಲ್ಲ ವ್ಯಾಪಿಸಿ ನಿಂತು ಆ ಪದಾರ್ಥಗಳಿಗೆ ಮತ್ತು ಅವುಗಳ ಗುಣಧರ್ಮಗಳೆಲ್ಲವುಗಳಿಗೂ ಕಾರಣನೆನಿಸಿದ್ದಾನೆ. ಯಂತ್ರದಲ್ಲಿ ವಿದ್ಯುತ್ತು ಹರಿಯುವಂತೆ ವಿಶ್ವದ ಕಣಕಣಗಳಲ್ಲಿ ವ್ಯಾಪಿಸಿ ಆಯಾಯ ವಸ್ತುಗಳ ವ್ಯಕ್ತಿತ್ವದ ಸಂಪೂರ್ಣ ರಚನೆಗೆ ಅವನು ನಿಮಿತ್ತನೂ ಅಂತರ್ಯಾಮಿಯೂ ಆಗಿರುವನು.

ಈ ವಿಶಾಲವೂ ಅದ್ಭುತವೂ ಆಗಿರುವ ಪ್ರಪಂಚದ ರಚನೆಗೆ ಹಿನ್ನೆಲೆಯಾದ ಪರಮಾತ್ಮನ ಜ್ಞಾನ, ಕ್ರಿಯಾಶಕ್ತಿಗಳು ಊಹಾತೀತವಾಗಿವೆ. ಸರ್ವಜ್ಞನೂ ಅಚಿಂತ್ಯ ಶಕ್ತಿಶಾಲಿಯೂ ಅನಂತಗುಣನಿಧಿಯೂ ಆದ ಮಹಾಚೇತನನಿಂದಲೇ ಈ ಸಮಗ್ರ ವಿಶ್ವದ ರಚನೆಯಾಗಲು ಸಾಧ್ಯ. ಈ ವಿಶಾಲ ಜಗತ್ತನ್ನು ನಿರೀಕ್ಷಣ ಮಾಡಿದಷ್ಟೂ ಜಗಜ್ಜನ್ಮಾದಿಕಾರಣನ ಅಪಾರ ಮಹಿಮೆಯ ಭವ್ಯತೆ ಹಾಗೂ ವಿಸ್ತಾರವನ್ನು ಮನಗಾಣುತ್ತೇವೆ.

## ಭಕ್ತಿಯ ಪ್ರಕಾರಗಳು

ಪರಮಾತ್ಮನ ಈ ಮಹಿಮೆಯ ಜ್ಞಾನದಿಂದಲೂ ನಮಗೆ ಪ್ರತಿಕ್ಷಣವೂ ಅವನಿಂದ ಒದಗುವ ಉಪಕಾರವನ್ನು ಸ್ಮರಿಸಿಯೂ ಅವನಲ್ಲಿ ನಮ್ಮ ಭಕ್ತಿಯು ಉಕ್ಕೇರುವುದು. ಭಕ್ತರಲ್ಲಿ ಅನೇಕ ಪ್ರಕಾರಗಳಿವೆ. ತಮ್ಮ ದುಃಖಸಂಕಷ್ಟಗಳ ನಿವಾರಣೆಗಾಗಿ ಪರಮಾತ್ಮನಲ್ಲಿ ಮೊರೆ ಇಡುವ ಆರ್ತಭಕ್ತರು ಕೆಲವರು. ಸಂಪತ್ತು ವೈಭವಗಳಿಗಾಗಿ ಅವನನ್ನು ಭಜಿಸುವ ಅರ್ಥಾರ್ಥಿಗಳು ಕೆಲವರು. ಲೌಕಿಕ ಫಲಗಳ ಆಶೆಯಿಂದ ನಾನಾ ವಿಧ ಅವ್ಯವಹಾರಗಳನ್ನು ಮಾಡುವುದಕ್ಕಿಂತ, ನಾನಾ ವ್ಯಕ್ತಿಗಳನ್ನು ಬೇಡುತ್ತ ದೀನಜೀವನ ನಡೆಸುವುದಕ್ಕಿಂತ, ಲೌಕಿಕ ಫಲಗಳನ್ನು ಪೂರೈಸಿಕೊಳ್ಳುವುದಕ್ಕಾಗಿ ಭಗವಂತನನ್ನೇ ಬೇಡುವವರು ಸಕಾಮರಾದರೂ ಶ್ರೇಷ್ಠರೂ ಉದಾರ ಪುರುಷರೂ ಆಗಿರುವರು. ಲೌಕಿಕ ಪ್ರಯೋಜನವನ್ನು ಬಯಸದೆ ಭಗವಂತನ ಜ್ಞಾನ, ಸಾಕ್ಷಾತ್ಕಾರಗಳಿಗಾಗಿಯೇ ಅವನನ್ನು ಆರಾಧಿಸುವ ಜಿಜ್ಞಾಸುಗಳು ಉತ್ತಮ ಶ್ರೇಣಿಯ ಭಕ್ತರು. ಇವರೆಲ್ಲರಿಗಿಂತಲೂ ಮಿಗಿಲಾದವನು ಭಗವತ್ ಸಾಕ್ಷಾತ್ಕಾರಪಡೆದ ಭಕ್ತನು. ಭಗವಂತನ ದಿವ್ಯ ಸುಂದರಮೂರ್ತಿಯನ್ನು ಸಾಕ್ಷಾತ್ತಾಗಿ ನೋಡಿ ಉತ್ಕಟವಾದ

ಪ್ರೇಮಭಾವವನ್ನು ಹೊಂದಿದವನೇ ಪರಿಪೂರ್ಣ ಭಕ್ತನೆನಿಸುತ್ತಾನೆ. ಒಂದು ವಸ್ತುವನ್ನು ಕೇಳಿ ತಿಳಿದಾಗ ಅಲ್ಲಿ ಉಂಟಾಗುವ ಪ್ರೀತಿಗೂ ಪ್ರತ್ಯಕ್ಷವಾಗಿ ಅದನ್ನು ನೋಡಿದಾಗ ಮೂಡುವ ಪ್ರೀತಿಗೂ ಬಹಳ ಅಂತರವಿದೆ. ಸಕಾಮ ಹಾಗೂ ಜಿಜ್ಞಾಸುಗಳಿಗೆ ಭಗವದ್ದರ್ಶನವಾಗಿರುವುದಿಲ್ಲ. ಶಾಸ್ತ್ರಗಳಿಂದ ಹಾಗೂ ಗುರುಗಳ ಉಪದೇಶದಿಂದಲೇ ಭಗವಂತನ ಸಾಮಾನ್ಯ ಜ್ಞಾನವನ್ನು ಪಡೆದು ಅವರು ಮಾಡುವ ಭಕ್ತಿಯು ಸಾಧಾರಣವೇ ಇರುತ್ತದೆ. ಅಪರೋಕ್ಷ ಜ್ಞಾನಿಯು ಸ್ವತಃ ಪರಮಾತ್ಮನನ್ನು ನೋಡುತ್ತಿರುವುದರಿಂದ ಭಕ್ತಿಯ ಪರಾಕಾಷ್ಠೆಯನ್ನು ಅನುಭವಿಸಬಲ್ಲನು.

> ಪ್ರಿಯೋ ಹಿ ಜ್ಞಾನಿನೋಽತ್ಯರ್ಥ
> ಮಹಂ ಸ ಚ ಮಮ ಪ್ರಿಯಃ ।

ಎಂದು ಜ್ಞಾನಿಭಕ್ತನಿಗೆ ಭಗವಂತನೂ ಭಗವಂತನಿಗೆ ಜ್ಞಾನಿಯೂ ಪರಸ್ಪರವಾಗಿ ಪರಮಪ್ರಿಯರೆನಿಸಿಕೊಳ್ಳುವರು. ಈ ಪರಮಭಕ್ತಿಯಿಂದಲೇ ಜ್ಞಾನಿಯು ಪರಮಾತ್ಮನ ಅತ್ಯಂತ ಅನುಗ್ರಹಕ್ಕೆ ಪಾತ್ರನಾಗುವನು.

## ಅದ್ವೈತಜ್ಞಾನವೂ ಭಕ್ತಿಯೂ

ಜ್ಞಾನದ ಉದಯವಾಗುವವರೆಗೆ ಮಾತ್ರ ಭಕ್ತಿಗೆ ಅವಕಾಶವೆಂದೂ ಜ್ಞಾನದ ನಂತರ ಜೀವ, ಬ್ರಹ್ಮ ಮುಂತಾದ ದ್ವೈತಭಾವಕ್ಕವಕಾಶವಿಲ್ಲದಿರುವುದರಿಂದ ಜ್ಞಾನಿಯು ಭಕ್ತಿ ಮಾಡಲು ಸಾಧ್ಯವಿಲ್ಲವೆಂದೂ ಕೆಲವರ ವಾದವಿದೆ. ಭಕ್ತಿಯ ಸ್ಥಿತಿಯಲ್ಲಿ ಭಗವಂತನ ಮಾಹಾತ್ಮ್ಯಜ್ಞಾನ, ಪರಮಾತ್ಮನು ಸ್ವಾಮಿ, ತಾನು ಅವನ ಭೃತ್ಯನು ಎಂಬ ತಿಳುವಳಿಕೆ ಮುಂತಾದವು ಅನಿವಾರ್ಯವಾಗಿರುವವು. ಇದು ತಮ್ಮ ಅದ್ವೈತವಾದಕ್ಕೆ ತೀರ ವಿರೋಧಿಯಾದ ವಿಚಾರವಾಗಿದ್ದು ಜ್ಞಾನಿಯೂ ಭಕ್ತನಾಗಿರುವ ಪಕ್ಷದಲ್ಲಿ ಅವನಲ್ಲಿಯೂ ಈ ದ್ವೈತಭಾವನೆಯು ನೆಲೆಸಿದೆ ಎಂದೊಪ್ಪಿಕೊಳ್ಳಬೇಕಾಗುವುದು. ಜ್ಞಾನಿಯ ತಿಳುವಳಿಕೆಯು ಯಥಾರ್ಥವೂ ಅಬಾಧಿತವೂ ಇರುತ್ತದೆ. ಬ್ರಹ್ಮನ ಸ್ವರೂಪವನ್ನು ಯಥಾವತ್ತಾಗಿ ಸಾಕ್ಷಾತ್ಕರಿಸಿದ ಜ್ಞಾನಿಯಲ್ಲಿ ಸಂಶಯ, ವಿಪರ್ಯಯಗಳ ಗೊಂದಲಗಳಿಗೆ ಅವಕಾಶವೆಲ್ಲಿದೆ? ಆದುದರಿಂದ ಜ್ಞಾನಿಯು ಕಂಡಿರುವ ಸಂಗತಿಗಳನ್ನು ನಾವು ಸತ್ಯವೆಂದೇ

ಗ್ರಹಿಸಬೇಕಾಗುವುದು. ಜ್ಞಾನಿಯೂ ಭಕ್ತಿಭಾವದಿಂದ ಭಗವದಾರಾಧನೆಯನ್ನು ನಡೆಸಿದಲ್ಲಿ ಅವನ ಅನುಭವವಿಷಯವಾದ ದ್ವೈತಭಾವವನ್ನೂ ಅಬಾಧಿತ ಸತ್ಯವೆಂದೇ ಒಪ್ಪಬೇಕಾಗುವುದು. ಹೀಗಾಗಿ ಅದ್ವೈತವಾದದ ಆಧಾರವೆಲ್ಲ ಕುಸಿದುಹೋಗುವುದೆಂಬ ಭಯದಿಂದ ಜ್ಞಾನದ ಪೂರ್ವಾವಸ್ಥೆಯಲ್ಲಿ ಮಾತ್ರ ಭಕ್ತಿಸಾಧನೆಗೆ ಅವಕಾಶವೆಂದೂ ಜ್ಞಾನಿಯಾದವನು ಭಕ್ತನಾಗಿ ಉಳಿಯುವು ದಿಲ್ಲವೆಂದೂ ಇವರು ಪ್ರತಿಪಾದಿಸಿರುವರು. ಮಾಯೆ ಎಂಬ ಹಸುವಿನ ಕರುಗಳಾಗಿ ಜೀವ, ಈಶ್ವರರಿದ್ದು ದ್ವೈತದ ಹಾಲನ್ನು ಕುಡಿಯುತ್ತಿದ್ದರೂ ಮಾಯೆಯನ್ನು ಮೀರಿದ ಜ್ಞಾನಿಪುರುಷನಿಗೆ ಈ ದ್ವೈತದ ವಾಸನೆಯು ಬರಲಾರದೆಂದು,

> ದೇಹದೃಷ್ಟ್ಯಾ ತು ದಾಸೋಽಹಂ
> ಆತ್ಮದೃಷ್ಟ್ಯಾ ತ್ವಮೇವಾಹಂ ।

ಎಂದು ಮುಂತಾಗಿಯೂ ಇವರ ನಿರೂಪಣೆ ಇದೆ.

ಈ ವಾದವು ಭಕ್ತಿಯ ಅಂತಸ್ತನ್ನು ಬಹಳ ಕೆಳಗಿಳಿಸುತ್ತದೆ. ಭಕ್ತಿಯೆಂಬುದು ಈ ವಾದದ ರೀತ್ಯಾ ಅಸತ್ಯನಿಷ್ಠವಾದ ಒಂದು ಭ್ರಾಮಕ ಕಲ್ಪನೆಯೆನಿಸುವುದು. ನಮಗಿಂತ ಭಿನ್ನನೂ ಸ್ವಾಮಿಯೂ ಆಗಿರುವ ಭಗವಂತನು ವಾಸ್ತವವಾಗಿ ಇಲ್ಲವೆಂದು ತಿಳಿದುಕೊಂಡೂ ಅವನಲ್ಲಿ ಮಾಡುವ ಭಕ್ತಿಯು ಹೃದಯದಲ್ಲಿ ಸತ್ತ್ವ ಶ್ರದ್ಧೆಗಳನ್ನು ಹೇಗೆ ತುಂಬಬಲ್ಲದು? ಇಂತಹ ಅಸತ್ಯನಿಷ್ಠವಾದ ಸಾಧನೆಯಿಂದ ಮುಕ್ತಿಯ ಸತ್ಯ ಅಮೃತಫಲವನ್ನು ಹೇಗೆ ಪಡೆಯಬಲ್ಲೆವು?

> ಅಸದುಪಾಸನಯಾ ಆತ್ಮಹನಃ ।

-ಭಾಗವತ

ಎಂದು ಮುಂತಾಗಿ ಶಾಸ್ತ್ರದಲ್ಲಿ ಅಸತ್ಯೋಪಾಸನೆಯನ್ನು ಕಟುವಾಗಿ ನಿಷೇಧಿಸಿರುವಾಗ ಅಜ್ಞಾನದಶೆಯಲ್ಲಿ ಮಾತ್ರ ಮಾಡಲು ಸಾಧ್ಯವೆನ್ನಲಾಗುವ ಭಕ್ತಿಗೆ ಸಾಧನೆಯಲ್ಲಿ ಪರಮಸ್ಥಾನವು ಹೇಗೆ ದೊರಕಿದೆ?

> ಭಕ್ತ್ಯಾ ತ್ವನನ್ಯಯಾ ಶಕ್ಯ ಅಹಮೇವಂವಿಧೋಽರ್ಜುನ ।
> ಜ್ಞಾತುಂ ದ್ರಷ್ಟುಂ ಚ ತತ್ತ್ವೇನ ಪ್ರವೇಷ್ಟುಂ ಚ ಪರಂತಪ ॥

ಎಂದು ಮುಂತಾಗಿ ಭಗವದ್ಗೀತೆಯಲ್ಲಿ ನೂರಾರು ಕಡೆಗಳಲ್ಲಿ ಸಾಕ್ಷಾತ್ಕಾರ ಮತ್ತು ಮೋಕ್ಷಗಳಿಗೆ ಭಕ್ತಿಯು ಅತ್ಯಾವಶ್ಯಕವೆಂದು ತಿಳಿಸಲಾಗಿದೆ. ಗೀತೆಯ ಉಪಸಂಹಾರದ ಸಂದರ್ಭದಲ್ಲಿ ಶ್ರೀಕೃಷ್ಣನು ಅರ್ಜುನನಿಗೆ ಹೀಗೆ ಉಪದೇಶಿಸಿರುವನು - ''ನೀನು ನನಗೆ ಅತ್ಯಂತ ಪ್ರಿಯನಾಗಿರುವುದರಿಂದ ನಿನಗೆ ಹಿತವಾದ, ಅತ್ಯಂತ ಶ್ರೇಷ್ಠವಾದ ವಿಚಾರವನ್ನು ಉಪದೇಶಿಸುತ್ತೇನೆ. ನನ್ನಲ್ಲಿಯೇ ಆಸಕ್ತನಾಗಿ, ನನ್ನ ಭಕ್ತನಾಗಿ, ನನ್ನ ಪೂಜಾಸೇವೆಗಳನ್ನು ಶ್ರದ್ಧೆಯಿಂದ ನಡೆಸಿದಲ್ಲಿ ಖಂಡಿತವಾಗಿಯೂ ನನ್ನನ್ನು ಹೊಂದುವೆ ಎಂಬುದೇ ಈ ಶ್ರೇಷ್ಠ ಉಪದೇಶವಾಗಿದೆ. ನೀನು ನನಗೆ ಪ್ರಿಯನಾಗಿರುವುದರಿಂದ ಪ್ರತಿಜ್ಞಾಪೂರ್ವಕವಾಗಿ ನಾನಿದನ್ನು ಹೇಳುತ್ತಿದ್ದೇನೆ''-

> ಸರ್ವಗುಹ್ಯತಮಂ ಭೂಯಃ ಶೃಣು ಮೇ ಪರಮಂ ವಚಃ ।
> ಇಷ್ಟೋಽಸಿ ಮೇ ದೃಢಮಿತಿ ತತೋ ವಕ್ಷ್ಯಾಮಿ ತೇ ಹಿತಮ್ ॥
> ಮನ್ಮನಾ ಭವ ಮದ್ಭಕ್ತೋ ಮದ್ಯಾಜೀ ಮಾಂ ನಮಸ್ಕುರು ।
> ಮಾಮೇವೈಷ್ಯಸಿ ಸತ್ಯಂ ತೇ ಪ್ರತಿಜಾನೇ ಪ್ರಿಯೋಽಸಿ ಮೇ ॥

ಇಷ್ಟು ವಿಶದವಾಗಿ ಭಕ್ತಿಯ ಪರಮೋಚ್ಚ ಸ್ಥಾನವನ್ನು ನಿರೂಪಿಸಿ ಅದನ್ನೇ ಮುಕ್ತಿಯ ಶ್ರೇಷ್ಠ ಸಾಮಗ್ರಿ ಎಂದು ಹೇಳಿರುವಾಗ ಆ ಭಕ್ತಿಯನ್ನು ಅಸತ್ಯೋಪಾಸನೆಯ ಮಟ್ಟದಲ್ಲಿ ಕೆಳಗಿಳಿಸುವುದು ಸರ್ವಥಾ ಅನುಚಿತವಾಗುವುದು. ಇಂತಹ ಭಕ್ತಿಯ ಸಂದೇಶವನ್ನೇ ಪ್ರಧಾನವಾಗಿ ಚಿತ್ರಿಸುವ ಗೀತೆಯೂ ಅಸತ್ಯ ಸಂಗತಿಗಳನ್ನು ಬೋಧಿಸುವ ಅಪ್ರಾಮಾಣಿಕ ಉಪದೇಶವೆಂದಾಗುವುದು. ಒಂದು ವಸ್ತುವು ಆ ರೀತಿಯಲ್ಲಿ ಇಲ್ಲವೆಂದು ತಿಳಿದೂ ಅದರ ಭಕ್ತಿ, ಪೂಜೆ, ಉಪಾಸನೆಗಳನ್ನು ನಡೆಸುತ್ತ, ಭ್ರಾಮಕ ಕಲ್ಪನೆಯಲ್ಲಿಯೇ ಇಡೀ ಜೀವನದ ವ್ಯವಹಾರಗಳನ್ನು ನಿರ್ವಹಿಸುವುದಕ್ಕಿಂತ ಹೆಚ್ಚಿನ ವಿಡಂಬನೆ, ಆತ್ಮವಂಚನೆಗಳು ಬೇರೇನೂ ಇರಲಾರವು. ಶಾಸ್ತ್ರಗಳೆಲ್ಲವೂ ಅಂತಿಮ ಗುರಿ ಮತ್ತು ಸಾಧನೆಗಳಿಗೆ ಪರಸ್ಪರ ವಿಸಂಗತಿ ಮತ್ತು ವೈಪರೀತ್ಯಗಳುಳ್ಳ ಇಂತಹ ಅಸಂಬದ್ಧ ವಿಚಾರಗಳನ್ನು ನಿರೂಪಿಸುತ್ತವೆ ಎಂಬುದನ್ನು ನಂಬುವುದು ಸರ್ವಥಾ ಅಶಕ್ಯವಾಗಿದೆ.

ಭಕ್ತರಲ್ಲಿ ಜ್ಞಾನಿಯೇ ತನ್ನ ಅತ್ಯಂತ ಶ್ರೇಷ್ಠ ಭಕ್ತನೆಂದು ಗೀತೆಯಲ್ಲಿ ಮಾಡಿದ ನಿರೂಪಣೆಯಂತೂ ಭಕ್ತಿಯು ಅಜ್ಞಾನಿಗಳಿಗೆ ಮಾತ್ರ ಮೀಸಲಾಗಿರಿಸಿದ

ಸಾಧನೆಯಲ್ಲವೆಂಬುದನ್ನು ಸುಸ್ಪಷ್ಟವಾಗಿ ತಿಳಿಸುತ್ತದೆ. ನಾಲ್ಕು ವಿಧ ಭಕ್ತರಲ್ಲಿ ಜ್ಞಾನಿಯು ಅಗ್ರಗಣ್ಯ ಭಕ್ತನೆಂದೆನಿಸಬೇಕಾದರೆ ಜ್ಞಾನ ಮತ್ತು ಭಕ್ತಿ ಇವೆರಡೂ ಜೊತೆಯಾಗಿರಬಲ್ಲವೆಂದು ಸಿದ್ಧವಾಗುವುದು. ಸಾಕ್ಷಾತ್ಕಾರವನ್ನು ಪಡೆದ ಮೇಲೂ ಭಕ್ತಿ ಹಾಗೂ ಒವರ ತಳಹದಿಯಾಗಿ ಎಲ್ಲರೂ ಒಪ್ಪಿರುವ ದ್ವೈತಭಾವಗಳಿಗೆ ಅವಕಾಶವಿವೆ ಎಂದ ಮೇಲೆ ಅಜ್ಞಾನದ ದೆಸೆಯಲ್ಲಿ ಮಾತ್ರ ಭಕ್ತಿ, ದ್ವೈತೋಪಾಸನೆಗಳನ್ನು ನಡೆಸತಕ್ಕದ್ದೆನ್ನುವ ವಾದವು ಪೂರ್ಣ ನಿರಾಧಾರವೆಂದು ಖಚಿತವಾಗುತ್ತದೆ. ಭಕ್ತಿಯು ಅಜ್ಞಾನಿಗಳು ಮಾತ್ರ ಹಿಡಿದು ಕುಣಿದಾಡುವ ಆಟಿಕೆಯಾಗಿರದೆ, ಸಕಲರಿಗೂ ಏಕಮಾತ್ರ ಅವಲಂಬನವಾಗಿರುವ ಊರುಗೋಲಾಗಿದೆ. ಹೀಗೆ ಸಾಕ್ಷಾತ್ಕಾರದ ಮೊದಲೂ ನಂತರವೂ ನಮಗೆ ಆವಶ್ಯಕವಾಗಿರುವ ಈ ಭಕ್ತಿಯು ಕಾಲ್ಪನಿಕ ವಿಚಾರದ ಆಧಾರದಲ್ಲಿ ರೂಪುಗೊಂಡಿರಲು ಶಕ್ಯವಿಲ್ಲ. ಜೀವ-ಪರಮಾತ್ಮರಿಗಿರುವ ಸ್ವಾಭಾವಿಕ ಅಂತರ, ಪರಮಾತ್ಮನ ಸರ್ವೋತ್ತಮತ್ವ, ಸರ್ವಸ್ವಾಮಿತ್ವ, ಸರ್ವಕಾರಣತ್ವ ಮೊದಲಾದ ತಾತ್ತ್ವಿಕ ಭಾವನೆಗಳ ತಳಹದಿಯಲ್ಲಿಯೇ ಇದು ನೆಲೆಸಿದೆ ಎಂಬುದೂ ಸಿದ್ಧವಾಗುತ್ತದೆ. ಪರಮಾತ್ಮನ ತತ್ತ್ವಜ್ಞಾನದಿಂದ ಉದ್ಭೂತವಾಗುವ ಸುದೃಢವಾದ ಸ್ನೇಹಭಾವವೇ ಭಕ್ತಿಯಾಗಿದ್ದು, ತತ್ತ್ವಸಾಕ್ಷಾತ್ಕಾರದಿಂದ ಈ ಭಕ್ತಿಯಲ್ಲಿ ಇನ್ನೂ ಹೆಚ್ಚಿನ ವಿಕಾಸ, ವಿಲಾಸಗಳು ಮೂಡಬಹುದಲ್ಲದೆ ಜ್ಞಾನಸೂರ್ಯನಿಂದ ಭಕ್ತಿ ಕಮಲವು ಒಣಗಿಹೋಗುವುದೆಂಬುದನ್ನು ಎಂದಿಗೂ ನಂಬಲಾರೆವು.

## ನಮಸ್ಕಾರಭಾವವು ಭಕ್ತಿಯ ಅಭೇದ್ಯ ಅಂಗ

ಭಕ್ತಿಯ ಬಗ್ಗೆ ಇನ್ನೂ ಒಂದು ಹೊಸ ವಾದವಿದೆ. ಭಕ್ತಿಯ ಹಿನ್ನೆಲೆಯಾಗಿ ದ್ವೈತಭಾವದ ಆವಶ್ಯಕತೆ ಏನೂ ಇಲ್ಲ. ಭಕ್ತಿಗೆ ಮಾಹಾತ್ಮ್ಯಜ್ಞಾನದ ಅಥವಾ ತಾನು ಪರಮಾತ್ಮನ ಸೇವಕನೆಂಬ ಭೇದಜ್ಞಾನದ ಪೃಷ್ಠಭೂಮಿಯ ಅಗತ್ಯವಿಲ್ಲ. ಭಕ್ತಿಯೆಂದರೆ ಆತ್ಮನ ಯಥಾವಸ್ಥಿತವಾದ ಜ್ಞಾನವೇ ಆಗಿದೆ. ತಾನೂ ಬ್ರಹ್ಮನೂ ಒಂದೇ ಆಗಿದ್ದು, ಈ ಅದ್ವೈತಜ್ಞಾನವೇ ಆತ್ಮನ ವಾಸ್ತವಿಕ ಜ್ಞಾನವಾಗಿರುವುದರಿಂದ ಜೀವ-ಬ್ರಹ್ಮರ ಐಕ್ಯವನ್ನು ತಿಳಿದವನೇ ಪೂರ್ಣಭಕ್ತನೆನಿಸುವನು.

ಆದುದರಿಂದ ಅದ್ವೈತಜ್ಞಾನಕ್ಕೂ ಭಕ್ತಿಗೂ ವಿರೋಧವಿದೆಯೆಂದು ಭಾವಿಸಬೇಕಾಗಿಲ್ಲ. ದ್ವೈತಭಾವದಲ್ಲಿ, ಪರಮಾತ್ಮನಲ್ಲಿ ಉಂಟಾಗುವ ಪ್ರೇಮಭಾವಕ್ಕಿಂತಲೂ ಅತಿಶಯವಾದ ಪ್ರೀತಿಯು ಅದ್ವೈತಭಾವದಲ್ಲಿ ಮೂಡಲು ಅವಕಾಶವಿದೆ. ಪ್ರತಿಯೊಬ್ಬನೂ ತನ್ನನ್ನು ಪ್ರೀತಿಸುವಷ್ಟು ಬೇರಾರನ್ನೂ ಪ್ರೀತಿಸಲಾರ. ಬ್ರಹ್ಮನು ಅನ್ಯನೆಂಬುವುದಕ್ಕಿಂತಲೂ ಬ್ರಹ್ಮನೇ ತಾನೆಂಬ ಭಾವವು ಉದಯವಾದಲ್ಲಿ ಬ್ರಹ್ಮನಲ್ಲಿ ಸೈಜವಾದ ಪ್ರೇಮಾತಿಶಯವು ಮೂಡಲು ಅವಕಾಶವಾಗುವುದು. ಹೀಗೆ ಅದ್ವೈತಭಾವದಲ್ಲೂ ಭಕ್ತಿಗೆ ಅವಕಾಶವಿದೆ ಎಂದು ಕೆಲವರು ಸಮರ್ಥಿಸುವುದಿದೆ.

ಭಕ್ತಿಯ ಈ ಸ್ವರೂಪನಿರೂಪಣೆಯು ಗೀತೆಯಲ್ಲಿ ಮಾಡಿದ ಭಕ್ತಿಯ ವರ್ಣನೆಗೆ ವಿರುದ್ಧವಾಗಿದೆ.

ಮನ್ಮನಾ ಭವ ಮದ್ಭಕ್ತೋ ಮದ್ಯಾಜೀ ಮಾಂ ನಮಸ್ಕುರು ।

-''ನನ್ನ ಭಕ್ತನಾಗಿ ನನ್ನನ್ನು ನಮಸ್ಕರಿಸುತ್ತ ನನ್ನ ಪೂಜಾರೂಪವಾಗಿ ಕರ್ತವ್ಯವನ್ನು ಮಾಡು'' ಎಂದು ಪರಮಾತ್ಮನು ಭಕ್ತಿ ಮತ್ತು ಅದರ ಕಾರ್ಯವನ್ನು ನಿರೂಪಿಸಿದ್ದಾನೆ. ಭಕ್ತನಲ್ಲಿ ನಮಸ್ಕಾರಭಾವವಿರಬೇಕಿದ್ದರೆ ತಾನು ಬ್ರಹ್ಮನೆನ್ನುವ ಐಕ್ಯಜ್ಞಾನವು ಭಕ್ತಿಯಾಗಿರಲು ಹೇಗೆ ಸಾಧ್ಯ? ಶಾಸ್ತ್ರಗ್ರಂಥಗಳಲ್ಲಿ ಎಲ್ಲಿ ಭಕ್ತಿಯ ನಿರೂಪಣೆಯನ್ನು ಮಾಡಲಾಗಿದೆಯೋ ಅಲ್ಲಿ ಎಲ್ಲ ಕಡೆಗಳಲ್ಲಿಯೂ ಭಗವಂತನ ಬಗ್ಗೆ ಈ ನಮ್ರತೆ, ಸೇವಾಭಾವ, ಅವನ ಒಡೆತನದ ಪರಿಜ್ಞಾನ, ಅವನ ಶಾಸನಕ್ಕೆ ವಿಧೇಯತೆ ಮೊದಲಾದವು ಭಕ್ತಿಯ ಅಭೇದ್ಯ ಅಂಗಗಳಾಗಿ ವರ್ಣಿತವಾಗಿರುವುದು ಕಂಡುಬರುತ್ತವೆ.

ತಮೇವ ಶರಣಂ ಗಚ್ಛ ।
ಮಾಮೇವ ಶರಣಂ ವ್ರಜ ।

ಎಂಬುದಾಗಿ ಭಕ್ತನಿಗೆ ಶರಣಾಗತಿಯನ್ನು ಬೋಧಿಸಿರುವುದನ್ನೂ

ಅಹಂ ತ್ವಾ ಸರ್ವಪಾಪೇಭ್ಯೋ ಮೋಕ್ಷಯಿಷ್ಯಾಮಿ... ।
ಯೋಗಕ್ಷೇಮಂ ವಹಾಮ್ಯಹಂ ।

ಎಂದು ಭಕ್ತನನ್ನು ಸರ್ವಾತ್ಮನಾ ತಾನು ಸಂರಕ್ಷಿಸುವುದಾಗಿ ಭಗವಂತನು

ಅಭಯಪ್ರದಾನ ಮಾಡಿರುವುದನ್ನೂ ಗಮನಿಸಿದರೆ ಭಕ್ತಿಯಲ್ಲಿ ದ್ವೈತಭಾವವು ಎಷ್ಟು ಹಾಸುಹೊಕ್ಕಾಗಿದೆ ಎಂಬುದು ವೇದ್ಯವಾಗುತ್ತದೆ. ತನ್ನನ್ನು ಅತಿಯಾಗಿ ಪ್ರೀತಿಸುವುದು ಸಾಮಾನ್ಯವಾದ ಮಾನವಧರ್ಮವಾಗಿದೆ. ತನಗಿಂತಲೂ ತನ್ನ ದೇಶವನ್ನೂ ಸಮಾಜವನ್ನೂ ಹೆಚ್ಚು ಪ್ರೀತಿಸಿ ಅದಕ್ಕಾಗಿ ಆತ್ಮಸಮರ್ಪಣ ಮಾಡುವವನನ್ನು ಸಾಮಾನ್ಯ ಜನರ ಮಟ್ಟವನ್ನು ಮೀರಿ ನಿಂತ ಉದಾತ್ತ ವ್ಯಕ್ತಿ ಎಂದು ಕರೆಯುತ್ತಾರೆ. ಜಗತ್ತಿನ ಸಾರಸರ್ವಸ್ವವೆನಿಸಿದ ಪರಾತ್ಪರ ವಸ್ತುವನ್ನು ತನಗಿಂತಲೂ ಹೆಚ್ಚು ಪ್ರೀತಿಸಿ, ಅದಕ್ಕಾಗಿ ತನ್ನ ಸರ್ವಸ್ವವನ್ನೂ ಸಮರ್ಪಿಸುವ ಮನೋವೃತ್ತಿಯೇ ಪರಮೋಚ್ಚ ಭಾವನೆ ಎನಿಸುವುದು. ತಾನು, ತನ್ನವರು ಎಂಬ ಸ್ವಾರ್ಥಪೂರ್ಣ ಮನೋವೃತ್ತಿಯಿಂದ ಮಾಡುವ ಪ್ರೀತಿಯು ಭಕ್ತಿ ಎನಿಸದು. ಬ್ರಹ್ಮನನ್ನು ಪ್ರೀತಿಸುವಾಗಲೂ ಅವನೇ ತಾನೆಂದಾರೋಪಿಸಿ ತನ್ನನ್ನು ಪ್ರೀತಿಸುವಂತಹ ಸ್ವಾರ್ಥಸಂಕುಚಿತ ಪ್ರೀತಿಯನ್ನು ಅವನಲ್ಲಿ ಮಾಡಿದರೆ ಅದು ಭಕ್ತಿಯಾಗಲಾರದು. ಪ್ರತಿಯೊಬ್ಬನೂ ತನ್ನನ್ನು ಸಹಜವಾಗಿ ಪ್ರೀತಿಸುತ್ತಾನೆ. ಅದನ್ನು ಭಕ್ತಿಯೆಂದು ಯಾರೂ ಕರೆಯುವುದಿಲ್ಲ. ಪರಮಾತ್ಮನನ್ನು ಅನ್ಯನೆಂದು ತಿಳಿದು, ಅವನ ಶ್ರೇಷ್ಠತೆ ಹಾಗೂ ಮಹಾಮಹಿಮೆಗಳನ್ನೂ ಅರಿತು ಆನಂದಪುಲಕಿತನಾಗಿ ಸ್ವಾರ್ಥದ ಮೇರೆಯನ್ನು ಮೀರಿ, ತನ್ನನ್ನು ಪ್ರೀತಿಸುವುದಕ್ಕಿಂತಲೂ ಅತಿಶಯಿತವಾಗಿ ಭಗವಂತನನ್ನು ಪ್ರೀತಿಸುವ ಉದಾತ್ತ ಪ್ರೇಮವೇ ಭಕ್ತಿಯಾಗಿರುವುದು. ಈ ಭಕ್ತಿಯಲ್ಲಿ ಅದ್ವೈತಭಾವಕ್ಕೆ ಅವಕಾಶ ಎಲ್ಲಿಯದು? ಆದುದರಿಂದ ಭಕ್ತಿ ಹಾಗೂ ಜೀವಬ್ರಹ್ಮೈಕ್ಯಭಾವ ಇವೆರಡು ಪರಸ್ಪರ ವಿರುದ್ಧ ವಿಚಾರಗಳಾಗಿದ್ದು ಇವೆರಡರಲ್ಲಿ ಒಂದನ್ನು ಮಾತ್ರ ನಾವು ಪರಿಗ್ರಹಿಸಬೇಕಾಗುವುದರಿಂದ ಗೀತೆಯಲ್ಲಿ ಹೇಳಿದ ನಮಸ್ಕಾರ, ಶರಣಾಗತಿಭಾವಗಳ ಹಿನ್ನೆಲೆಯಾಗಿರುವ ಭಕ್ತಿಯನ್ನೇ ನಾವು ಆಶ್ರಯಿಸಿ ಆಧ್ಯಾತ್ಮಿಕ ಮಾರ್ಗದಲ್ಲಿ ಮುನ್ನಡೆಯುವುದು ಹಿತಕರವಾಗಿದೆ.

## ಭಕ್ತಿಯೂ ಆತ್ಮವಿಕಾಸವೂ

ಭಕ್ತಿಯ ವಿಚಾರದಲ್ಲಿ ಇನ್ನೂ ಕೆಲವು ಆಕ್ಷೇಪಣೆಗಳಿವೆ. ಭಕ್ತಿಯು ನಮ್ಮಲ್ಲಿ ಹೀನಭಾವವನ್ನು (Inferiority Complex) ಪ್ರಚೋದಿಸುತ್ತದೆ. ಭಗವಂತನು

ಸ್ವಾಮಿ, ನಾನು ಅವನ ದಾಸನೆನ್ನುವ ಭಾವನೆಯಿಂದ ತನ್ನಲ್ಲಿ ನೈಚ್ಯಾನುಸಂಧಾನವು ಬೆಳೆದು ಅದು ಆತ್ಮಾಪಕರ್ಷಕ್ಕೆ ಕಾರಣವಾಗುವುದು. ಈ ಭಕ್ತಿಪಂಥದಿಂದಲೇ ಭಾರತವು ಪಾರತಂತ್ರ್ಯಕ್ಕೆ ಗುರಿಯಾಗಬೇಕಾಯಿತು. ತಾನು ಭಗವಂತನ ಸೇವಕನೆನ್ನುವ ಮನೋವೃತ್ತಿ ಇರುವವರೆಗೆ ನಮ್ಮಲ್ಲಿ ಔನ್ನತ್ಯ ಹಾಗೂ ಸದ್ಗುಣಗಳ ವಿಕಾಸವಾಗಲಾರದು. ಮುಕ್ತಿಯನ್ನು ಹೊಂದಿದ ಮೇಲೂ ಪರಮಾತ್ಮನು ನಮಗೆ ಸ್ವಾಮಿಯಾಗಿಯೇ ಇರುವುದಾದರೆ ಈ ಪಾರತಂತ್ರ್ಯದಲ್ಲಿ ನಮಗೆ ಏನು ಆನಂದವಿದೆ? ಆದುದರಿಂದ ದಾಸ್ಯಭಾವವನ್ನು ಪ್ರಚೋದಿಸುವ ಭಕ್ತಿಪಂಥವು ವ್ಯಕ್ತಿತ್ವದ ವಿಕಾಸಕ್ಕೂ ರಾಷ್ಟ್ರೀಯ ಉನ್ನತಿಗೂ ಪ್ರತಿಕೂಲವಾಗಿದೆ ಎಂಬ ವಿಚಿತ್ರ ವಾದವನ್ನು ಕೆಲವರು ಮಂಡಿಸಿದ್ದಾರೆ. ಸ್ವಾಮಿ ವಿವೇಕಾನಂದರೇ ತಮ್ಮ ಉಪನ್ಯಾಸದಲ್ಲಿ ಈ ವಿಚಾರವನ್ನು ಬಲವಾಗಿ ಪ್ರತಿಪಾದಿಸಿದ್ದುಂಟು. ಅವರ ಅಭಿಪ್ರಾಯದಲ್ಲಿ ಭಕ್ತಿಯ ಮೇಲಿನ ಜಿಗುಪ್ಸೆಯೇ ಬೌದ್ಧ ಮತದ ಆವಿರ್ಭಾವಕ್ಕೆ ಕಾರಣವಾಯಿತು. ಪರಮಾತ್ಮನ ದಾಸನಾಗಿ ಉಳಿಯುವ ಪಾರತಂತ್ರ್ಯದ ಮುಕ್ತಿಗಿಂತ ಆತ್ಮನಾಶವೇ ಮೇಲೆಂಬ ಭಾವನೆಯು ಪ್ರಬಲವಾಗಿ, ಅದೇ ಬೌದ್ಧಮತದ ಉದಯಕ್ಕೆ ಕಾರಣವಾಯಿತು ಎಂದು ನಿರೂಪಿಸಿದ್ದಾರೆ.

ಈ ವಾದದಲ್ಲಿ ಏನೂ ಹುರುಳಿಲ್ಲ. ಭಾರತ ದೇಶದಲ್ಲಿ ಉದಯಿಸಿರುವ ಮತಗಳಲ್ಲಿ ಮಾತ್ರ ಭಕ್ತಿಗೆ ಮಹತ್ತ್ವವಿರುವುದಲ್ಲ. ಇಸ್ಲಾಂ, ಕ್ರೈಸ್ತ ಮುಂತಾದ ಮತಗಳಲ್ಲೂ ಭಕ್ತಿಗೆ ಮಹತ್ತ್ವದ ಸ್ಥಾನವಿದೆ. ಆ ಮತಾನುಯಾಯಿಗಳೂ ಮತೀಯ ಆವೇಶದಿಂದ ಮುನ್ನಡೆದು ಇತರ ದೇಶ ಹಾಗೂ ಜನಾಂಗಗಳನ್ನಾಕ್ರಮಿಸಿ ನೂರಾರು ವರ್ಷಗಳವರೆಗೆ ಆಳಿದ ಪ್ರಸಂಗಗಳೇ ಇತಿಹಾಸದಲ್ಲಿ ತುಂಬಿವೆ. ಹೀಗಿರುವಾಗ ಭಾರತವು ಭಕ್ತಿಗೆ ಮಹತ್ತ್ವದ ಸ್ಥಾನವನ್ನು ನೀಡಿದ್ದರಿಂದಲೇ ಅದು ಪಾರತಂತ್ರ್ಯವನ್ನನುಭವಿಸಬೇಕಾಯಿತೆಂದು ಹೇಳುವುದರಲ್ಲಿ ಅರ್ಥವೇ ಇಲ್ಲ.

ಭಗವಂತನೆಂದರೆ ಅನಂತ ಗುಣಗಳ ಮೂರ್ತಿಯೇ ಆಗಿರುವನು. ಪರಮಾತ್ಮನು ಮತ್ತು ಅವನ ಗುಣಗಳು ಬೇರೆ ಅಲ್ಲ. ದೀಪ ಮತ್ತು ಅದರ ಬೆಳಕನ್ನು, ಸಕ್ಕರೆ ಮತ್ತು ಅದರ ಸಿಹಿಯನ್ನು ಬೇರ್ಪಡಿಸಲು ಶಕ್ಯವಾಗದು. ಅನಂತ

ಗುಣಗಳ ಸಮುದಾಯವೇ ಪರಮಾತ್ಮನಾಗಿರುವನು. ಅವನೇ ಸಕಲ ಜೀವರಿಗೂ ಆದರ್ಶಮೂರ್ತಿ ಎನಿಸಿದ್ದಾನೆ. ಈ ಜಡ ಔಪಾಧಿಕ ರೂಪವನ್ನು ಕಿತ್ತೊಗೆದು ಪರಮಾತ್ಮನಿಗಿರುವಂತಹ ಸದ್ಗುಣರೂಪವಾದ ವ್ಯಕ್ತಿತ್ವವನ್ನು ಅಭಿವ್ಯಕ್ತಗೊಳಿಸುವುದೇ ನಮ್ಮೆಲ್ಲರ ಗುರಿಯಾಗಿದ್ದು ಇದನ್ನೇ ಮುಕ್ತಿ ಎಂದು ಕರೆಯುವೆವು. ಆದುದರಿಂದ ಪರಮಾತ್ಮನ ಭಕ್ತನಾಗಿ ಅವನ ದಾಸನೆನಿಸಿಕೊಳ್ಳುವುದೆಂದರೆ ಅನಂತ ಸದ್ಗುಣಗಳ ದಾಸ್ಯವನ್ನು ಸ್ವೀಕರಿಸಿದಂತೆ. ಅನಂತ ಸದ್ಗುಣಗಳಿಗೆ ತನ್ನನ್ನು ಸಮರ್ಪಿಸಿಕೊಂಡ ಮೇಲೆ ಅಲ್ಲಿ ವ್ಯಕ್ತಿತ್ವದ ಅವನತಿಯುಂಟಾಗಲು ಅವಕಾಶವೆಲ್ಲಿದೆ? ಸ್ವಾರ್ಥ, ರಾಗ, ದ್ವೇಷಗಳ ದಾಸರಾಗಿ ಸ್ವಚ್ಛಂದ ವೃತ್ತರಾಗಿ ವ್ಯಕ್ತಿತ್ವದ ಅಧೋಗತಿ ಪಡೆಯುವುದಕ್ಕಿಂತ ಒಂದು ಉಚ್ಚತತ್ತ್ವದ, ಉದಾತ್ತ ಧ್ಯೇಯದ ದಾಸರಾಗಿ ನಿಷ್ಠೆಯಿಂದ ಬಾಳುವುದರಲ್ಲೇ ಆತ್ಮಗೌರವವಿದೆ. ರಾಷ್ಟ್ರದ ಘಟನೆಗೆ ಬದ್ಧನಾಗಿ, ಅದರ ನಿಯಮ ನಿರ್ಬಂಧಗಳಿಗೆ ಒಳಗಾಗಿ ಬಾಳನ್ನು ಸಾಗಿಸುವುದರಿಂದ ರಾಷ್ಟ್ರಸೇವಕನ ಸ್ವಾಭಿಮಾನಕ್ಕೆ ಏನಾದರೂ ವ್ಯತ್ಯಯವಾಗುವುದೆ? ಅದರಂತೆ ಭಗವಂತನ ಭಕ್ತನಾಗಿ ಅವನು ನಿರ್ದಿಷ್ಟಪಡಿಸಿದ ಹಾಗೂ ವಿಶ್ವದ ಸಂಸ್ಥಿತಿಗೆ ಕಾರಣವಾದ ನಿಯಮ, ಶಾಸನಗಳಿಗೆ ವಿಧೇಯನಾಗಿ ವರ್ತಿಸುವುದರಲ್ಲಿ ಭಕ್ತನು ಆತ್ಮಗೌರವವನ್ನೇ ಅನುಭವಿಸುವನು.

**ದಾಸೋऽಹಂ ಕೋಸಲೇಂದ್ರಸ್ಯ ।**

ರಾಮಾಯಣ

ಎಂದು ಶ್ರೀರಾಮಚಂದ್ರನ ದಾಸನೆಂದು ಹೇಳಿಕೊಳ್ಳುವಲ್ಲಿ ಮಾರುತಿಗೆ ಇಂತಹ ಹೆಗ್ಗಳಿಕೆ ಇದೆ. ಭಗವಂತನ ಭಕ್ತನಾಗಿ ಉದಾತ್ತ ಧ್ಯೇಯಕ್ಕೆ ತನ್ನನ್ನು ಅರ್ಪಿಸಿಕೊಂಡ ವ್ಯಕ್ತಿಯು ರಾಗ-ದ್ವೇಷಗಳಿಗೆ ಬಲಿಯಾಗಿ ಅವನತಿಯ ದಾರಿ ತುಳಿಯಲಾರ. ಸದ್ಗುಣಮೂರ್ತಿಯಾದ, ಜಗತ್ತಿನ ಏಕೈಕ ಆದರ್ಶಪುರುಷನಾದ ಪರಮಾತ್ಮನಲ್ಲಿರುವ ಅಖಂಡನಿಷ್ಠೆಯಿಂದ ತನ್ನ ವ್ಯಕ್ತಿತ್ವದಲ್ಲಿ ಅಡಕವಾಗಿರುವ ಸದ್ಗುಣಗಳನ್ನು ಅಭಿವ್ಯಕ್ತಗೊಳಿಸಲು ಅವನೇ ಸಮರ್ಥನಾಗುವನು. ಹೀಗೆ ಭಕ್ತಿಯು ಆತ್ಮಾಭಿವ್ಯಕ್ತಿಗೂ ಸದ್ಗುಣಗಳ ವಿಕಾಸಕ್ಕೂ ಮುಖ್ಯ ಸಾಧನವಾಗಿದ್ದು ನಮ್ಮಲ್ಲಿ ಮೂಡಬಹುದಾದ ಮಾನಸಿಕ ದುಷ್ಟ ವೃತ್ತಿಗಳನ್ನೆಲ್ಲ ತೊಡೆದುಹಾಕಿ

ಕರ್ತವ್ಯನಿಷ್ಠೆಯನ್ನು ಜಾಗೃತಗೊಳಿಸುವುದು. ಪರಮಾತ್ಮನ ಭಕ್ತನಾದವನಿಗೆ ಜಗತ್ತಿನ ಸುಸ್ಥಿತಿಗಾಗಿ, ಮಾನವತೆಯ ಕಲ್ಯಾಣಕ್ಕಾಗಿ ಪರಮಾತ್ಮನು ಏರ್ಪಡಿಸಿದ ನೀತಿ, ನಿಯಮಗಳನ್ನು ಶ್ರದ್ಧೆಯಿಂದ ನಡೆಸುವ ಪ್ರವೃತ್ತಿಯು ಸಹಜವಾಗಿ ಉಂಟಾಗುವುದು. ಪರಮಾತ್ಮನಿಗೆ ಹೆದರಿ, ಅವನ ಶಾಸನವನ್ನು ಮೀರುವುದರಿಂದ ಒದಗಬಹುದಾದ ಲೌಕಿಕ ಪಾರತ್ರಿಕ ಅನಿಷ್ಟಗಳಿಗೆ ಅಂಜಿ, ಸಾಮಾನ್ಯ ವ್ಯಕ್ತಿಯು ಸ್ವೇಚ್ಛಾಚಾರಿಯಾಗದೆ ಧರ್ಮ, ಕರ್ಮ, ನಿಯಮಗಳನ್ನು ಪರಿಪಾಲಿಸುತ್ತಿದ್ದರೆ, ಭಗವಂತನ ನಿಜವಾದ ಭಕ್ತನು, ಆತನ ಮೇಲಿನ ನಿರ್ವ್ಯಾಜ ಅಖಂಡ ಪ್ರೇಮದಿಂದಲೇ ಅವನ ಆದೇಶವನ್ನು ಸ್ವಯಂಪ್ರೇರಣೆಯಿಂದ ಅಕ್ಷರಶಃ ಪಾಲಿಸಿ ಆದರ್ಶ ಜೀವನವನ್ನು ನಡೆಸುವನು.

**ಕುರ್ವನ್ನೇವೇಹ ಕರ್ಮಾಣಿ ಜಿಜೀವಿಷೇತ್ ಶತಂ ಸಮಾಃ ।**

ಈಶೋಪನಿಷತ್ತು

ಜಗತ್ತು ಈಶಾವಾಸ್ಯವೆಂದು ಭಾವಿಸಿ ಭಗವಂತನ ಸರ್ವವ್ಯಾಪಕತೆಯನ್ನು, ಸರ್ವಸ್ವಾಮಿತ್ವವನ್ನು ತಿಳಿದವನು ಸ್ವಕರ್ತವ್ಯವನ್ನು ಮಾಡದೆ ನಿತ್ಯಜೀವನವನ್ನು ನಡೆಸಲಾರನು. ಜಗತ್ತಿನ ವ್ಯವಸ್ಥೆಗೆ ಹಾನಿಕರವಾಗುವ, ಪರಮಾತ್ಮನಿಗೆ ಅಪ್ರಿಯವಾದ ಸ್ವೇಚ್ಛಾವ್ಯವಹಾರಗಳಲ್ಲಿ ಅವನ ಮನಸ್ಸು ಸರ್ವಥಾ ತೊಡಗಲಾರದು. ಭಗವತ್‌ಪ್ರೇಮದ ಅಮೃತರಸದಲ್ಲಿ ಮಿಂದ ಅವನ ಮನಸ್ಸಿನಲ್ಲಿ ಯಾವ ವಿಕೃತಿ ವಕ್ರತೆಗಳೂ ಇರಲಾರವು. ರಾಗದ್ವೇಷಗಳ ದಾಸನಾಗಿರದೆ ಸುಗುಣಮೂರ್ತಿಯಾದ ಭಗವಂತನಿಗೆ ತನ್ನನ್ನು ಸಮರ್ಪಿಸಿ ಕೊಂಡು ಉದಾತ್ತ ಧ್ಯೇಯದಿಂದ, ಕರ್ತವ್ಯನಿಷ್ಠೆಯಿಂದ ಆತ್ಮವಿಕಾಸದ ಮಹಾಸಾಧನೆಯಲ್ಲಿ ಉತ್ಸಾಹದಿಂದ ಮುನ್ನಡೆಯಲು ಅದಮ್ಯ ಆತ್ಮಬಲವನ್ನು ಭಕ್ತಿಯು ನಮಗೆ ನೀಡುವುದು. ಜೀವನದ ಸಂಘರ್ಷದಲ್ಲಿ ಭಕ್ತಿಯು ನಮಗೆ ಸಂಜೀವನೌಷಧವೇ ಆಗಿದೆ. ನಮ್ಮ ಕ್ಷತ, ವಿಕಾರಗಳನ್ನೆಲ್ಲ ಮಾಯಗೊಳಿಸಿ ಆತ್ಮವನ್ನು ಸರ್ವಾಂಗಸುಂದರಗೊಳಿಸಲು ಇದೊಂದೇ ಶಕ್ತವಾಗಿದೆ. ಇಂತಹ ಭಕ್ತಿಯನ್ನು ಹೀನಭಾವನೆಯಿಂದ ನೋಡುವುದೆಂದರೆ ಆತ್ಮೋತ್ಕರ್ಷದ ಮಹಾದ್ವಾರವನ್ನೇ ಮುಚ್ಚಿದಂತೆ. ಸಕಲ ಸದ್ಗುಣಗಳ ಮೂಲಪ್ರಚೋದನೆಯೇ ಭಕ್ತಿಯಾಗಿರುವುದರಿಂದ ಲೋಕದಲ್ಲಿ ಭಕ್ತಿಭಾವವು ಶಿಥಿಲವಾಗದಂತೆ ನಾವು

ಎಚ್ಚರದಿಂದಿರುವುದು ಅವಶ್ಯವಿದೆ.

ಈ ಭಕ್ತಿಯ ಬಲದಿಂದಲೇ ಅನಂತಕಲ್ಯಾಣಗುಣಾಕರನಾದ ಪರಮಾತ್ಮನನ್ನು ಸಾಕ್ಷಾತ್ಕರಿಸಿ ಸಚ್ಚಿದಾನಂದರೂಪವಾದ ನಮ್ಮ ವ್ಯಕ್ತಿತ್ವದಲ್ಲಿ ಹುದುಗಿರುವ ಅಂತಹ ಸದ್ಗುಣಗಳನ್ನು ಪ್ರಕಟಪಡಿಸಲು ನಮಗೆ ಸಾಧ್ಯವಾಗುವುದು. ಕಲ್ಯಾಣಗುಣನಿಧಿಯಾದ ಪರಮಾತ್ಮನಂತಿರುವ ಸುಂದರ ವ್ಯಕ್ತಿತ್ವವನ್ನು ನಾವು ಹೊಂದಬೇಕಾದರೆ, ಅಂತಹ ಆದರ್ಶ ಪುರುಷನಲ್ಲಿ ಆತ್ಯಂತಿಕ ನಿಷ್ಠೆ ಹಾಗೂ ಪರಮಪ್ರೇಮವನ್ನು ಮಾಡದೆ ಬೇರಾವ ವಿಧಾನವೂ ಇಲ್ಲ. ಬಹುಕಾಲದವರೆಗೆ ಮಣ್ಣಿನಲ್ಲೇ ಬೆರೆತುಕೊಂಡಿರುವ ಕಬ್ಬಿಣವು ತನ್ನ ಕಾಠಿಣ್ಯವನ್ನು ತೊರೆದು ಆ ಮಣ್ಣಿನ ಗುಣರೂಪಗಳನ್ನೇ ಪಡೆಯುವಂತೆ ಭಕ್ತಿಪೂರ್ವಕವಾದ ನಿರಂತರ ಭಗವಚ್ಚಿಂತನದಿಂದ ನಾವು ಭಗವಂತನಂತೆ ಕಲ್ಯಾಣಗುಣಾತ್ಮಕವಾದ ಸುಂದರ ವ್ಯಕ್ತಿತ್ವವನ್ನು ಹೊಂದಬಲ್ಲೆವು.

> ಕೀಟಃ ಪೇಶಸ್ಕೃತಾ ರುದ್ಧಃ ಕುಡ್ಯೇ ಯಾಂತಮನುಸ್ಮರನ್ ।
> ಸಂರಂಭಭಯಯೋಗೇನ ವಿಂದತೇ ತತ್ಸರೂಪತಾಮ್ ॥
>
> - ಭಾಗವತ

ಹೀಗೆ ಕಳೆದುಹೋದ ಅಥವಾ ಮುಚ್ಚಿಹೋದ ನಮ್ಮ ದಿವ್ಯ ಭವ್ಯ ರೂಪವನ್ನು ಪ್ರಕಟಗೊಳಿಸಿ ನಮ್ಮ ಆತ್ಯಂತಿಕ ಪೂರ್ಣತೆಗೆ ಕಾರಣವಾದ ಭಕ್ತಿಯು ನಮ್ಮ ಆತ್ಮದ ಅಪಕರ್ಷಕ್ಕೆ ಹೇಗೆ ನಿಮಿತ್ತವಾಗಬಲ್ಲದು? ನಮ್ಮನ್ನು ಕ್ಷುದ್ರತೆಯಿಂದ ಅನಂತತೆಯ ಕಡೆಗೊಯ್ಯುವ ಮಹಾಸಾಧನವೇ ಈ ಭಕ್ತಿಯಾಗಿರುವುದು.

## ಹಿಂದೂ ಧರ್ಮದಲ್ಲಿ ಪರದೇವತೆಯೊಂದೇ

ಇನ್ನು ಮುಂದೆ ಈ ಭಕ್ತಿಗೆ ಕೇಂದ್ರವಾಗಬಹುದಾದ ಪರವಸ್ತುವು ಯಾವುದೆಂಬುದನ್ನು ನಾವು ವಿಮರ್ಶಿಸಬೇಕಾಗಿದೆ. ನಮ್ಮ ಧರ್ಮದಲ್ಲಿ ಸಾವಿರಾರು ದೇವತೆಗಳಿಗೆ ಸ್ಥಾನವಿದೆ. ಈ ದೇವತೆಗಳಲ್ಲಿ ನಾವು ಯಾರನ್ನು ಭಜಿಸೋಣ? ಇದೇ ಸಾಧಕರ ಮುಂದಿರುವ ಪ್ರಶ್ನೆಯಾಗಿದೆ. ಹಿಂದುಗಳು

ಮೂವತ್ತು ಕೋಟಿಯಾಗಿದ್ದರೆ ಅವರ ದೇವತೆಗಳು ಮೂವತ್ತಮೂರು ಕೋಟಿ ಎಂದು ಇತರಮತೀಯರು ಅವಹೇಳನ ಮಾಡುವುದೂ ಇದೆ. ಕಷ್ಟ-ಸಂಕಟಗಳು ಬಂದಾಗ ಕ್ರೈಸ್ತ, ಮುಸಲ್ಮಾನ ಮುಂತಾದ ಮತದ ಅನುಯಾಯಿಗಳು ತಮ್ಮ ಧರ್ಮದ ಪ್ರಕಾರವಾಗಿ ಒಂದು ಪರದೈವವನ್ನು ಶ್ರದ್ಧೆಯಿಂದ ಪ್ರಾರ್ಥಿಸಿ ತಮ್ಮನ್ನು ಅನರ್ಥದಿಂದ ಪಾರುಮಾಡಿಕೊಳ್ಳಬಲ್ಲರು. ಇಂತಹ ಪ್ರಾರ್ಥನೆಗೆ ಆವಶ್ಯಕವಾದ ದೃಢನಿಷ್ಠೆಗೆ ಹಿಂದುಗಳು ಮಾತ್ರ ಎರವಾಗುತ್ತಾರೆ. ಸಂಕಟಪ್ರಸಂಗದಲ್ಲಿ ನೂರಾರು ದೇವತೆಗಳು ಅವರ ಚಿತ್ತರಂಗದಲ್ಲಿ ಕಾಣಿಸಿಕೊಳ್ಳುವರು. ಯಾವ ದೇವತೆಯನ್ನು ಆಶ್ರಯಿಸಲಿ, ಯಾರನ್ನು ತೊರೆಯಲಿ ಎಂಬ ಗೊಂದಲದಿಂದ ಅವರ ಚಿತ್ತವು ವಿಭ್ರಾಂತವಾಗಿ ಯಾರನ್ನೇ ಆಗಲಿ ದೃಢಮನಸ್ಸಿನಿಂದ ಚಿಂತಿಸಲು ಶಕ್ಯವಾಗುವುದಿಲ್ಲ. ನೂರಾರು ದೇವತೆಗಳನ್ನು ನಂಬಿರುವ ಹಿಂದುಗಳಲ್ಲಿ ದೃಢತೆ ಹಾಗೂ ಏಕನಿಷ್ಠೆ ಇಲ್ಲದೆ ಪೂಜಾ, ಪ್ರಾರ್ಥನೆಗಳೆಲ್ಲ ಸರಿಯಾದ ಫಲವನ್ನೇ ನೀಡಲಾರವು. ಇತರ ಮತೀಯರು ಹಿಂದೂ ಮತದ ಮೇಲೆ ಹೊರಿಸುವ ಮುಖ್ಯ ಆಕ್ಷೇಪಣೆಗಳಲ್ಲಿ ಇದೂ ಒಂದಾಗಿದೆ.

ಆದರೆ ಬ್ರಹ್ಮಸೂತ್ರ, ವೇದ, ಉಪನಿಷತ್ತುಗಳನ್ನು ಪರಾಮರ್ಶಿಸಿದರೆ ಇಂತಹ ಆಕ್ಷೇಪಣೆಗಳಿಗೆ ಎಡೆಯೇ ಇರುವುದಿಲ್ಲ. ಹಿಂದೂ ಧರ್ಮವು ಅನೇಕ ದೇವತೆಗಳನ್ನು ಒಪ್ಪಿದರೂ ಸರ್ವೋತ್ತಮವಾದ ಪರಬ್ರಹ್ಮ ವಸ್ತುವು ಒಂದೇ ಎಂದು ಹೇಳುತ್ತದೆ. ವೇದ, ಪುರಾಣಗಳಲ್ಲಿ ಬೇರೆಬೇರೆ ಕಡೆಗಳಲ್ಲಿ ಇಂದ್ರ, ಅಗ್ನಿ, ರುದ್ರ ಮೊದಲಾದವರನ್ನು ಸರ್ವೋತ್ತಮರೆಂದು ವರ್ಣಿಸಿದ್ದರೂ ಅವೆಲ್ಲ ಶಬ್ದಗಳಿಂದ ಪ್ರತಿಪಾದ್ಯವಾದ ವಸ್ತು ಒಂದೇ ಆಗಿದೆ. ಒಂದೊಂದು ದೇವತೆಯನ್ನು ನಿರೂಪಿಸುವ ಸಂದರ್ಭದಲ್ಲಿ ಆಯಾಯ ದೇವತೆಯೇ ಸರ್ವೋತ್ತಮವೆಂದು ಅವರವರ ಮುಖಕ್ಕೆ ತಕ್ಕಂತೆ ನುಡಿಯುವ ಸ್ತೋತ್ರಪಾಠಕ ನೀತಿಯನ್ನು ಅಪೌರುಷೇಯವಾದ ವೇದವು ಅನುಸರಿಸಲಾರದು. ಅದು ಪರಬ್ರಹ್ಮವಸ್ತುವಿನ ಅಧೀನವಾಗಿ ಕಾರ್ಯಮಾಡುವ ಅನೇಕ ದೇವತೆಗಳ ನ್ನೊಪ್ಪಿದೆ. ಈ ಎಲ್ಲ ದೇವತೆಗಳಿಗೆ ನಿಯಾಮಕನಾಗಿ ಈ ಶಬ್ದಗಳಿಂದಲೇ ಪ್ರತಿಪಾದ್ಯನಾದ ದೇವತಾ ಸಾರ್ವಭೌಮನಾದ ಏಕಮೇವಾದ್ವಿತೀಯ ಪರಬ್ರಹ್ಮನನ್ನೂ ಅಂಗೀಕರಿಸಿದೆ. ಉಪನಿಷತ್ತುಗಳಲ್ಲಿ -

**ಭೀಷಾಸ್ಮಾದ್ವಾತಃ ಪವತೇ ಭೀಷೋದೇತಿ ಸೂರ್ಯಃ ।**

-ತೈತ್ತಿರೀಯೋಪನಿಷತ್

ಎಂದು ಮೊದಲಾಗಿ ಕೆಲವು ಕಡೆ ಪರಮಾತ್ಮನ ಅಧೀನರೆಂದು ದೇವತೆಗಳನ್ನು ಬೋಧಿಸಿದ್ದರೆ,

**ಸಬ್ರಹ್ಮಾ ಸ ಶಿವಃ ..... ಸೇಂದ್ರಃ ।** -ನಾರಾಯಣೋಪನಿಷತ್

ಎಂದು ಇಂದ್ರ, ಅಗ್ನಿ, ಶಿವ ಮುಂತಾದ ಶಬ್ದಗಳಿಂದ ಒಬ್ಬನೇ ಪ್ರತಿಪಾದ್ಯನೆಂದು ನಿರೂಪಿಸಲಾಗಿದೆ. ಇವೆರಡನ್ನೂ ಸಮನ್ವಯದೃಷ್ಟಿಯಿಂದ ವಿಮರ್ಶಿಸಿದಾಗ ವಿಶ್ವದ ಸಾರ್ವಭೌಮ ಶಕ್ತಿಯ ಶಾಸನಕ್ಕೆ ಒಳಗಾದ ಲೋಕಪ್ರವರ್ತಕರಾದ ಅನೇಕ ದೇವತೆಗಳು ಮತ್ತು ಅವರಿಂದ ಬೇರೆಯಾದ, ಅವರ ಅಂತರ್ಯಾಮಿಯಾಗಿ ಇಂದ್ರ, ರುದ್ರ ಮುಂತಾದ ಸಕಲ ಶಬ್ದಗಳಿಂದ ಪ್ರತಿಪಾದ್ಯವಾದ ವಿಶ್ವದ ಸ್ವತಂತ್ರ ಸರ್ವೋತ್ತಮ ವಸ್ತು ಇವೆರಡನ್ನು ಹಿಂದೂ ಧರ್ಮವು ಅಂಗೀಕರಿಸಿದೆ ಎಂದೂ ಸ್ಪಷ್ಟವಾಗುವುದು. ಆದುದರಿಂದಲೇ ಗೀತೆಯು ಒಂದು ಕಡೆ -

**ಅಮೀ ಹಿ ತ್ವಾಂ ಸುರಸಂಘಾ ವಿಶಂತಿ**
**ಕೇಚಿದ್ಭೀತಾಃ ಪ್ರಾಂಜಲಯೋ ಗೃಣಂತಿ ।**

ಎಂದು ಪರಮಾತ್ಮನಿಗೆ ಹೆದರಿ ಅವನನ್ನು ಅಂಜಲಿಬಂಧದಿಂದ ಸ್ತುತಿಸುತ್ತಿರುವಂತೆ ದೇವತೆಗಳನ್ನು ಉಲ್ಲೇಖಿಸಿದ್ದರೆ, ಇನ್ನೊಂದು ಕಡೆ-

**ವಾಯುರ್ಯಮೋಽಗ್ನಿರ್ವರುಣಃ ಶಶಾಂಕಃ**
**ಪ್ರಜಾಪತಿಸ್ತ್ವಂ ಪ್ರಪಿತಾಮಹಶ್ಚ ।**

ನೀನೇ ವಾಯುವು. ಯಮ, ಅಗ್ನಿ, ವರುಣ, ಚಂದ್ರ ಇವರೆಲ್ಲರೂ ನೀನೇ ಎಂದು ಪರಮಾತ್ಮನನ್ನು ಸ್ತೋತ್ರ ಮಾಡಿದೆ. ಹೀಗೆ ಅನೇಕ ದೇವತೆಗಳನ್ನು ಅಂಗೀಕರಿಸಿಯೂ ಒಬ್ಬನೇ ಒಬ್ಬ ಸಾರ್ವಭೌಮ ದೇವತೆಯನ್ನು ಹಿಂದೂ ಧರ್ಮವು ಅಂಗೀಕರಿಸುವುದರಿಂದ ಹಿಂದೂ ಧರ್ಮವು ಅನೇಕ ದೇವತಾವಾದವೆಂದೂ ಅಲ್ಲಿ ಏಕನಿಷ್ಠೆ, ದೃಢಭಕ್ತಿಗಳಿಗೆ ಅವಕಾಶವಿಲ್ಲವೆಂದೂ ಆಕ್ಷೇಪಿಸುವುದರಲ್ಲಿ ಹುರುಳಿಲ್ಲ.

## ಶ್ರೀಕೃಷ್ಣನೇ ಪರದೇವತೆ

ಇಂತಹ ಸರ್ವೋತ್ತಮವಾದ ಪರತತ್ತ್ವ ಯಾವುದು? ಶ್ರುತಿ ಪುರಾಣಗಳಲ್ಲಿ ವರ್ಣಿತರಾದ ಪರಸ್ಪರ ಭಿನ್ನರಾದ ಅನೇಕ ದೇವತೆಗಳಲ್ಲಿ ಸಾರ್ವಭೌಮ ದೇವತೆಯಾದ ಪರಮಾತ್ಮನು ಯಾರೆಂಬುದನ್ನು ನಾವು ಹೇಗೆ ಗುರುತಿಸಿಕೊಳ್ಳಬೇಕು? ಈ ಪರವಸ್ತುವನ್ನು ಅರಸುವಲ್ಲಿ ಪುನಃ ಗೊಂದಲ ವಾಗುವ ಸಂದರ್ಭವಿದೆ. ಗೀತೆಯು ಈ ಪರತತ್ತ್ವದ ನಿರ್ದೇಶವನ್ನು ಸ್ಪಷ್ಟ ಶಬ್ದಗಳಿಂದ ಮಾಡಿ ನಮ್ಮ ಮನೋವ್ಯಾಕುಲತೆಯನ್ನು ದೂರಮಾಡಿದೆ.

**ಅಂತವತ್ತು ಫಲಂ ತೇಷಾಂ**
**ತದ್ಭವತ್ಯಲ್ಪಮೇಧಸಾಮ್ ।**
**ದೇವಾನ್ ದೇವಯಜೋ ಯಾಂತಿ**
**ಮದ್ಭಕ್ತಾ ಯಾಂತಿ ಮಾಮಪಿ ॥**

ದೇವತೆಗಳ ಉಪಾಸನೆಯಿಂದ ಅಲ್ಪ ಫಲಗಳು ದೊರೆಯಬಲ್ಲವು. ತನ್ನ ಭಕ್ತರು ತನ್ನ ಉಪಾಸನೆಯಿಂದ ಶಾಶ್ವತ ಫಲವನ್ನು ಪಡೆಯುವರು. ಈ ಮಾತಿನಿಂದ ಶ್ರೀವಿಷ್ಣುವು ದೇವತೆಗಳ ಸಾಲಿನಲ್ಲಿ ಸೇರಿದವನಲ್ಲ; ಜೀವರಿಗೆ ಮುಕ್ತಿದಾತನಾದ ಸಕಲ ದೇವತೆಗಳಿಗೆ ಒಡೆಯನಾದ ಪರಮಾತ್ಮನೇ ಆತನೆಂಬುದು ಸ್ಪಷ್ಟವಾಗುವುದು. ಗೀತೆಯಲ್ಲಿ ಎಲ್ಲ ಕಡೆಗಳಲ್ಲಿಯೂ ದೇವತೆಗಳ ಉಪಾಸನೆ ಹಾಗೂ ಶ್ರೀಕೃಷ್ಣನ ಉಪಾಸನೆ ಇವೆರಡನ್ನು ಪ್ರತ್ಯೇಕವಾಗಿ ವಿಂಗಡಿಸಿ ಶ್ರೀಕೃಷ್ಣನ ಭಕ್ತಿಯಿಂದಲೇ ಜನರಿಗೆ ಸಂಸಾರದಿಂದ ಬಿಡುಗಡೆ ಮತ್ತು ಶಾಶ್ವತ ಸುಖಲಾಭವಾಗುವುದೆಂದು ತಿಳಿಸಲಾಗಿದೆ. ಇದರಿಂದ ಪರದೇವತೆ ಯಾದ ವಸ್ತುವು ಶ್ರೀಹರಿಯೆಂಬುದೇ ಗೀತೆಯ ಆಶಯವೆಂದು ವಿಶದವಾಗು ವುದು. ಹನ್ನೊಂದನೆಯ ಅಧ್ಯಾಯದಲ್ಲಿಯಂತೂ ಶ್ರೀಕೃಷ್ಣನನ್ನೇ ವಾಯು, ಯಮ, ಅಗ್ನಿ, ವರುಣ ಎಂಬುದಾಗಿಯೂ ಸಕಲ ದೇವತೆಗಳ ಆಶ್ರಯವೆಂದೂ ಸ್ತುತಿಸಲಾಗಿದೆ. ಇದರಿಂದ ಸರ್ವದೇವತೆಗಳ ಶಬ್ದಗಳಿಂದ ಪ್ರತಿಪಾದ್ಯನಾದ ದೇವದೇವನು ಶ್ರೀಕೃಷ್ಣನೇ ಎಂಬ ಬಗ್ಗೆ ಯಾವ ಸಂಶಯವೂ ಉಳಿಯುವುದಿಲ್ಲ. ಅಂತೂ ಸಕಲ ಜಗಜ್ಜನ್ಮಾದಿಕಾರಣವೂ ಗುಣಪೂರ್ಣವೂ ದೋಷರಹಿತವೂ

ಸ್ವತಂತ್ರವೂ ಸರ್ವೋತ್ತಮವೂ ಆದ ತತ್ತ್ವವನ್ನೇ ನಾವು ಪರಮಾತ್ಮನೆಂದು ಕರೆಯುತ್ತೇವೆ.

**ಅತೋಽಶೇಷಗುಣೋನ್ನದ್ಧಂ ನಿರ್ದೋಷಂ ಯಾವದೇವ ಹಿ।**
**ತಾವದೇವೇಶ್ವರೋ ನಾಮ ....**

ಎಂಬುದಾಗಿ ಶ್ರೀಮದಾಚಾರ್ಯರು ಸಕಲಗುಣಸಂಪನ್ನವೂ ನಿರ್ದೋಷವೂ ಆದ ಪರಿಪೂರ್ಣ ವಸ್ತು ಯಾವುದೋ ಅದೇ ಈಶ್ವರವೆಂದು ಕರೆದಿದ್ದಾರೆ. ಈ ಪರತತ್ತ್ವವು ಒಂದೇ ಆಗಿದ್ದು ಇದರ ನಿಯಂತ್ರಣದಲ್ಲಿಯೇ ಸಕಲ ದೇವತೆಗಳೂ ವಿಶ್ವಪ್ರವರ್ತನಕಾರ್ಯವನ್ನು ನಡೆಸುತ್ತಿರುವರು. ಈ ಪರತತ್ತ್ವವು ಪ್ರತಿಯೊಂದು ವಸ್ತುವಿನಲ್ಲಿಯೂ ಅದೇ ತರಹದ ಚಿನ್ಮಯ ಆಕಾರದಲ್ಲಿ ನೆಲೆಸಿ ಸಕಲ ಜಗದ ವ್ಯವಹಾರವನ್ನು ನಡೆಸುತ್ತಿರುವುದರಿಂದ ಎಲ್ಲ ಶಬ್ದಗಳೂ ಎಲ್ಲ ಆಕಾರಗಳೂ ಪರಮಾತ್ಮನಲ್ಲಿವೆ. ಈ ಸರ್ವೋತ್ತಮ ವಸ್ತುವನ್ನು ಯಾವ ಶಬ್ದ ಆಕಾರಗಳಿಂದಲೂ ನಾವು ಚಿಂತಿಸಬಹುದು. ಪರಮಾತ್ಮನಲ್ಲಿರುವ ಗುಣಪೂರ್ಣತೆ ಮೊದಲಾದ ಮೂಲಭೂತ ಲಕ್ಷಣಗಳನ್ನು ಅಲ್ಲಗಳೆಯದೆ, ಅದರ ಅನುಸಂಧಾನದ ಜೊತೆಗೆ ಅವನನ್ನು ಯಾವ ಶಬ್ದ ಆಕಾರಗಳಿಂದಲೂ ನಾವು ಉಪಾಸನೆ ಮಾಡಬಹುದು. ಹೀಗೆ ವಾಸ್ತವವಾಗಿ ಹಿಂದೂ ಧರ್ಮದಲ್ಲಿ ಭಗವಂತನ ನಾಮರೂಪಗಳ ಗೊಂದಲಕ್ಕೆ ಎಡೆಯೇ ಇಲ್ಲ. ಸಕಲ ದೇವತೆಗಳಿಗೂ ಸರ್ವಜೀವರಿಗೂ ಸ್ವಾಮಿಯಾದ, ಪ್ರಕೃತಿಗೆ ಅತೀತನಾದ, ವಿಶ್ವವ್ಯಾಪಿಯಾದ ಪರಮಾತ್ಮನಲ್ಲಿ ಚಿದಾನಂದಮಯವಾದ ಸಕಲ ರೂಪಗಳೂ ಇವೆ. ಸಕಲ ಶಬ್ದಗಳಿಂದಲೂ ಅವನನ್ನು ಬಣ್ಣಿಸಬಹುದು. ಇಂತಹ ಮನೋಹರವಾದ ಸರ್ವಸಂಗ್ರಾಹಕವಾದ ಪರತತ್ತ್ವನಿರೂಪಣೆಯೇ ಹಿಂದೂ ಧರ್ಮದಲ್ಲಿ ಇರುವುದರಿಂದ ಎಲ್ಲರೂ ಸರ್ವಶಬ್ದ ಪ್ರತಿಪಾದ್ಯನಾದ ಶ್ರೀಹರಿಯನ್ನು ಏಕನಿಷ್ಠೆ ಹಾಗೂ ದೃಢಭಕ್ತಿಯಿಂದ ಭಜಿಸಿ ಆತ್ಮದ ಶ್ರೇಯಸ್ಸನ್ನು ಸಾಧಿಸಿಕೊಳ್ಳಬೇಕು.

## ಸಾಧಕನು ತಿಳಿಯಬೇಕಾದ ತತ್ತ್ವಗಳು

ಏಳನೆಯ ಅಧ್ಯಾಯದಲ್ಲಿ ಬ್ರಹ್ಮ, ಅಧ್ಯಾತ್ಮ, ಕರ್ಮ, ಅಧಿಭೂತ, ಅಧಿದೈವ, ಅಧಿಯಜ್ಞಗಳ ಸ್ವರೂಪವನ್ನು ತಿಳಿದುಕೊಳ್ಳುವ ಆವಶ್ಯಕತೆಯನ್ನು

ನಿರೂಪಿಸಲಾಗಿದೆ. ಎಂಟನೆಯ ಅಧ್ಯಾಯದಲ್ಲಿ ಅದರ ವಿವರಣೆಯನ್ನು ಶ್ರೀಕೃಷ್ಣನು ನೀಡುತ್ತಾನೆ. ಯಾವ ವಿಧವಾದ ನಾಶ, ಹಾನಿ, ಚ್ಯುತಿಗಳಿಂದಲೂ ರಹಿತನಾದ ಅನಂತನೂ ಅವ್ಯಯನೂ ಆದ ಪರಮಾತ್ಮನೇ ಬ್ರಹ್ಮ. ಅವನೇ ಅಧಿಯಜ್ಞನು. ಸಕಲ ದೇಹಗಳಲ್ಲಿಯೂ ದೇಹಿಗಳ ನಿಯಾಮಕನಾಗಿ ಸರ್ವಪ್ರೇರಕನಾಗಿ ಅಧಿಯಜ್ಞ ರೂಪದಿಂದ ಪರಮಾತ್ಮನು ನೆಲೆಸಿದ್ದಾನೆ. ಬ್ರಹ್ಮನೂ ಅಧಿಯಜ್ಞನೂ ಬೇರೆಯಲ್ಲ. ಪರದೇವತೆಯಾದ ಶ್ರೀವಿಷ್ಣುವಿನ ವ್ಯಾಪ್ತರೂಪವನ್ನು ಬ್ರಹ್ಮನೆಂದೂ ಎಲ್ಲರ ದೇಹಗಳೊಳಗೂ ಪ್ರೇರಕನಾಗಿರುವ ಅವನ ಅಂತರ್ಯಾಮಿರೂಪವನ್ನು ಅಧಿಯಜ್ಞನೆಂದೂ ಕರೆದಿದ್ದಾರೆ. ಅಧ್ಯಾತ್ಮರೆಂದರೆ ಜೀವರು. ಪರಮಾತ್ಮನಿಂದಲೂ ಜಡಪದಾರ್ಥಗಳಿಂದಲೂ ಭಿನ್ನವಾದ ತನ್ನ ವ್ಯಕ್ತಿತ್ವವನ್ನು ತಿಳಿಯುವುದು ಸಾಧಕನಿಗೆ ಆವಶ್ಯಕವಾಗಿದೆ. ಕರ್ಮವೆಂದರೆ ನಾವು ಮಾಡುವ ಕ್ಷುದ್ರ ಕಾರ್ಯಗಳಲ್ಲ. ಇಡೀ ವಿಶ್ವದ ಸಕಲ ವ್ಯವಹಾರಗಳನ್ನೂ ನಿಯಂತ್ರಿಸುವ, ಪ್ರಪಂಚದ ಜೀವರೂಪನಾದ ಪರಮಾತ್ಮನ ಅದ್ಭುತರಮಣೀಯವಾದ ಕ್ರಿಯೆಯೇ ಕರ್ಮವಾಗಿದ್ದು, ಜಗತ್ತಿನ ಪ್ರತಿಯೊಂದು ವ್ಯವಹಾರದ ಹಿನ್ನೆಲೆಯಲ್ಲಿಯೂ ಈ ಈಶ್ವರೀಯ ಕರ್ಮದ ನಿರೀಕ್ಷಣೆ ಮಾಡುವುದರಿಂದ ಅತಿಶಯಿತವಾದ ಸಾತ್ತ್ವಿಕ ಆನಂದವನ್ನೂ ಮಾನಸಿಕ ಶಾಂತಿಯನ್ನೂ ಪಡೆಯಬಲ್ಲೆವು. ಪ್ರಪಂಚದ ನಿರಾತಂಕ ಪ್ರವೃತ್ತಿಗೆ ಕಾರಣವಾದ, ಸಜ್ಜನರು ನಡೆಸುವ ಯಜ್ಞರೂಪವಾದ ಸತ್ಕಾರ್ಯಗಳನ್ನೂ ಕರ್ಮವೆಂದು ಹೇಳಬಹುದು. ಜೀವರಿಗೆ ಅಧ್ಯಾತ್ಮದ ಸಾಧನೆ ಮಾಡಲು ಉಪಕಾರಗಳೆನಿಸಿದ ಶರೀರ, ಇಂದ್ರಿಯ ಹಾಗೂ ಇತರ ಪಾಂಚಭೌತಿಕ ವಸ್ತುಗಳು ಅಧಿಭೂತಗಳಾಗಿವೆ. ಪರಮಾತ್ಮನ ಅಧೀನರಾಗಿ ವಿಶ್ವದ ವ್ಯಾಪಾರವನ್ನು ನಡೆಸುತ್ತಿರುವ ದೇವತೆಗಳ ಗುಂಪಿನಲ್ಲಿ ಮುಖ್ಯರೆನಿಸಿ ಅತ್ಯಂತ ಶ್ರೇಷ್ಠ ಸಾಧಕರೆನಿಸಿದ ಜೀವೋತ್ತಮರಾದ ಬ್ರಹ್ಮದೇವರೇ ಆಧಿದೈವರೆನಿಸಿದ್ದಾರೆ. ಇವೆಲ್ಲವುಗಳನ್ನು ತಿಳಿಯುವುದರಿಂದ ಸಾಧಕನಿಗೆ ಜಗತ್ತಿನ ವಸ್ತುತತ್ತ್ವ ಮತ್ತು ಅವುಗಳ ವಿಭಿನ್ನಕಾರ್ಯಗಳ ಪರಿಚಯವಾಗಿ ತನ್ನ ಆಧ್ಯಾತ್ಮಿಕ ಸಾಧನೆಗೆ ಇವೆಲ್ಲ ತತ್ತ್ವಗಳನ್ನು ಯೋಗ್ಯ ರೀತಿಯಿಂದ ಬಳಸಿಕೊಂಡು ಮುನ್ನಡೆಯಲು ಸಾಧ್ಯವಾಗುತ್ತದೆ.

## ಧರ್ಮಾಚರಣೆಯಲ್ಲಿ ವಿಳಂಬ ಸಲ್ಲದು

ಈ ಆಧ್ಯಾತ್ಮಿಕ ಸಾಧನೆಯ ವಿಷಯದಲ್ಲಿ ಒಂದು ರೀತಿಯ ವಿಲಂಬಿತ ಪ್ರವೃತ್ತಿಯು ಜನರಲ್ಲಿ ಕಂಡುಬರುತ್ತಿದೆ. ಧರ್ಮ, ಅಧ್ಯಾತ್ಮಚಿಂತನ ಇವುಗಳೆಲ್ಲ ವೃದ್ಧರಿಗೆ ಸಂಬಂಧಿಸಿದ ವಿಷಯಗಳಾಗಿವೆ. ನಿವೃತ್ತರಾದ ನಂತರವೇ ಈ ಜಟಿಲ ಧಾರ್ಮಿಕ ವ್ಯವಹಾರಗಳನ್ನು ಕೈಗೊಂಡರೆ ಸಾಕು. ಚಿಕ್ಕ ವಯಸ್ಸಿನಿಂದಲೇ ನಮ್ಮ ಮಕ್ಕಳನ್ನು ಧರ್ಮದ ಜಂಜಾಟದಲ್ಲಿ ದೂಡುವುದೇಕೆಂದು ಪ್ರಶ್ನಿಸುವವರು ಬಹಳ ಮಂದಿ ಇರುವರು. ಬಾಲ್ಯ ತಾರುಣ್ಯಗಳನ್ನು ಕೇವಲ ಲೌಕಿಕ ವ್ಯವಹಾರದಲ್ಲಿಯೇ ಕಳೆದು ಜೀವನದ ಸಕಲ ಭೋಗಗಳನ್ನನುಭವಿಸಿ ಅನಂತರವೇ ಅಧ್ಯಾತ್ಮದ ವ್ಯವಹಾರವನ್ನು ಆರಂಭಿಸುವುದು ಸೂಕ್ತವೆಂದು ಇವರ ಅಭಿಪ್ರಾಯವಾಗಿದೆ.

ನಾವು ಕೈಗೊಳ್ಳಬೇಕಾದ ಆಧ್ಯಾತ್ಮಿಕ ಸಾಧನೆಯ ಕಾರ್ಯಕ್ರಮವನ್ನು ಮುಂದೂಡುತ್ತ ಹೋಗುವ ಈ ಧೋರಣೆಯು ಸಮಂಜಸವಲ್ಲ. ಶಕ್ತಿ, ಹುಮ್ಮಸ್ಸುಗಳಿಂದ ತುಂಬಿರುವ ಚೈತನ್ಯಭರಿತವಾದ ಬಾಲ್ಯ ತಾರುಣ್ಯಗಳನ್ನು ನಮ್ಮ ಆತ್ಮದ ಆತ್ಯಂತಿಕ ಕಲ್ಯಾಣಸಾಧನೆಗೆ ಉಪಯೋಗಿಸದೆ ಆ ಸಮಯವನ್ನು ಕೇವಲ ಭೋಗಜೀವನದಲ್ಲಿಯೇ ಕಳೆಯುವುದು, ನಮಗೆ ನಾವು ಮಾಡಿಕೊಳ್ಳುವ ದೊಡ್ಡ ಅಪಚಾರವೆನಿಸುವುದು. ಪರಮಾತ್ಮನೂ ಪ್ರಕೃತಿಯೂ ನಮಗೆ ಕೊಡಮಾಡಿದ ಶಕ್ತಿ-ಸ್ರೋತಸ್ಸುಗಳ ತುಂಬಿದ ಪ್ರವಾಹವನ್ನು ಜೀವನದ ವರ್ಷಾಕಾಲದಲ್ಲಿ ವೃಥಾ ಹರಿಯಬಿಟ್ಟು ವಾರ್ಧಕ್ಯದ ಬೇಸಿಗೆಯಲ್ಲಿ ಅಧ್ಯಾತ್ಮದ ಕೃಷಿಯನ್ನು ಕೈಗೊಳ್ಳುವುದು ಎಂತಹ ಅಪಹಾಸ್ಯದ ಸಂಗತಿ ಎನಿಸುವುದು! ಆದುದರಿಂದಲೇ

**ಕೌಮಾರ ಆಚರೇತ್ ಪ್ರಾಜ್ಞೋ ಧರ್ಮಾನ್ ಭಾಗವತಾನಿಹ।**

ಭಾಗವತ

ಎಂದು ಪ್ರಹ್ಲಾದನು ತನ್ನ ಒಡನಾಡಿಗಳಾದ ದೈತ್ಯಬಾಲಕರಿಗೆ ಬಾಲ್ಯ ವಯಸ್ಸಿನಿಂದಲೇ ಧರ್ಮಾಚರಣೆಯ ಸಾಹಸವನ್ನು ಆರಂಭಿಸಬೇಕೆಂದು

ಕರೆಯುತ್ತಿದ್ದಾನೆ. ಚಿಕ್ಕಮಕ್ಕಳು ದೇವರ ಪೂಜೆ, ಸಂಧ್ಯಾವಂದನೆಗಳನ್ನೂ ಏಕಾದಶೀ ಉಪವಾಸವನ್ನೂ ಕೈಗೊಂಡಾಗ ಇಷ್ಟು ಚಿಕ್ಕವಯಸ್ಸಿನಲ್ಲಿ ಇದನ್ನೆಲ್ಲ ಮಾಡಬಾರದೆಂದು ಅವರನ್ನು ಜರೆಯುವ ಹಿರಿಯರನ್ನು ನಾವು ನೋಡಿದ್ದೇವೆ. ಮಕ್ಕಳ ಮನಸ್ಸಿನಲ್ಲಿ ಮೂಡುವ ಆಧ್ಯಾತ್ಮಿಕ ಉತ್ಸಾಹದ ಚಿಗುರನ್ನು ಚಿವುಟುವ ಈ ಪ್ರವೃತ್ತಿ ಖಂಡನೀಯವೇ ಆಗಿದೆ. ಬಾಲ್ಯದಿಂದಲೇ ಮಕ್ಕಳ ಧರ್ಮಪ್ರವೃತ್ತಿಗೆ ಉತ್ತೇಜನ ನೀಡಿ ಧರ್ಮದ ಸಂಸ್ಕಾರವು ಅವರ ಜೀವನದಲ್ಲಿ ಬಲವತ್ತರವಾಗಿ ನೆಲೆಸುವಂತೆ ಮಾಡುವುದು ಹಿರಿಯರ ಕರ್ತವ್ಯವಾಗಿದೆ.

**ಗೃಹೀತ ಇವ ಕೇಶೇಷು ಮೃತ್ಯುನಾ ಧರ್ಮಮಾಚರೇತ್ ।**

ಮೃತ್ಯು ಬಾಯ್ತೆರೆದು ನಿಂತಿದೆ ಎಂದು ಭಾವಿಸಿ ನಾವು ಮಾಡಬೇಕೆಂದಿರುವ ಸತ್ಕಾರ್ಯಗಳನ್ನು ಮುಂದೂಡದೆ ತ್ವರಿತದಿಂದ ಆಚರಿಸಬೇಕು. ಯಾವಾಗ ಮೃತ್ಯುವಿನ ಕರೆಯು ಬಂದರೂ ಅದನ್ನು ಸ್ವೀಕರಿಸಲು ಸಿದ್ಧರಾಗಿರುವಂತಹ ಸಡಗರವು ನಮ್ಮಲ್ಲಿರಬೇಕು. ತನ್ನಲ್ಲಿ ಸಹಾಯವನ್ನು ಯಾಚಿಸಿ ಬಂದ ಬ್ರಾಹ್ಮಣನನ್ನು ನಾಳೆ ಬಾ ಎಂದು ಧರ್ಮರಾಯ ಹಿಂದಿರುಗಿ ಕಳುಹಿದ. ಹಣದ ವಿಶೇಷ ಆತುರತೆ ಇದ್ದ ಆ ಬ್ರಾಹ್ಮಣನು ಭೀಮಸೇನನ ಬಳಿ ಬಂದು ಬೇಡಿದಾಗ ತಕ್ಷಣವೇ ಆತನು ತನ್ನ ಕೈಯಲ್ಲಿದ್ದ ಆಭರಣವನ್ನು ಅವನಿಗೆ ನೀಡಿ, ನಗರದಲ್ಲಿ ಸಂತೋಷದ ಸುದ್ದಿಯನ್ನು ಸಾರುವ ನಗಾರಿಯನ್ನು ಬಾರಿಸಲು ಆಜ್ಞಾಪಿಸಿದನು. ನಗಾರಿಯ ಶಬ್ದವನ್ನು ಕೇಳಿ ಅದರ ಕಾರಣವನ್ನು ಧರ್ಮರಾಯನು ಭೀಮನಲ್ಲಿ ವಿಚಾರಿಸಿದನು. ''ನಾಳೆ ದಾನವನ್ನು ಕೊಡುವೆನೆಂದು ಬ್ರಾಹ್ಮಣನನ್ನು ನೀನು ಹಿಂದಿರುಗಿಸಬೇಕಾದರೆ ನಾಳೆಯವರೆಗೆ ತಾನು ಜೀವಿಸಿರುವೆನೆಂಬ ದಿವ್ಯಜ್ಞಾನವನ್ನು ನೀನು ಪಡೆದಂತಾಯಿತು. ಇದು ದೊಡ್ಡ ಪವಾಡವಲ್ಲವೆ? ಅದಕ್ಕಾಗಿ ಸಂತೋಷದ ಸಂಕೇತವಾದ ನಗಾರಿಯನ್ನು ಬಾರಿಸಲಾಗಿದೆ'' ಎಂದು ಭೀಮನು ಉತ್ತರಿಸಿದಾಗ ಧರ್ಮರಾಜನು ತನ್ನ ತಪ್ಪನ್ನು ಅರಿತುಕೊಂಡನು. ಸತ್ಕಾರ್ಯವನ್ನು ಮುಂದಿನ ದಿನಗಳಿಗೆ ಮುಂದೂಡುವ ನಮ್ಮ ಪ್ರವೃತ್ತಿಯ ಬಗ್ಗೆ ಎಚ್ಚರಿಕೆಯನ್ನು ಕಟುಹಾಸ್ಯದ ಜೊತೆಗೆ ಸ್ವಾರಸ್ಯಕರ ರೀತಿಯಲ್ಲಿ ಈ ಕಥೆಯು ನೀಡುತ್ತಿದೆ.

## ಅಂತ್ಯಕಾಲದಲ್ಲಿ ಹರಿಸ್ಮರಣೆ

ಈ ಅಭಿಪ್ರಾಯದಿಂದಲೇ ಆಧ್ಯಾತ್ಮಿಕ ಸಾಧನೆಯ ಪ್ರಸ್ತಾವದಲ್ಲಿ ಸಾಧಕರಿಗೆ ಅಂತ್ಯಕಾಲದಲ್ಲಿ ಪರಮಾತ್ಮನ ಸ್ಮರಣೆ ತರಬೇಕೆಂಬುದನ್ನು ಗೀತೆಯ ಎಂಟನೆಯ ಅಧ್ಯಾಯದಲ್ಲಿ ಒತ್ತಿ ಹೇಳಲಾಗಿದೆ. ಅಂತ್ಯಕಾಲದಲ್ಲಿ ಪರಮಾತ್ಮನ ಸ್ಮರಣೆ ಇದ್ದರೆ ಸಾಕು, ಉಳಿದ ಕಾಲದಲ್ಲಿ ನಾವು ಭೋಗ ವಿಲಾಸಗಳಲ್ಲೇ ತಲ್ಲೀನರಾಗ ಬಹುದೆಂದು ಇದರ ಅರ್ಥವನ್ನು ತಪ್ಪಾಗಿ ನಾವು ಗ್ರಹಿಸಬಾರದು. ಕೊನೆಯ ಕಾಲದಲ್ಲಿ ಪರಮಾತ್ಮನ ಸ್ಮರಣೆಯು ಚಾಮತ್ಕಾರಿಕವಾಗಿ ನಮ್ಮಲ್ಲಿ ಉದಯವಾಗಲಾರದು. ಇಡೀ ಜೀವನದಲ್ಲಿ ಇದರ ಬಗ್ಗೆ ನಾವು ಸಾಧನೆಯನ್ನು ಮಾಡಿ ಭಗವಂತನ ದೃಢಸಂಸ್ಕಾರವನ್ನು ಅಳವಡಿಸಿಕೊಂಡಿದ್ದರೇನೇ ಅಂತ್ಯಕಾಲದಲ್ಲಿ ಅವನನ್ನು ಸ್ಮರಿಸುವ ಅಪೂರ್ವ ಭಾಗ್ಯವನ್ನು ಪಡೆಯಬಲ್ಲೆವು. ಕೊನೆಯ ಗಳಿಗೆಯಲ್ಲಿ ಪರಮಾತ್ಮನನ್ನು ಚಿಂತಿಸಬೇಕಾದರೆ ಇಡೀ ಜೀವನದಲ್ಲಿ ಅದಕ್ಕಾಗಿ ನಾವು ಸಿದ್ಧತೆಯನ್ನು ಮಾಡಬೇಕಾಗುತ್ತದೆ. ನಮ್ಮ ಇಡೀ ಜೀವನದಲ್ಲಿ ಯಾವುದಕ್ಕಾಗಿ ನಾವು ಹಗಲಿರುಳು ಶ್ರಮ ಚಿಂತನೆಗಳನ್ನು ನಡೆಸುವೆವೊ ಯಾವುದು ನಮ್ಮ ಮೇಲೆ ಹೆಚ್ಚಿನ ಪ್ರಭಾವ ಪರಿಣಾಮಗಳನ್ನು ಬೀರುವುದೊ ಆ ವಸ್ತುವು ನಮ್ಮ ಅಂತಿಮ ಕ್ಷಣದಲ್ಲಿ ಸ್ಮೃತಿಪಥದಲ್ಲಿ ಸುಳಿಯುವುದು. ಆಯುಷ್ಯವನ್ನೆಲ್ಲ ಲೋಭವೃತ್ತಿಯಲ್ಲೇ ಕಳೆದ ಹಣ್ಣು ಮುದುಕನೊಬ್ಬನು ತನ್ನ ಮರಣಸಮಯದಲ್ಲಿ ಸ್ವಲ್ಪ ದೊಡ್ಡದಾಗಿ ಉರಿಯುತ್ತಿದ್ದ ದೀಪವನ್ನು ನೋಡಿ ಎಣ್ಣೆ ಖರ್ಚಾಗುತ್ತಿರುವುದರಿಂದ ಅದನ್ನು ಚಿಕ್ಕದು ಮಾಡಬೇಕೆಂದು ತನ್ನ ಮಕ್ಕಳಿಗೆ ಹೇಳಿದನಂತೆ. ಜೀವನದ ಸಂಸ್ಕಾರವೇ ಮರಣದ ಕ್ಷಣದಲ್ಲಿ ಉದ್ಬೋಧವನ್ನು ಪಡೆಯುತ್ತದೆ. ಭಗವಂತನಿಗಾಗಿ ತನ್ನ ಜೀವನವನ್ನು ಮುಡಿಪಾಗಿಟ್ಟ ಅಖಂಡ ಸಾಧಕನು ಮಾತ್ರ ಕೊನೆಯ ಸಮಯದಲ್ಲಿ ಪರಮಾತ್ಮನನ್ನು ಸ್ಮರಿಸಬಲ್ಲ. ಸ್ವೇಚ್ಛಾಭೋಗಗಳಲ್ಲಿ ಮಗ್ನನಾಗಿ ಪ್ರಾಪಂಚಿಕ ವಿಷಯಗಳಲ್ಲೇ ತನ್ನ ಜೀವನದ ಬಹುಭಾಗವನ್ನು ಕಳೆದು ಕೊನೆಯ ಗಳಿಗೆಯಲ್ಲಿ ಮಾತ್ರ ತಾನು ಪರಮಾತ್ಮನ ಸ್ಮರಣೆಯನ್ನು ಮಾಡುವೆನೆಂದು ಆಶಿಸುವುದು ಸರ್ವಥಾ ನಿರರ್ಥಕವೆನಿಸುವುದು. ಆದುದರಿಂದಲೇ ಶ್ರೀಮದಾಚಾರ್ಯರು-

**ಸಂತತಂ ಚಿಂತಯೇನಂತಮಂತಕಾಲೇ ವಿಶೇಷತಃ ।**

ದ್ವಾದಶಸ್ತೋತ್ರ

ಎಂದಿದ್ದಾರೆ. ಜೀವನದಲ್ಲಿ ನಿರಂತರವಾಗಿ ಭಗವಚ್ಚಿಂತನವನ್ನು ಕೈಗೊಳ್ಳುವುದರಿಂದ ಅಂತ್ಯಕಾಲದಲ್ಲಿ ವಿಶೇಷವಾದ ಭಗವತ್ ಸ್ಮರಣೆಯುಂಟಾಗಬಹುದೆಂದೇ ಆಚಾರ್ಯರ ಆಶಯವಾಗಿದೆ. ಹಗಲು ನಾವು ಅನೇಕ ಕಾರ್ಯಗಳನ್ನು ಮಾಡಿದ್ದರೂ ಅವೆಲ್ಲವೂ ರಾತ್ರಿ ಮಲಗುವಾಗ ನಮ್ಮ ಜ್ಞಾಪಕಕ್ಕೆ ಬರಲಾರವು. ಮನಸ್ಸಿನಲ್ಲಿ ಸರಿಯಾಗಿ ಅಚ್ಚೊತ್ತಿದ ಮಹತ್ತ್ವದ ಘಟನೆಯನ್ನು ಮಾತ್ರ ಪುನಃ ಸ್ಮರಿಸಲು ಸಾಧ್ಯವಾಗುವುದು. ಜೀವನದಲ್ಲಿ ಆತ್ಮಶಕ್ತಿಯಿಂದ ಭಗವದ್ವಿಚಾರವನ್ನು ಮಾಡಿದವನೇ ಜೀವನದ ಕೊನೆಯಲ್ಲಿ ಹರಿಸ್ಮರಣೆಯನ್ನು ನಿರಾತಂಕವಾಗಿ ಮಾಡಬಲ್ಲ. ಪ್ರಯಾಣಕಾಲದಲ್ಲಿ ಅರ್ಥಾತ್ ಅಂತ್ಯಕಾಲದಲ್ಲಿ ಪರಮಾತ್ಮನನ್ನು ಸ್ಮರಿಸಬೇಕೆನ್ನುವ ಗೀತೆಯು ನಮ್ಮ ಇಡೀ ಜೀವನವೇ ಭಗವನ್ಮಯವಾಗಬೇಕೆಂಬ ದಿವ್ಯವಾದ ಸಂದೇಶವನ್ನು ನೀಡುತ್ತಿದೆ.

ಅಂತೂ ನಮ್ಮ ಮರಣವು ಪುಣ್ಯಮಯವಾಗಿರಬೇಕು. ಅದಕ್ಕಾಗಿ ನಮ್ಮ ಇಡೀ ಜೀವನವನ್ನು ಸದಾಚಾರ, ಸದ್ವಿಚಾರಗಳಿಂದ ಪರಿಷ್ಕರಿಸಿ ಅದರ ಮಧುರ ಪ್ರತಿಧ್ವನಿ ಯನ್ನು ಮರಣಕಾಲದಲ್ಲಿ ನಾವು ಕಾಣುವಂತಾಗಬೇಕು. ಇಡೀ ನಮ್ಮ ಜೀವನದ ಫಲಶ್ರುತಿಯೇ ಮರಣದಲ್ಲಿ ಅಡಕವಾಗಿದೆ. ಮರಣಕಾಲದ ಭಗವಂತನ ಪುಣ್ಯಸ್ಮರಣೆಯಲ್ಲಿ ಯಾವನೊಬ್ಬನ ಇಡೀ ಜೀವನದ ಪವಿತ್ರ ಸಾಧನೆಯನ್ನು ನಾವು ಗುರುತಿಸಬಹುದು. ನಮ್ಮ ಸಮಗ್ರಜೀವನವು ದೈವೀಭಾವನೆಯಿಂದ ಪಾವನ ವಾಗಿರಬೇಕೆಂಬುದೇ ಎಂಟನೆಯ ಅಧ್ಯಾಯದ ಸಾರಸಂದೇಶವಾಗಿದೆ.

ಅಂತ್ಯಕಾಲದ ಘಟನೆಯು ನಮ್ಮ ಇಡೀ ಜೀವನಸಂಸ್ಕಾರದ ಪ್ರತಿಧ್ವನಿಯಾಗಿರುವಂತೆ, ಮರಣೋತ್ತರ ಜೀವನದ ಸಂಕೇತವನ್ನೂ ಅದರಲ್ಲಿ ಕಾಣಬಹುದು. ಸಾವಿನ ಸಮಯದಲ್ಲಿ ನಾವು ಮಾಡುವ ಚಿಂತನೆಯು ನಮ್ಮ ಮರಣೋತ್ತರ ಜೀವನದ ಮೇಲೆ ವಿಶೇಷ ಪ್ರಭಾವವನ್ನು ಬೀರುತ್ತದೆ. ರಾಜ್ಯವನ್ನು ತೊರೆದು ಕಾಡಿನಲ್ಲಿ ತಪಸ್ವಿಜೀವನವನ್ನು ನಡೆಸುತ್ತಿದ್ದರೂ ಭರತನು

ತಾನು ಸಾಕುತ್ತಿದ್ದ ಜಿಂಕೆಮರಿಗಳ ಮೇಲಿನ ಮೋಹವನ್ನು ನಿಯಂತ್ರಿಸಲಾಗದೆ ಮರಣಕಾಲದಲ್ಲಿ ಅವುಗಳನ್ನು ಸ್ಮರಿಸಿದುದರಿಂದ ಮುಂದೆ ಜಿಂಕೆಯಾಗಿಯೇ ಹುಟ್ಟುವ ದುರಂತ ಪ್ರಸಂಗವು ಅವನಿಗೊದಗಿತು. ಹಿರಣ್ಯಕಶಿಪು, ಹಿರಣ್ಯಾಕ್ಷರು ಭಗವಂತನ ನರಸಿಂಹ, ವರಾಹ ರೂಪಗಳ ಭೀಕರ ಚಿತ್ರಗಳನ್ನು ತಮ್ಮ ಕಣ್ಣಮುಂದಿಟ್ಟುಕೊಂಡು ಅವುಗಳ ಗುಣಸೌಂದರ್ಯಗಳನ್ನರಿಯದೆ ಆ ರುದ್ರಭೀಕರತೆಯನ್ನೇ ಚಿಂತಿಸಿ ಮೃತರಾದುದರಿಂದ ಅವರು ರಾಕ್ಷಸರಾಗಿ ಭಯಂಕರ ರೂಪದಿಂದ ಜನ್ಮ ತಾಳಿದರು. ಅಲ್ಲಿ ಶ್ರೀರಾಮನ ಕ್ಷತ್ರಿಯ ರೂಪವನ್ನು ಸ್ಮರಿಸಿ ಯುದ್ಧದಲ್ಲಿ ಮರಣವನ್ನು ಹೊಂದಿದುದರಿಂದ ಮುಂದೆ ಕ್ಷತ್ರಿಯರಾಗಿ ಜನಿಸಿದರು. ಅಲ್ಲಿ ಶ್ರೀಕೃಷ್ಣನ ದಿವ್ಯ ಸುಂದರ ರೂಪವನ್ನು ದೈವೀ ಭಾವನೆಯಿಂದ ಚಿಂತಿಸುತ್ತ ಪುಣ್ಯಮರಣವನ್ನು ಹೊಂದಿ ಭಗವಂತನ ಸಾರೂಪ್ಯವನ್ನು ಪಡೆದರು. ಅಂತ್ಯಕಾಲದಲ್ಲಿ ಯಾವ ಆಕಾರ, ಭಾವಗಳನ್ನು ನಾವು ಚಿಂತಿಸುವೆವೋ ಅಂತಹ ಸ್ಥಿತಿಯನ್ನೇ ಮರಣೋತ್ತರದಲ್ಲಿ ನಾವು ಹೊಂದಬಲ್ಲೆವು. ಕಲ್ಯಾಣಗುಣರೂಪಿಯಾದ ಚಿದಾನಂದಘನನಾದ ಪರಮಾತ್ಮನ ದಿವ್ಯಮಂಗಳ ಮೂರ್ತಿಯನ್ನು ಸ್ಮರಿಸುತ್ತ ಈ ಭೌತಿಕ ಶರೀರವನ್ನು ತ್ಯಜಿಸಿದರೆ ಮುಂದೆ ಈ ನಶ್ವರವಾದ ಪ್ರಾಕೃತ ಶರೀರವನ್ನು ಪಡೆಯದೆ ಅಪ್ರಾಕೃತವಾದ ಚಿದಾನಂದಮಯ ವ್ಯಕ್ತಿತ್ವವನ್ನು ನಮ್ಮಲ್ಲಿ ಪ್ರಕಟಗೊಳಿಸಲು ಸಾಧ್ಯವಾಗುವುದು. ಈಗ ನಾವು ಜಡಧರ್ಮಿಗಳಾಗಿರುವೆವು. ಜಡದ ರೂಪ-ಧರ್ಮಗಳನ್ನೇ ನಮ್ಮದೆಂದು ನೆಚ್ಚಿಕೊಂಡು ಆ ರೀತಿಯಲ್ಲಿ ವ್ಯವಹರಿಸುತ್ತಿದ್ದೇವೆ. ಆತ್ಮನ ಮೂಲಭೂತ ಸದ್ಗುಣಗಳನ್ನು ಮರೆತು ಜಡದೊಂದಿಗೆ ಸಮರಸರಾಗಿ ನಾವು ವ್ಯವಹರಿಸುತ್ತಿದ್ದೇವೆ. ಈ ಪರಿಸ್ಥಿತಿಯಿಂದ ನಮಗೆ ವಿಮೋಚನೆಯಾಗಬೇಕು. ನಾವು ಮೂಲತಃ ಪರಮಾತ್ಮನ ಪ್ರತಿಬಿಂಬರಾಗಿದ್ದು ಪರಮಾತ್ಮನ ಸಾರೂಪ್ಯ ಸಾಧರ್ಮ್ಯಗಳು ನಮ್ಮ ಆತ್ಮಸ್ವರೂಪದಲ್ಲಿ ಸುಪ್ತವಾಗಿವೆ. ನಮ್ಮ ವ್ಯಕ್ತಿತ್ವದಲ್ಲಿ ಹುದುಗಿದ ಈ ಕಲ್ಯಾಣಗುಣಗಳನ್ನು ವಿಕಸಿತಗೊಳಿಸುವುದೇ ನಮ್ಮ ಜೀವನದ ಪರಮ ಲಕ್ಷ್ಯವಾಗಿರುವುದರಿಂದ ಅನಂತಕಲ್ಯಾಣಗುಣನಿಧಿಯಾದ ಪರಮಾತ್ಮನ ಪಾವನ ವಿಚಾರಗಳಿಂದ ಇಡೀ ಜೀವನವನ್ನು ಸಂಸ್ಕೃತಗೊಳಿಸಿ ಅದರ ಪ್ರತಿಫಲವನ್ನು

ಅಂತಿಮಕ್ಷಣದಲ್ಲಿ ನಾವು ಕಾಣುವಂತಾದರೆ ಮರಣಕಾಲದ ಭಗವಚ್ಚಿಂತನದ ಫಲವಾಗಿ ಆತ್ಮನ ಅಮರ ರೂಪವನ್ನು ಅನುಭವಿಸಿ ಆನಂದಿಸುವ ಸುಯೋಗವು ನಮಗೊದಗುವುದು.

## ಶುಕ್ಲ - ಕೃಷ್ಣ ಗತಿಗಳು

ಎಂಟನೆಯ ಅಧ್ಯಾಯದ ಕೊನೆಯ ಭಾಗದಲ್ಲಿ ಶುಕ್ಲ-ಕೃಷ್ಣ ಗತಿಗಳ ನಿರೂಪಣವನ್ನು ಮಾಡಿರುವರು. ಇದರಿಂದ ಅನೇಕರು ಗೊಂದಲಕ್ಕೆ ಒಳಗಾಗಿರುವರು. ಶುಕ್ಲಪಕ್ಷದಲ್ಲಿ, ಉತ್ತರಾಯಣದಲ್ಲಿ, ಹಗಲಿನಲ್ಲಿ ಮರಣವಾದರೆ ಮಾತ್ರ ಮುಕ್ತಿ ದೊರಕುವುದು; ಕೃಷ್ಣಪಕ್ಷದಲ್ಲಿ, ದಕ್ಷಿಣಾಯನದಲ್ಲಿ, ರಾತ್ರಿಯಲ್ಲಿ ಪ್ರಾಣವಿಯೋಗವಾದರೆ ಅವನಿಗೆ ಸಂಸಾರದಲ್ಲಿಯೇ ಪರಿಭ್ರಮಣ ಎಂಬ ಪ್ರತೀತಿಯು ಇಲ್ಲಿರುವ ವಚನಗಳಿಂದ ಸಾಮಾನ್ಯ ಜನರಿಗಾಗುವುದು. ಪ್ರಶಸ್ತಕಾಲ ಹಾಗೂ ಉತ್ತಮ ಸನ್ನಿವೇಶಗಳು ಒಳ್ಳೆಯದರ ಸೂಚಕಗಳೇನೋ ಆಗಿವೆ. ಬರೀ ಕಾಲ-ದೇಶಗಳ ಆಧಾರದಿಂದ ಪುಣ್ಯಮರಣ ಹಾಗೂ ಪಾಪಮರಣವೆಂದು ವಿಶ್ಲೇಷಣ ಮಾಡುವುದು ಸಮಂಜಸವೆನಿಸಲಾರದು. ಗೀತೆಯ ಈ ಭಾಗದಲ್ಲಿ ಯೋಗಿಗಳು ಶರೀರವಿಯೋಗದ ನಂತರ ಹೋಗುವ ಮಾರ್ಗದ ವಿವೇಚನೆಯನ್ನು ಮಾತ್ರ ಮಾಡಲಾಗಿದೆ. ಶುಕ್ಲಪಕ್ಷ, ಉತ್ತರಾಯಣ ಮುಂತಾದ ಕಾಲಗಳ ಅಭಿಮಾನಿಗಳೆನಿಸಿದ ದೇವತೆಗಳಿಂದ ಅಧಿಷ್ಠಿತವಾದ ಮಾರ್ಗದಲ್ಲಿ ಯಾತ್ರೆಯನ್ನು ನಡೆಸುವ ಯೋಗಿಗಳು ಬ್ರಹ್ಮನನ್ನು ಪಡೆಯುವರು. ಫಲಾಪೇಕ್ಷೆಯಿಂದ ಕಠೋರ ತಪಸ್ಸು, ಯಜ್ಞ, ಯಾಗಾದಿಗಳನ್ನು ನಡೆಸಿದ ಯೋಗಿಗಳಿಗೆ ಇದಕ್ಕಿಂತ ಭಿನ್ನವಾದ ಮಾರ್ಗವಿದೆ. ದಕ್ಷಿಣಾಯನ, ಕೃಷ್ಣಪಕ್ಷ ಮೊದಲಾದವುಗಳಿಗೆ ಅಭಿಮಾನಿಗಳಾದ ದೇವತೆಗಳು ನೆಲೆಸಿದ ಮಾರ್ಗದಲ್ಲಿ ಅವರು ತಮ್ಮ ಅಂತಿಮ ಪ್ರಯಾಣವನ್ನು ನಡೆಸುವರು. ಹೀಗೆ ಯೋಗಿಗಳು ತಮ್ಮ ಶರೀರದಿಂದ ಜೀವವನ್ನು ನಿಷ್ಕ್ರಮಣಗೊಳಿಸುವ ಮಾರ್ಗದ ಆಧ್ಯಾತ್ಮಿಕ ಸ್ವರೂಪವನ್ನಿಲ್ಲಿ ಹೇಳಲಾಗಿದ್ದು ಇದು ಯೋಗಶಾಸ್ತ್ರಕ್ಕೆ ಸಂಬಂಧಿಸಿದ ವಿಷಯವಾಗಿದೆ. ಜೀವರ ಮರಣದ ಬಾಹ್ಯ ಕಾಲದ ನಿರೂಪಣೆಗಾಗಿ ಈ ವಾಕ್ಯಗಳು ಹೊರಟಿರುವವೆಂಬ ಭಾವನೆಯು ಸಾಮಾನ್ಯ ಜನರಲ್ಲಿ ಪ್ರಚಲಿತವಾಗಿದೆ. ಇದು ಸರಿಯಲ್ಲ.

ಮರಣಕಾಲದಲ್ಲಿ ನಮ್ಮ ಹೃದಯವು ಮುಗಿಲು, ಕತ್ತಲೆಗಳಿಂದ ತುಂಬಿದ ದಕ್ಷಿಣಾಯನದ ಕೃಷ್ಣಪಕ್ಷದ ರಾತ್ರಿಯಂತಿರಬಾರದು. ಹೊಗೆ ತುಂಬಿದ ಕೋಣೆಯಂತೆ ನಮ್ಮ ಮನಸ್ಸು ಮಲಿನವಾಗಿರಲೂ ಬಾರದು. ವಿಷಯಾಸಕ್ತಿ ಮತ್ತು ಅಜ್ಞಾನಗಳು ಮುಗಿಲು, ಕತ್ತಲೆಗಳಂತೆ ನಮ್ಮ ಜೀವನವನ್ನೇ ನಿಷ್ಪ್ರಭಗೊಳಿಸುವವು. ಇವುಗಳನ್ನು ನಮ್ಮ ಹೃದಯದಿಂದ ಹೊರದೂಡಿ ಚಂದ್ರನ ಬೆಳದಿಂಗಳಿನಂತಿರುವ ಶುದ್ಧ ತಾತ್ತ್ವಿಕ ವಿಚಾರಧಾರೆಯಿಂದ ನಾವು ಪರಿಪ್ಲುತರಾಗಿರಬೇಕು. ಉತ್ತರಾಯಣದ ಹಗಲಿನ ನಿರಭ್ರ, ಶುಭ್ರ ಗಗನದಂತೆಯೂ ಶುಕ್ಲಪಕ್ಷದ ಹುಣ್ಣಿಮೆಯ ಬೆಳದಿಂಗಳ ರಾತ್ರಿಯಂತೆಯೂ ನಮ್ಮ ಹೃದಯವು ಇರಬೇಕು. ಮರಣಕಾಲದಲ್ಲಿ ಯಾವ ಮನೋಮಲಿನತೆಯೂ ಇಲ್ಲದೆ ಪ್ರಜ್ವಲಿಸುವ ಅಗ್ನಿಯಂತೆ ಕ್ರಿಯಾಶೀಲವೂ ತೇಜಸ್ವಿಯೂ ಆಗಿ ನಮ್ಮ ಚಿತ್ತವೃತ್ತಿ ಇರಬೇಕು. ಹೀಗೆ ಮರಣಕಾಲದಲ್ಲಿ ನಮ್ಮಲ್ಲಿರಬೇಕಾದ ಆಂತರಿಕ ಸನ್ನಿವೇಶವನ್ನು ಈ ರೂಪಕದ ರೂಪದಲ್ಲಿ ಚಿತ್ರಿಸಲಾಗಿದೆ ಎಂದೂ ನಾವು ಭಾವಿಸಬಹುದು.

## ಪ್ರಪಂಚ-ಪರಮಾತ್ಮರ ಸಂಬಂಧ

ಒಂಬತ್ತನೆಯ ಅಧ್ಯಾಯದಲ್ಲಿ ಪುನಃ ಭಗವನ್ಮಹಿಮೆಯ ನಿರೂಪಣೆ ಇದೆ. ಇದು ಭಕ್ತಿಯ ಪ್ರಚೋದನೆಗೆ ಬಹಳ ಅನುಕೂಲವಾಗುವುದು. ಪರಮಾತ್ಮನ ಮಹಿಮೆಯನ್ನು ಚಿಂತಿಸಿದಷ್ಟೂ ನಮ್ಮ ಅಂತಃಕರಣವು ಭಕ್ತಿಯಿಂದ ಅವನ ಪಾದಗಳಲ್ಲಿ ವಿನಮ್ರವಾಗುವುದು. ಸಕಲ ಪ್ರಾಣಿಗಳಿಗೂ ಆಶ್ರಯನಾಗಿ ವಿಶ್ವದ ಎಲ್ಲ ಪ್ರವೃತ್ತಿ, ಸ್ಪಂದಗಳಿಗೂ ಅವಶ್ಯವೆನಿಸಿದ ಶಕ್ತಿ, ಸ್ರೋತಸ್ಸಿನ ಸೆಲೆಯಾಗಿರುವ ಪರಮಾತ್ಮನೇ ಜಗತ್ತಿನ ಅವಲಂಬನವಾಗಿದ್ದಾನೆ. ಅವನದು ಸ್ವತಂತ್ರ ಸಾರ್ವಭೌಮ ವ್ಯಕ್ತಿತ್ವವಾಗಿದೆ. ಜಗತ್ತಿಗೆ ಅವನು ಆಧಾರನೆನಿಸಿದರೂ ಜಗತ್ತು ಅವನಿಗೆ ಏನೂ ಅಲ್ಲ. ಪ್ರಪಂಚದಿಂದ ಅವನು ಪಡೆಯಬೇಕಾದ ಅಂಶವೇನೂ ಇಲ್ಲ. ಸ್ವತಂತ್ರವೂ ಪರಿಪೂರ್ಣವೂ ಆದ ಶಾಶ್ವತ ವ್ಯಕ್ತಿತ್ವವನ್ನು ಹೊಂದಿದ ಭಗವಂತನಿಗೆ ಜಗತ್ತಿನ ಆಶ್ರಯ, ಅವಲಂಬನವೇಕೆ?

**ಮತ್‌ಸ್ಥಾನಿ ಸರ್ವಭೂತಾನಿ ನಚಾಹಂ ತೇಷ್ವವಸ್ಥಿತಃ ।**

ಸರ್ವರೂ ತನ್ನಲ್ಲಿದ್ದಾರೆ. ತಾನು ಮಾತ್ರ ಅವರನ್ನು ಆಶ್ರಯಿಸಿಕೊಂಡಿಲ್ಲ. ಈ ಶ್ಲೋಕದ ಮುಂದಿನ ಭಾಗದಲ್ಲಿರುವ ವಾಕ್ಯವು ಸ್ವಲ್ಪ ಗೊಂದಲಕ್ಕೆ ಎಡೆಕೊಟ್ಟಿದೆ. ಸರ್ವಪ್ರಾಣಿಗಳೂ ಪರಮಾತ್ಮನನ್ನು ಆಶ್ರಯಿಸಿವೆ ಎಂದು ಪೂರ್ವಾರ್ಧದಲ್ಲಿ ಹೇಳಿ, ಉತ್ತರಾರ್ಧದಲ್ಲಿ ಈ ಯಾವ ಪ್ರಾಣಿಗಳೂ ಪರಮಾತ್ಮನಲ್ಲಿ ಇಲ್ಲವೆನ್ನುವ ಅರ್ಥಪ್ರತೀತಿಯಾಗುವಂತೆ ವಾಕ್ಯರಚನೆಯಾಗಿದೆ.

**ಮತ್‌ಸ್ಥಾನಿ ಸರ್ವಭೂತಾನಿ... ।**
**ನ ಚ ಮತ್‌ಸ್ಥಾನಿ ಭೂತಾನಿ... ।**

ಎಂದು ಈಶ್ವರ - ಜಗತ್ ಸಂಬಂಧದ ಬಗ್ಗೆ ಪರಸ್ಪರ ವಿರೋಧಿಗಳಂತೆ ತೋರುವ ಮಾತುಗಳನ್ನು ಹೇಳಿ,

**ಪಶ್ಯ ಮೇ ಯೋಗಮೈಶ್ವರಂ ।**

''ಸರ್ವ ಪ್ರಾಣಿಗಳು ನನ್ನಲ್ಲಿದ್ದೂ ಇಲ್ಲದಂತಿರುವ ಅದ್ಭುತವಾದ ನನ್ನ ಈಶ್ವರೀ ಶಕ್ತಿಯನ್ನು ನೋಡು'' ಎಂದು ಪರಮಾತ್ಮನು ಅಪ್ಪಣೆ ಕೊಡಿಸುತ್ತಾನೆ. ಇದರ ಭಾವಾರ್ಥವನ್ನು ತಿಳಿದುಕೊಳ್ಳುವುದು ಸ್ವಲ್ಪ ಕ್ಲಿಷ್ಟವೆನಿಸಬಹುದು. ಪ್ರಪಂಚವು ಮಿಥ್ಯೆಯೆಂದು ನಿರೂಪಿಸಲು ಈ ವಾಕ್ಯವು ಹೊರಟಿದೆ ಎಂದು ಕೆಲವರು ಅರ್ಥ ನಿರೂಪಣೆಯನ್ನು ಮಾಡಿದ್ದಾರೆ. ಒಂದು ವಸ್ತುವು ಒಂದು ಕಡೆಯಲ್ಲಿ ಇದೆಯೆಂದೂ ಇಲ್ಲವೆಂದೂ ಹೇಳಿದಲ್ಲಿ ಅದು ಸುಳ್ಳೆಂದೇ ಅರ್ಥವಾಗುತ್ತದೆ. ಕಲ್ಪಿತವಾದ ವಸ್ತುವು ನಮ್ಮ ಸಾಮಾನ್ಯ ಪ್ರತೀತಿಯ ದೃಷ್ಟಿಯಿಂದ ಅಲ್ಲಿದ್ದರೂ ವಾಸ್ತವ ದೃಷ್ಟಿಯಿಂದ ಅಲ್ಲಿ ಇರುವುದಿಲ್ಲ. ಹಗ್ಗದಲ್ಲಿ ಹಾವು ಕಾಣಿಸಬಹುದು. ಆದರೆ ವಾಸ್ತವವಾಗಿ ಹಾವು ಅಲ್ಲಿರುವುದಿಲ್ಲ. ಅದರಂತೆ ಎಲ್ಲ ಕಡೆ ನೆಲೆಸಿರುವ ಬ್ರಹ್ಮವಸ್ತುವಿನಲ್ಲಿ ಜಗತ್ತು ಕಾಣುತ್ತಿದ್ದರೂ ಕಾಲ್ಪನಿಕವಾದ ಈ ವಿಶ್ವವು ವಾಸ್ತವವಾಗಿ ಅಲ್ಲಿರುವುದಿಲ್ಲವೆಂಬ ವಿಚಾರವನ್ನು ಸಾರಲು ಈ ಶ್ಲೋಕವು ಪ್ರವೃತ್ತವಾಗಿದೆ ಎಂದು ಕೆಲವರ ಅಭಿಪ್ರಾಯವಾಗಿದೆ.

ಈ ವಾಕ್ಯದ ಪೂರ್ವಾಪರಗಳನ್ನು ಪರ್ಯಾಲೋಚಿಸಿದರೆ ಈ ಅರ್ಥದ ಅನೌಚಿತ್ಯವು ನಮಗೆ ಹೊಳೆಯದಿರಲಾರದು. ಜಗತ್ತು ಪರಮಾತ್ಮನಲ್ಲಿ ಆಶ್ರಯಿಸಿಕೊಂಡಿದ್ದರೂ ಅದು ಪರಮಾತ್ಮನಲ್ಲಿ ಇಲ್ಲವೆನ್ನುವ ವಿರೋಧಾ

ಭಾಸದ ತಾತ್ಪರ್ಯವನ್ನು ವಿವರಿಸಲು ಉದಾಹರಣೆಯನ್ನು ಮುಂದಿನ ವಾಕ್ಯದಲ್ಲಿ ನೀಡಲಾಗುತ್ತದೆ. ವಾಯು ಅಥವಾ ಆಕಾಶವು ಜಗತ್ತಿನ ನಾನಾ ಪದಾರ್ಥಗಳನ್ನು ಸ್ಪರ್ಶಿಸಿದರೂ ಅವುಗಳಿಗೆ ಆ ಪದಾರ್ಥಗಳ ಗುಣಧರ್ಮಗಳ ಸಂಪರ್ಕವಾಗುವುದಿಲ್ಲ. ವಾಯು ಮತ್ತು ಆಕಾಶಗಳು ನಿರ್ಲಿಪ್ತಗಳೇ ಆಗಿರುವವು. ಅದರಂತೆ ಸಕಲ ಪ್ರಪಂಚದ ಆಧಾರನಾಗಿ ಎಲ್ಲ ವಸ್ತುಗಳನ್ನು ವ್ಯಾಪಿಸಿದ್ದರೂ ಈ ಜಡಧರ್ಮಗಳು ಪರಮಾತ್ಮನಿಗೆ ಅಂಟುವುದಿಲ್ಲ. ಅವನು ಅಸಂಗನಾಗಿರುವನು. ಪರಮಾತ್ಮನು ಪ್ರಪಂಚಕ್ಕೆ ಆಧಾರನಾದರೂ ನಿರ್ಲಿಪ್ತನಾದುದರಿಂದ ಪ್ರಪಂಚವು ಅವನಲ್ಲಿಲ್ಲವೆನ್ನಲಾಗುತ್ತದೆ ಎಂದು ಈ ವಿರೋಧಾಭಾಸವನ್ನು ಸರಳವಾಗಿ ಪರಿಹರಿಸಲಾಗಿದೆ. ಅದ್ವೈತ ಸಂಪ್ರದಾಯದ ವ್ಯಾಖ್ಯಾನಕಾರರೂ ಪರಮಾತ್ಮನ ನಿರ್ಲಿಪ್ತತೆಯ ಸಮರ್ಥನೆಗಾಗಿಯೇ ಈ ಉದಾಹರಣೆಯನ್ನು ನಿರೂಪಿಸಲಾಗಿದೆ ಎನ್ನುವುದನ್ನೊಪ್ಪಿದ್ದಾರೆ. ಜಗತ್ತು ಬ್ರಹ್ಮನಲ್ಲಿದ್ದರೂ ಅದು ಮಿಥ್ಯೆ ಎನ್ನುವ ಅಭಿಪ್ರಾಯಕ್ಕೆ ಈ ಉದಾಹರಣೆಯು ವಿಸಂಗತವಾಗುತ್ತದೆ. ಆಕಾಶದಲ್ಲಿ ಚಲಿಸುವ ವಾಯುವು, ಹಗ್ಗದಲ್ಲಿ ಹಾವಿನಂತೆ ಆಕಾಶದಲ್ಲಿ ಕಲ್ಪಿತವೆಂದು ಯಾವ ದಾರ್ಶನಿಕನೂ ಹೇಳಲಾರ. ಅಂತೂ ಆಕಾಶ ವಾಯುಗಳಂತೆ ಅಥವಾ ವಾಯು ಹಾಗೂ ಇತರ ಪದಾರ್ಥಗಳಂತೆ ಬ್ರಹ್ಮ ಹಾಗೂ ಜಗತ್ತುಗಳಿಗೆ ಅನ್ಯೋನ ಸಂಬಂಧವಿದ್ದರೂ ಪರಸ್ಪರವಾಗಿ ಗುಣಧರ್ಮಗಳ ಲೇಪವಿಲ್ಲವೆನ್ನುವುದೇ ಈ ವಿರೋಧಾಭಾಸದ ಭಾವಾರ್ಥ ವೆನ್ನುವುದು ಈ ಉದಾಹರಣೆಯಿಂದ ಸುಸ್ಪಷ್ಟವಾಗುತ್ತದೆ.

**ಪಶ್ಯ ಮೇ ಯೋಗಮೈಶ್ವರಂ ।**

ಎಂದು ಜಗತ್ತು ತನ್ನಲ್ಲಿದ್ದರೂ ಇಲ್ಲದಂತಿರುವುದು ತನ್ನ ಈಶ್ವರಶಕ್ತಿಯ ಪ್ರಭಾವವೆಂದು ಶ್ರೀಕೃಷ್ಣನು ಹೇಳಿದ್ದಾನೆ. ಜಗತ್ತು ಅಸತ್ಯವಾಗಿದ್ದು ಬ್ರಹ್ಮನಲ್ಲಿ ಕಲ್ಪಿತವಾಗಿದ್ದರೆ, ಅದರ ಅಸ್ತಿತ್ವ ಅಥವಾ ಅಭಾವಗಳಿಗೆ ಈಶ್ವರೀ ಶಕ್ತಿಯ ಆವಶ್ಯಕತೆ ಏಕೆ? ಕಲ್ಪನೆಯು ಸಹಜವಾಗಿ ಅಜ್ಞಾನ ಮೊದಲಾದ ದೋಷಗಳಿಂದ ಉಂಟಾಗುವುದು. ಹಗ್ಗದಲ್ಲಿ ಹಾವಿನ ಕಲ್ಪನೆಯಾಗಲು ಯಾರದಾದರೂ ಪ್ರಭುಶಕ್ತಿಯ ಆವಶ್ಯಕತೆ ಇದೆಯೆ? ಜಗತ್ತಿನ ಈ ಸ್ಥಿತಿಗೆ ಈಶ್ವರಶಕ್ತಿಯ ಹಿನ್ನೆಲೆಯನ್ನು ಹೇಳಿರುವುದರಿಂದ ಜಗತ್ತು ಕಲ್ಪಿತವೆನ್ನುವ ಅಭಿಪ್ರಾಯದಿಂದ ಈ

ಶ್ಲೋಕವು ಪ್ರವೃತ್ತವಾಗಿಲ್ಲವೆಂದು ಸ್ಪಷ್ಟವಾಗುತ್ತದೆ. ಜಗತ್ತನ್ನು ವ್ಯಾಪಿಸಿ ಅದರ ಆಧಾರನೆನಿಸಿದರೂ ಅದರ ಯಾವುದೇ ಸಂಪರ್ಕದೋಷವನ್ನು ತಾನು ಹೊಂದದಿರಲು ತನ್ನ ಈಶ್ವರಶಕ್ತಿಯೇ ಕಾರಣವೆಂದು ಭಗವಂತನು ಹೇಳಿದ್ದಾನೆ ಎಂಬುದೇ ಈ ಸಂದರ್ಭಕ್ಕೆ ಉಚಿತವಾದ ಅರ್ಥವಾಗಿದೆ.

## ಪರಮಾತ್ಮದ್ವೇಷವು ಮುಕ್ತಿಸಾಧನವೆ?

ಮುಕ್ತಿಯನ್ನು ಪಡೆಯಲು ಪರಮಾತ್ಮನಲ್ಲಿ ಅನನ್ಯ ಭಕ್ತಿಯು ಸಾಧನವಾಗಿರುವಂತೆ, ಭಗವಂತನನ್ನು ಪರಿಪೂರ್ಣವಾಗಿ ದ್ವೇಷಿಸುವುದರಿಂದಲೂ ಮುಕ್ತಿಯನ್ನು ಪಡೆಯಬಹುದೆಂಬ ಒಂದು ವಾದವಿದೆ.

**ದ್ವೇಷಾಚ್ಚೈದ್ಯಾದಯೋ ನೃಪಾಃ ।**

ಮುಂತಾದ ಭಾಗವತ ವಾಕ್ಯಗಳಲ್ಲಿ ಶಿಶುಪಾಲ ಮೊದಲಾದವರು ಶ್ರೀಕೃಷ್ಣನ ಮೇಲಿನ ವೈರದಿಂದ ಮುಕ್ತಿಯನ್ನು ಪಡೆದಿರುವರೆಂದು ಹೇಳಿದುದನ್ನು ಈ ವಾದದ ಸಮರ್ಥನೆಗೆ ಉದಾಹರಿಸಲಾಗಿದೆ. ಪರಮಾತ್ಮನಿಗೆ ಸಮಾನವಾದ ಆತ್ಮಸ್ವರೂಪದ ಅಭಿವ್ಯಕ್ತಿಯೇ ಮುಕ್ತಿಯಾಗಿದ್ದು ಏಕಾಗ್ರತೆಯಿಂದ ಪರಮಾತ್ಮನನ್ನು ಚಿಂತಿಸುವುದರಿಂದಲೇ ಭಗವತ್‌ಸಾಮ್ಯರೂಪವಾದ ಮುಕ್ತಿಯನ್ನು ಪಡೆಯಲು ಶಕ್ಯವಾಗುತ್ತದೆ. ಈ ಏಕಾಗ್ರ ಚಿಂತನೆಗೆ ಭಕ್ತಿಯು ಅನುಕೂಲವಾಗಿರುವಂತೆ ದ್ವೇಷವೂ ಸಹಾಯವಾಗುತ್ತದೆ. ನಮಗೆ ಅತ್ಯಂತ ಪ್ರಿಯವಾದ ವಸ್ತುವಿನದೇ ನಮಗೆ ಸದಾ ಆಲೋಚನೆ ಇರುತ್ತದೆ. ಅದರಂತೆ ನಮ್ಮ ದ್ವೇಷ, ವೈರಗಳಿಗೆ ಗುರಿಯಾದ ವ್ಯಕ್ತಿಯನ್ನು ನಾವು ಎಂದಿಗೂ ಮರೆಯುವುದಿಲ್ಲ. ಏಕಾಗ್ರಭಾವನೆಗೆ ಭಕ್ತಿ, ದ್ವೇಷಗಳೆರಡೂ ನಮಗೆ ಸಹಾಯಕಗಳಾಗಿವೆ. ಶಿಶುಪಾಲ, ಕಂಸ ಮೊದಲಾದವರು ಇಂತಹ ವೈರಾನುಭಾವದಿಂದ ನಿರಂತರವಾಗಿ ಶ್ರೀಕೃಷ್ಣನನ್ನು ಸ್ಮರಿಸುತ್ತಿದ್ದುದರಿಂದಲೇ ಅವರು ಮುಕ್ತಿಯನ್ನು ಪಡೆದಿರುವರು. ಆದುದರಿಂದ ಜೀವನದಲ್ಲಿ ಅತಿಶಯಿತವಾಗಿ ಪರಮಾತ್ಮನನ್ನು ಪ್ರೀತಿಸುವುದು ಅಥವಾ ಆತ್ಯಂತಿಕವಾಗಿ ಅವನನ್ನು ವಿರೋಧಿಸುವುದು ಇವೆರಡರಲ್ಲಿ ಯಾವುದನ್ನೂ ನಾವು ಆರಿಸಿಕೊಳ್ಳಬಹುದೆಂಬುದು ಈ ವಾದದ ಸಮರ್ಥಕರ ಆಶಯವಾಗಿದೆ.

ಜಗತ್ತಿನ ಕ್ಷೇಮ, ಸುವ್ಯವಸ್ಥೆಗಳಿಗೆ ಅತ್ಯಂತ ಹಾನಿಕರವಾದ ವಿಚಾರವಿದು. ಪರಮಾತ್ಮನ ಭಕ್ತನಾಗಿ ಅವನ ಆದೇಶ, ನಿಯಮಗಳಿಗೆ ವಿಧೇಯತೆಯಿಂದ ವರ್ತಿಸಿ ಲೋಕದ ಪ್ರವೃತ್ತಿ, ಪ್ರಗತಿಗಳಿಗೆ ಸಹಾಯಕನಾಗಿ ನಡೆಯುವವ ಸಜ್ಜನ. ಪರಮಾತ್ಮನ ವಿರೋಧಿಯಾಗಿ ವಿಶ್ವಧಾರಕಗಳಾದ ನೀತಿ, ನಿಯಮಗಳನ್ನು ಉಲ್ಲಂಘಿಸಿ ಸ್ವೇಚ್ಛಾಚಾರಿಯಾಗಿ ನಡೆಯುವವ ದುರ್ಜನ. ಇವರಿಬ್ಬರೂ ಪರಮಾತ್ಮನ ಏಕಾಗ್ರ ಚಿಂತಕರೆಂಬ ಒಂದೇ ಕಾರಣದಿಂದ ಮುಕ್ತಿಗೆ ಸಮಾನವಾಗಿ ಭಾಗಿಗಳೆಂದು ಹೇಳುವುದು ಸರ್ವಥಾ ಸಮಂಜಸವಾಗಲಾರದು. ಒಬ್ಬನನ್ನು ಪ್ರೀತಿಸಿ ಅವನಿಗಾಗಿ ಸರ್ವಸ್ವವನ್ನೂ ಸಮರ್ಪಿಸುವುದಕ್ಕಿಂತ ದ್ವೇಷಿಸಿ ಪ್ರತೀಕಾರ ಕಾರ್ಯವನ್ನು ಕೈಗೊಳ್ಳುವುದು ಸುಲಭ. ಅಲ್ಲಿ ಯಾವ ತ್ಯಾಗ, ತಪಸ್ಸುಗಳ ಆವಶ್ಯಕತೆಯೂ ಇಲ್ಲ. ಆದುದರಿಂದ ಭಕ್ತಿಗಿಂತಲೂ ಸುಲಭವಾದ ದ್ವೇಷ, ಅನೀತಿ, ಸ್ವೇಚ್ಛಾಚಾರದ ಮಾರ್ಗವನ್ನೇ ಅನುಸರಿಸಿ ಸುಲಭವಾಗಿ ಮುಕ್ತಿಯನ್ನು ಏಕೆ ಗಳಿಸಬಾರದೆಂಬ ಭಾವನೆ ಜನರಲ್ಲಿ ಮೂಡಲು ಅವಕಾಶವಾಗುವುದು. ಇದರ ಪರಿಣಾಮ ವಿಶ್ವದ ನಾಶ ಹಾಗೂ ಅಧಃಪತನ.

ಭಗವಂತನ ಕೇವಲ ಏಕಾಗ್ರಚಿಂತನದಿಂದ ನಾವು ಮುಕ್ತಿಯನ್ನು ಪಡೆಯಲು ಸಾಧ್ಯವಿಲ್ಲ. ಅವನ ಸದ್ಗುಣಗಳ ನಿರಂತರ ಸ್ಮರಣದಿಂದಲೇ ಮುಕ್ತಿಯು ನಮ್ಮ ಹಸ್ತಗತವಾಗಬಲ್ಲದು. ಸದ್ಗುಣರೂಪಿಯಾದ ಆತ್ಮನ ಅಭಿವ್ಯಕ್ತಿಗೆ ಭಗವಂತನ ಸದ್ಗುಣಗಳ ಅಖಂಡ ಚಿಂತನೆಯೇ ಆವಶ್ಯಕವಾಗಿದೆ. ಭಕ್ತಿಭಾವವಿರುವಾಗಲೇ ಭಗವಂತನ ಕಲ್ಯಾಣಗುಣಗಳ ನಿರಂತರ ಚಿಂತನವು ನಡೆದಿರುತ್ತದೆ. ವೈರಭಾವದಿಂದ ದೂಷಿತವಾದ ಅಂತಃಕರಣದಲ್ಲಿ ಈ ಸ್ಮರಣವು ಶಕ್ಯವೆ? ದ್ವೇಷವು ಯಾವಾಗಲೂ ದುರ್ಗುಣಗಳನ್ನು ಹುಡುಕುತ್ತದೆ. ಭಗವಂತನಲ್ಲಿ ದೋಷಗಳನ್ನು ಆಲೋಚಿಸುವುದೇ ಅವನ ವಿರೋಧಿಯ ಮುಖ್ಯ ಗುರಿಯಾಗಿದ್ದು ಇಂತಹ ದ್ವೇಷದ ಹಿನ್ನೆಲೆಯಲ್ಲಿ ನಡೆದಿರುವ ಏಕಾಗ್ರಚಿಂತನೆಯು ಆತ್ಮದ ಸದ್ಗುಣಸ್ವರೂಪದ ಅಭಿವ್ಯಕ್ತಿಗೆ ಯಾವ ರೀತಿಯಲ್ಲಿಯೂ ಸಹಾಯಕವಾಗಲಾರದು. ಆದುದರಿಂದಲೇ-

**ಅವಜಾನಂತಿ ಮಾಂ ಮೂಢಾಃ ಮಾನುಷೀಂ ತನುಮಾಶ್ರಿತಂ ।**
**ಮೋಘಾಶಾ ಮೋಘಕರ್ಮಾಣೋ ಮೋಘಜ್ಞಾನಾ ವಿಚೇತಸಃ ।**

ರಾಕ್ಷಸೀಮಾಸುರೀಂ ಚೈವ ಪ್ರಕೃತಿಂ ಮೋಹಿನೀಂ ಶ್ರಿತಾಃ ||

ಎಂದು ಗೀತೆಯಲ್ಲಿ ಅಸುರೀಪ್ರವೃತ್ತಿಯನ್ನು ಬಲವಾಗಿ ಖಂಡಿಸಲಾಗಿದೆ. ಪರಮಾತ್ಮನನ್ನು ದ್ವೇಷಿಸಿ, ತಿರಸ್ಕರಿಸಿ ಸ್ವಚ್ಛಂದವೃತ್ತಿಯಿಂದ ಜೀವನವನ್ನು ನಡೆಸುವ ರಾಕ್ಷಸೀಪ್ರವೃತ್ತಿಯ ಜನರಿಗೆ ಮುಕ್ತಿಯು ಎಂದೂ ಎಟಕುವುದಿಲ್ಲವೆಂದು ಗೀತೆಯು ಹೇಳಿದೆ. ದ್ವೇಷ ಮತ್ತು ಭಕ್ತಿ ಇವೆರಡೂ ಅತ್ಯಂತ ವಿರೋಧಿ ಮಾರ್ಗಗಳೆಂದು ಗೀತೆಯ ಸ್ಪಷ್ಟ ಅಭಿಪ್ರಾಯವಾಗಿದೆ. ಯಾವುದೋ ಆಸುರೀ ಸಂಪರ್ಕದಿಂದ ಶ್ರೀಕೃಷ್ಣನನ್ನು ಬಲವಾಗಿ ವಿರೋಧಿಸುತ್ತಿದ್ದರೂ ಶಿಶುಪಾಲನಂತಹವರ ಸಜ್ಜನಚೇತನದಲ್ಲಿ ಭಗವಂತನ ಬಗ್ಗೆ ಪ್ರಬಲವಾದ ಆಂತರಿಕ ಭಕ್ತಿಯೇ ಇತ್ತು. ಅದು ಕೃಷ್ಣನ ದರ್ಶನವಲ್ಲಿ ಅಂತ್ಯಕಾಲದಲ್ಲಿ ಪ್ರಕಟವಾದುದರಿಂದಲೇ ಅವರು ಮುಕ್ತಿಯನ್ನು ಪಡೆಯುವಂತಾಯಿತು. ಭಾಗವತದ ಅಭಿಪ್ರಾಯವೂ ಇದೇ ಆಗಿದೆ. ತನ್ನ ವಿರೋಧಿಗಳಲ್ಲಿರುವ ಆಂತರಿಕ ಭಕ್ತಿಯನ್ನು ಗುರುತಿಸಿ ಪರಮಾತ್ಮನು ಹೇಗೆ ಅನುಗ್ರಹಿಸುವನೆಂಬುದನ್ನು ಈ ಘಟನೆಗಳು ನಮಗೆ ತಿಳಿಸುತ್ತವೆ. ಅಂತೂ ಭಕ್ತಿಯ ರಾಜಮಾರ್ಗದ ಹೊರತು ಅದರ ವಿರೋಧಿಗಳಾದ ಇತರ ಕುಮಾರ್ಗಗಳಿಂದ ಮುಕ್ತಿಯನ್ನು ಸುಲಭವಾಗಿ ಪಡೆಯುವ ಹಗಲುಗನಸುಗಳ ಬೆನ್ನು ಹತ್ತಬಾರದೆಂಬುದು ಗೀತೆಯ ಆಶಯವಾಗಿದೆ.

## ಯೋಗಕ್ಷೇಮಂ ವಹಾಮ್ಯಹಂ

ತನ್ನ ಭಕ್ತರ ಸಂರಕ್ಷಣೆಯ ಪೂರ್ಣ ಭಾರವನ್ನು ಭಗವಂತನು ಹೊತ್ತಿರುವನು. ತನ್ನನ್ನೇ ದೃಢನಿಷ್ಠೆಯಿಂದ ಉಪಾಸಿಸುವ ನಿತ್ಯಾಭಿಯುಕ್ತರಾದ ಭಕ್ತರ ಯೋಗಕ್ಷೇಮವನ್ನು ತಾನು ನಿರ್ವಹಿಸುವೆನೆಂದು ಶ್ರೀಕೃಷ್ಣನು ಗೀತೆಯಲ್ಲಿ ಅಭಿವಚನವನ್ನು ನೀಡಿರುವನು. ನಮ್ಮಲ್ಲಿ ಆತ್ಮವಿಶ್ವಾಸ ಹಾಗೂ ಹೃದಯ ಬಲವನ್ನು ಕುದುರಿಸುವ ಜಗದೀಶ್ವರನ ಆಶ್ವಾಸನದ ದಿವ್ಯ ಸಂಜೀವಿನಿಯು ದೊರಕಿರುವಾಗ ಜನತೆಯು ಜೀವನದ ಹೋರಾಟದಲ್ಲಿ ಕಂಗೆಡುವುದೇಕೆ? ಭಗವದ್ಭಕ್ತಿಯ ಭದ್ರವಾದ ತಳಹದಿಯ ಮೇಲೆ ಜೀವನದ ಉತ್ತುಂಗ ಸೌಧದ ನಿರ್ಮಾಣಕಾರ್ಯದಲ್ಲಿ ನಾವು ದೃಢ ನಿರ್ಧಾರದಿಂದ ತೊಡಗಬಹುದು. ತನ್ನನ್ನು

ಮೊರೆಹೊಕ್ಕು ಪ್ರಾರ್ಥಿಸುತ್ತಿರುವ ಭಕ್ತವರ್ಗವನ್ನು ರಕ್ಷಿಸುವುದು ತನ್ನ ವ್ರತವೆಂದು ರಾಮಾವತಾರದಲ್ಲಿ ಭಗವಂತನು ಹೇಳಿದ್ದಾನೆ.

ಸಕೃದೇವ ಪ್ರಪನ್ನೋ ಯಃ ತವಾಸ್ಮೀತಿ ಚ ಯಾಚತೇ ।
ಅಭಯಂ ಸರ್ವಭೂತೇಭ್ಯಃ ದದಾಮ್ಯೇತದ್ ವ್ರತಂ ಮಮ ॥

ಇದು ರಾಮಾವತಾರದಲ್ಲಿ ಶರಣಾಗತ ಭಕ್ತನಿಗೆ ಪರಮಾತ್ಮನೇ ನೀಡಿದ ಅಭಯವಾಣಿಯಾಗಿದ್ದರೆ,

ಅನನ್ಯಾಶ್ಚಿಂತಯಂತೋ ಮಾಂ ಯೇ ಜನಾಃ ಪರ್ಯುಪಾಸತೇ ।
ತೇಷಾಂ ನಿತ್ಯಾಭಿಯುಕ್ತಾನಾಂ ಯೋಗಕ್ಷೇಮಂ ವಹಾಮ್ಯಹಂ ॥

ಇದು ಕೃಷ್ಣಾವತಾರದಲ್ಲಿ ಭಗವಂತನು ನೀಡಿದ ಭರವಸೆಯ ಅಮೃತವಾಣಿ ಆಗಿದೆ.

ಕೌಂತೇಯ ಪ್ರತಿಜಾನೀಹಿ ಸ ಮೇ ಭಕ್ತಃ ಪ್ರಣಶ್ಯತಿ ।

"ಅರ್ಜುನ! ನನ್ನ ಭಕ್ತನಿಗೆ ಎಂದೆಂದಿಗೂ ನಾಶವಿಲ್ಲವೆಂಬುದನ್ನು ದೃಢವಾಗಿ ತಿಳಿದುಕೋ" ಎಂಬ ಭಕ್ತಿಯ ಮಾರ್ಗದಲ್ಲಿ ಮುನ್ನಡೆಯುವವನಿಗೆ ಯಾವ ಹಾನಿಯೂ ಇಲ್ಲವೆಂದು ಅಭಿನಿವೇಶದಿಂದ ಭಗವಂತನು ಸಾರಿದ್ದಾನೆ. ಇಂತಹ ಸುಸ್ಪಷ್ಟ ಘೋಷಣೆಗಳಿರುವಾಗ ಜೀವಬ್ರಹ್ಮೈಕ್ಯದಂತಹ ಅಪಕ್ವ ಹಾಗೂ ಅಸಂಬದ್ಧ ವಿಚಾರಗಳನ್ನು ತಲೆಯಲ್ಲಿ ತುಂಬಿಕೊಂಡು ಭಕ್ತಿವಿರೋಧಿ ಮಾರ್ಗಗಳನ್ನು ಬೋಧಿಸಿ ಜನರ ಮನಸ್ಸಿನಲ್ಲಿ ವೃಥಾ ಗೊಂದಲವೆಬ್ಬಿಸುವುದನ್ನು ಕಂಡು ನಮ್ಮ ಮನಸ್ಸಿಗೆ ಬಹಳ ಸಂತಾಪವಾಗುತ್ತಿದೆ. ಭಗವಂತನೇ ಭಕ್ತಿಮಾರ್ಗವನ್ನು ಶ್ರೇಷ್ಠವೂ ಪವಿತ್ರವೂ ಎನಿಸಿದ ನಿರಾತಂಕವಾದ ರಾಜಪಥ ವೆಂದು ಘೋಷಿಸಿರುವಾಗ ಆ ಮಾರ್ಗದಲ್ಲಿ ನಡೆಯಲು ಸಂಕೋಚ, ಸಂದೇಹಗಳೇಕೆ? ಇದು ಅಜ್ಞಾನಿಗಳಿಗೆ ಮಾತ್ರ ಮೀಸಲಾದ ದಾರಿಯೆಂದು ಅದನ್ನು ಏಕೆ ಹೀಗಳೆಯುತ್ತಾರೆಂಬುದೇ ನಮಗೆ ಅರ್ಥವಾಗುತ್ತಿಲ್ಲ. ಜನರು ಇಂತಹ ಅಸಂಬದ್ಧ ವಿಚಾರ ಗೊಂದಲಗಳಲ್ಲಿ ವೃಥಾ ಕಾಲಹರಣ ಮಾಡದೆ ನಿಃಸಂಕೋಚಭಾವದಿಂದ ಭಕ್ತಿಯೋಗವನ್ನಾಶ್ರಯಿಸುವುದೇ ವಿಹಿತವಾಗಿದೆ.

ಕೌಂತೇಯ ಪ್ರತಿಜಾನೀಹಿ ನ ಮೇ ಭಕ್ತಃ ಪ್ರಣಶ್ಯತಿ ।

ಈ ವಾಕ್ಯದಲ್ಲಿ ಶ್ರೀಕೃಷ್ಣನು ತನ್ನ ಭಕ್ತರಿಗೆ ಎಂದಿಗೂ ನಾಶವಿಲ್ಲವೆಂದು ಅರ್ಜುನನಿಂದ ಪ್ರತಿಜ್ಞೆ ಮಾಡಿಸುತ್ತಾನೆ. ಅದೇಕೆ? ತಾನು ಪ್ರತಿಜ್ಞೆ ಮಾಡದೆ ಅರ್ಜುನನಿಂದ ಭಗವಂತನು ಏಕೆ ಪ್ರತಿಜ್ಞೆ ಮಾಡಿಸುತ್ತಾನೆ? ತನ್ನ ಪ್ರತಿಜ್ಞೆಯಾದರೂ ಕೆಲವೊಮ್ಮೆ ಹುಸಿಯಾದೀತು. ತನ್ನ ಭಕ್ತರ ಪ್ರತಿಜ್ಞೆಯು ಎಂದಿಗೂ ಹುಸಿಯಾಗಲಾರದೆಂದು ಶ್ರೀಕೃಷ್ಣನ ಆಶಯವಾಗಿದೆ.

**ಸ್ವನಿಯಮಮಪಹಾಯ ಮತ್ ಪ್ರತಿಜ್ಞಾಂ**
**ಋತಮಧಿಕರ್ತುಮವಪ್ಲುತೋ ರಥಸ್ಥಃ ।**
**ಧೃತರಥಚರಣೋಽಭ್ಯಯಾಚ್ಚಲದ್ಗುಃ**
**ಹರಿರಿವ ಹಂತುಮಿಮಂ ಗತೋತ್ತರೀಯಃ ॥**

ಎಂದು ಭಾಗವತದಲ್ಲಿ ಭೀಷ್ಮರು ವರ್ಣಿಸುತ್ತಾರೆ. ''ತನ್ನ ಭಕ್ತರ ಪ್ರತಿಜ್ಞೆಯು ಹುಸಿಯಾಗಬಾರದೆಂದು ಚಕ್ರವನ್ನು ಧರಿಸಿ ತನ್ನ ಪ್ರತಿಜ್ಞೆಯನ್ನೇ ಭಕ್ತರಿಗಾಗಿ ಭಂಗಗೊಳಿಸಲು ಅಣಿಯಾದ ಶ್ರೀಕೃಷ್ಣನ ಭಕ್ತಾನುಗ್ರಹಕಾರಕವಾದ ಆ ಪ್ರಸನ್ನವದನವನ್ನು ನಾನೆಂತು ಮರೆಯಲಿ!'' ಮರಣಶಯ್ಯೆಯಲ್ಲಿದ್ದ ಭೀಷ್ಮರ ಉದ್ಗಾರವಿದು. ಮಹಾಭಾರತ ಯುದ್ಧದಲ್ಲಿ ತಾನು ಆಯುಧವನ್ನು ಧರಿಸುವುದಿಲ್ಲವೆಂದು ಶ್ರೀಕೃಷ್ಣನು ಪ್ರತಿಜ್ಞೆ ಮಾಡಿದ್ದರೂ ಕೃಷ್ಣನು ಆಯುಧವನ್ನು ಧರಿಸುವಂತೆ ಮಾಡುವೆನೆಂಬ ಭೀಷ್ಮರ ಪ್ರತಿಜ್ಞೆಯನ್ನು ಪರಿಪಾಲಿಸುವುದಕ್ಕಾಗಿ ಅವರ ಶಸ್ತ್ರಾಸ್ತ್ರಗಳಿಂದ ಪೀಡಿತನಾದಂತೆ ನಟಿಸಿ, ತನ್ನ ಪ್ರತಿಜ್ಞೆಯನ್ನು ಮುರಿದು ಶಸ್ತ್ರಧಾರಣೆಯನ್ನು ಮಾಡುವನು. ತನ್ನ ಮಾತಿಗಿಂತಲೂ ತನ್ನ ಭಕ್ತರ ಮಾತಿಗೆ ಹೆಚ್ಚಿನ ಪ್ರಾಶಸ್ತ್ಯವನ್ನು ನೀಡಿದ ಶ್ರೀಕೃಷ್ಣನು ನಮ್ಮಲ್ಲಿ ವಿಶ್ವಾಸವನ್ನು ಮೂಡಿಸುವುದಕ್ಕಾಗಿ ತನ್ನ ಪರಮಭಕ್ತ ಅರ್ಜುನನಿಂದಲೇ ''ನ ಮೇ ಭಕ್ತಃ ಪ್ರಣಶ್ಯತಿ'' ಎಂದು ಪ್ರತಿಜ್ಞೆ ಮಾಡಿಸುತ್ತಾನೆಂದು ಈ ಶ್ಲೋಕವನ್ನು ಸ್ವಾರಸ್ಯಕರ ರೀತಿಯಲ್ಲಿ ಕೆಲವರು ವ್ಯಾಖ್ಯಾನ ಮಾಡಿರುವರು.

## ಕ್ರಿಯಾಸಮರ್ಪಣೆ

ಭಕ್ತರ ಯೋಗಕ್ಷೇಮದ ಭಾರವನ್ನು ಹೊತ್ತಿರುವ ಪರಮಾತ್ಮನು ನಮ್ಮಿಂದ ಹೆಚ್ಚಿನದೇನನ್ನೂ ಅಪೇಕ್ಷಿಸುವುದಿಲ್ಲ. ನಮ್ಮಲ್ಲಿರುವ ವಸ್ತುವನ್ನು

ಸ್ವಾರ್ಥಕ್ಕಾಗಿಯೇ ಬಳಸದೆ ಅದನ್ನು ಭಗವಂತನಿಗಾಗಿ ಸಮರ್ಪಿಸುವ ತ್ಯಾಗವೃತ್ತಿಯಿಂದ ಪರಮಾತ್ಮನು ಪ್ರಸನ್ನನಾಗುವನು. ವಸ್ತುವಿನ ಮೇಲೆ ಒಡೆತನದ ಭಾವನೆಯಾಗಲೀ ನಮ್ಮ ಕ್ರಿಯೆಗಳ ಬಗ್ಗೆ ಕರ್ತೃತ್ವದ ಅಹಂಕಾರವಾಗಲೀ ನಮ್ಮಲ್ಲಿ ಇರಬಾರದು. ನಮ್ಮಿಂದ ನಡೆದ ಎಲ್ಲ ಕಾರ್ಯಗಳಿಗೂ ಸ್ವತಂತ್ರನಾದ ಪರಮಾತ್ಮನೇ ಪ್ರೇರಕನೂ ಕಾರಕನೂ ಆಗಿರುವನೆಂದು ಭಾವಿಸುವುದೇ ಸಕಲ ಕ್ರಿಯೆಗಳ ಸಮರ್ಪಣವಾಗಿದೆ. ಪರಮಾತ್ಮನಿಗೆ ಪ್ರೀತಿಕರವಾಗುವಂತೆ ನಮ್ಮ ಎಲ್ಲ ವ್ಯವಹಾರಗಳೂ ನಡೆಯಬೇಕೆಂಬ ಬಲವಾದ ಭಾವನೆಯಿಂದ ಪ್ರವರ್ತಿಸುವುದ ರಿಂದ ನಮ್ಮ ಎಲ್ಲ ಕ್ರಿಯೆಗಳು ಹರಿಪೂಜೆ ಎನಿಸುವವು. ಲೋಕವ್ಯವಸ್ಥೆಗೆ ಪೋಷಕವಾದ ಸದ್ವೃತ್ತಿಗಳೇ ಭಗವಂತನಿಗೆ ಪ್ರಿಯವಾಗಿರುವುದರಿಂದ ನಮ್ಮ ಶಯನಾಸನಾದಿ ವ್ಯವಹಾರಗಳೆಲ್ಲವೂ ವಿಶ್ವಕರ್ತನ ನಿಯಮ ಆದೇಶಗಳಿಗೆ ಅನುಸಾರವಾಗಿ ಇದ್ದರೆ ಮಾತ್ರ ಅವು ಹರಿಪೂಜೆ ಎನಿಸುತ್ತವೆ. ತನ್ನ ಜೀವನದ ಎಲ್ಲ ಕೃತಿಗಳನ್ನು ಹೀಗೆ ಭಗವಂತನ ಪೂಜೆಯಾಗಿ ಮಾರ್ಪಡಿಸಿಕೊಂಡು ಎಲ್ಲ ಕ್ರಿಯೆಗಳ ಬಗ್ಗೆಯೂ ದೇವರಿಗೆ ಇರುವ ಸ್ವಾತಂತ್ರ್ಯವನ್ನು ಸ್ಮರಿಸಿ ನಡೆಯುವುದೇ ಸರ್ವಕ್ರಿಯಾಸಮರ್ಪಣೆಯಾಗಿದ್ದು, ಇದನ್ನೇ-

**ಯತ್ ಕರೋಷಿ ಯದಶ್ನಾಸಿ**<br>
**ಯಜ್ಜುಹೋಷಿ ದದಾಸಿ ಯತ್ ।**<br>
**ಯತ್ ತಪಸ್ಯಸಿ ಕೌಂತೇಯ**<br>
**ತತ್ ಕುರುಷ್ವ ಮದರ್ಪಣಂ ॥**

ಎಂದಿದ್ದಾರೆ.

## ಹರಿಪೂಜೆ ಬಹು ಸುಲಭ

ಆದರಂತೆ ನಮ್ಮಲ್ಲಿರುವ ಸಾಧನಸಾಮಗ್ರಿಯನ್ನೂ ದೇಹೇಂದ್ರಿಯಗಳನ್ನೂ ಲೌಕಿಕ ಸಂಪತ್ತನ್ನೂ ಪರಮಾತ್ಮನಿಗೆ ಪ್ರಿಯಕರವಾದ ಕಾರ್ಯಕ್ಕೆ ವಿನಿಯೋಗಿಸಿದರೆ ಅದೂ ಭಗವತ್ ಸಮರ್ಪಣೆ ಎನಿಸುತ್ತದೆ. ನಮ್ಮಲ್ಲಿರುವ ಸಾಧನಸಾಮಗ್ರಿ ಅಲ್ಪವೇ ಆಗಿರಬಹುದು. ಆದರೂ ಅದನ್ನು ಸ್ವಾರ್ಥಕ್ಕಾಗಿ ಬಳಸದೆ ಭಗವಂತನ ಸೇವೆಗಾಗಿ ವಿನಿಯೋಗಿಸಬೇಕು. ಅವನಿಗೆ ಪ್ರಿಯವಾದ ಕಾರ್ಯಗಳಿಗೇ

ಅರ್ಪಿತಗೊಳಿಸಬೇಕು. ವಸ್ತುವಿನ ಪರಿಮಾಣವನ್ನಲ್ಲ, ಅದರ ಹಿಂದಿರುವ ಭಾವನೆಯ ವಿಸ್ತಾರವನ್ನು ಪರಮಾತ್ಮನು ಗಮನಿಸುತ್ತಾನೆ-

> **ಪತ್ರಂ ಪುಷ್ಪಂ ಫಲಂ ತೋಯಂ**
> **ಯೋ ಮೇ ಭಕ್ತ್ಯಾ ಪ್ರಯಚ್ಛತಿ ।**

ಎಷ್ಟೇ ಅಲ್ಪವಾದ ವಸ್ತುವಾದರೂ ಭಕ್ತಿಯ ಹಿರಿಮೆಯಿಂದ ಅದು ದೊಡ್ಡದಾಗುವುದು. ಅಂತೂ ಪರಮಾತ್ಮನು ಭಕ್ತನಿಂದ ತ್ಯಾಗ ಹಾಗೂ ಸಮರ್ಪಣಭಾವವನ್ನು ಬಯಸುತ್ತಾನೆ. ಇದರಿಂದ ಲೋಕದ ಪ್ರಗತಿಯ ಜೊತೆಗೆ ಭಕ್ತನ ವೈಯಕ್ತಿಕ ವಿಕಾಸವೂ ಸಾಧಿತವಾಗುತ್ತದೆ. ನೂರಾರು ಸುವರ್ಣಾಭರಣಗಳಿಂದ, ವೈಭವಾಡಂಬರಗಳಿಂದ ಪೂಜಿಸಿದ ಚೋಲರಾಜನಿಂದ ಪಡೆಯಲಾಗದ ಆಧ್ಯಾತ್ಮಿಕ ಸಿದ್ಧಿಯನ್ನು ತುಲಸೀಪತ್ರಗಳಿಂದ ಪರಮಾತ್ಮನನ್ನು ಅರ್ಚಿಸಿದ ವಿಷ್ಣುದಾಸನು ಹೊಂದಿದನು. ಮೊಸಳೆಯ ಆಕ್ರಮಣವನ್ನು ಸರ್ವಶಕ್ತಿಯಿಂದ ಎದುರಿಸಿ ತನ್ನ ಪುರುಷಪ್ರಯತ್ನವೆಲ್ಲ ವಿಫಲವಾದಾಗ ಕಮಲಪುಷ್ಪವನ್ನೆತ್ತಿ ಹಿಡಿದು ಆರ್ತಭಾವದಿಂದ ಮೊರೆಯಿಟ್ಟ ಗಜರಾಜನನ್ನು ಸಂರಕ್ಷಿಸಲು ಆತುರದಿಂದ ಓಡಿಬಂದಿದ್ದಾನೆ ನಮ್ಮ ಭಕ್ತವತ್ಸಲನಾದ ಶ್ರೀಹರಿ. ವರ್ಷವರ್ಷಗಳವರೆಗೆ ಶ್ರೀರಾಮನ ಪ್ರತೀಕ್ಷೆಯಲ್ಲಿ ಕಾದು ಕುಳಿತ ದಾಸಿ ಶಬರಿಯು ಕಾಡಿನಲ್ಲಿ ಬೆಳೆದ ಫಲಗಳನ್ನು ಅವನಿಗೆ ಸಮರ್ಪಿಸಿ ಪರಮಶ್ರೇಯಸ್ಸನ್ನು ಪಡೆದಳು. ಬಹುದಿನಗಳ ಉಪವಾಸದ ನಂತರ ಅಂದು ತಾನು ಸ್ವೀಕರಿಸಬೇಕೆಂದಿದ್ದ ಹಿಟ್ಟನ್ನು ಉಪವಾಸದಿಂದ ಬಳಲಿದ ಬೇಡರಿಗೆ ನೀಡಿ ಉಳಿದಿರುವ ಸ್ವಲ್ಪ ನೀರನ್ನು ರಾಜಾ ರಂತಿದೇವನು ಕುಡಿಯಬಯಸಿದ. ಆದರೆ ಎದುರಿಗೆ ನೀರಿಗಾಗಿ ಬಾಯಿ ತೆರೆದು ತನ್ನನ್ನೇ ದೀನದೃಷ್ಟಿಯಿಂದ ನೋಡುತ್ತಿರುವ ನಾಯಿಯನ್ನು ಕಂಡು ಸರ್ವಾಂತರ್ಯಾಮಿಯಾದ ಶ್ರೀಹರಿಯು ಪ್ರೀತನಾಗಲೆಂದು ಆ ನೀರನ್ನು ನಾಯಿಗೆ ಧಾರೆ ಎರೆಯುತ್ತಾನೆ. ''ಸ್ವಾಮಿ, ಸಮಗ್ರ ಭೂಮಿಯ ಚಕ್ರಾಧಿಪತ್ಯವನ್ನಾಗಲಿ ಸಕಲಭೋಗವೈಭವವನ್ನಾಗಲಿ ಹೆಚ್ಚೇಕೆ, ಮುಕ್ತಿಯನ್ನೂ ನಾನು ಬಯಸುವುದಿಲ್ಲ; ಸಕಲ ಜನರ ಒಳಗಿದ್ದು ಅವರೆಲ್ಲರ ದುಃಖವನ್ನೂ ನಾನೇ

ಅನುಭವಿಸುವಂತಾಗಿ ಅವರು ದುಃಖರಹಿತರಾಗುವಂತಿದ್ದರೆ ಅದೇ ನನಗೆ ಹಿಗ್ಗು!'' ಇದು ತ್ಯಾಗಿ, ತಪಸ್ವಿಯಾದ ರಾಜಾ ರಂತಿದೇವನ ಅಮೃತಮಯ ಉದ್ಗಾರವಾಗಿದೆ. ಹೀಗೆ ಪತ್ರ ಪುಷ್ಪ ಫಲ ತೋಯಗಳ ಸಮರ್ಪಣೆಗೆ ವಿಷ್ಣುದಾಸ, ಗಜೇಂದ್ರ, ಶಬರಿ, ರಂತಿದೇವರು ಆದರ್ಶ ಉದಾಹರಣೆಗಳೆನಿಸಿದ್ದಾರೆ.

ಈ ಶ್ಲೋಕಕ್ಕೆ ಇನ್ನೂ ಒಂದು ಆಧ್ಯಾತ್ಮಿಕ ಅರ್ಥವಿದೆ.

**ಛಂದಾಂಸಿ ಯಸ್ಯ ಪರ್ಣಾನಿ ।**

ಜಗತ್ತೆಂಬ ವಿಶಾಲ ವೃಕ್ಷದ ಪತ್ರಗಳೆಂದು ವೇದವನ್ನು ವರ್ಣಿಸಿದ್ದಾರೆ. ವೇದಾಧ್ಯಯನ ಮಾಡಿ ವೇದಕುಸುಮದ ಜ್ಞಾನಮಧುವನ್ನು ತನ್ನಲ್ಲಿ ಸಂಗ್ರಹಿಸಿ ಸಜ್ಜನರಲ್ಲಿ ಅದರ ವಿತರಣ ಮಾಡುವುದೇ ಪತ್ರ ಸಮರ್ಪಣವೆನಿಸುವುದು.

**ಅಹಿಂಸಾ ಪ್ರಥಮಂ ಪುಷ್ಪಂ ಪುಷ್ಪಮಿಂದ್ರಿಯನಿಗ್ರಹಃ ।**

ಎಂದು ಮುಂತಾಗಿ ನಿರೂಪಿಸಲಾದ ಅಹಿಂಸಾ, ಇಂದ್ರಿಯನಿಗ್ರಹ, ಸರ್ವಭೂತದಯಾ, ಸತ್ಯ, ಜ್ಞಾನ, ತಪಸ್ಸು, ಕ್ರಿಯಾ, ಧ್ಯಾನಗಳೆಂಬ ಎಂಟು ಭಾವಪುಷ್ಪಗಳನ್ನು ಇಲ್ಲಿ ಪುಷ್ಪವೆಂದು ಪರಿಗ್ರಹಿಸಲಾಗಿದೆ. ಇಂತಹ ಸದ್ಗುಣಗಳನ್ನು ಜೀವನದಲ್ಲಿ ಅಳವಡಿಸಿಕೊಳ್ಳುವುದೇ ಪುಷ್ಪದ ಅರ್ಪಣೆಯಾಗಿದೆ. ಸತ್ಕರ್ಮವನ್ನಾಚರಿಸಿ ಅದರ ಫಲವನ್ನು ಬಯಸದೆ ನಿಷ್ಕಾಮವೃತ್ತಿಯಿಂದ ಇರುವುದು ಫಲಾರ್ಪಣೆ ಎನಿಸುವುದು. ಪರಮಾತ್ಮನ ಕಥಾಶ್ರವಣ ಹಾಗೂ ಕೀರ್ತನಕಾಲಗಳಲ್ಲಿ ಭಕ್ತಿಯ ಆವೇಶದಿಂದ ಉಕ್ಕಿ ಹರಿಯುವ ಆನಂದಬಾಷ್ಪದ ಜಲಧಾರೆಯನ್ನು ಇಲ್ಲಿ ತೋಯವೆಂದು ಪರಿಗ್ರಹಿಸಬಹುದು. ಭಕ್ತಿರಸಭರಿತವಾದ ಇಂತಹ ಸಂಕೀರ್ತನಯೋಗವೇ ಶ್ರೀಹರಿಗೆ ಭಕ್ತನು ಮಾಡುವ ತೋಯಾರ್ಪಣೆಯಾಗಿದೆ. ಅಂತೂ ಈ ಸುಂದರವಾದ ಪದ್ಯವು ಯಾವ ವೈಭವಾಡಂಬರಗಳಿಲ್ಲದಿದ್ದರೂ ತುಂಬಿದ ಹೃದಯದಿಂದ ಭಗವಂತನನ್ನು ಹೇಗೆ ಒಲಿಸಬಹುದೆಂಬುದನ್ನು ನಮಗೆ ತೋರಿಸಿಕೊಡುತ್ತದೆ.

## ಆಚಾರವೂ ಭಕ್ತಿಯೂ

ಪರಮಾತ್ಮನು ಮಾಡಿದ ಭಕ್ತಿಯ ಪ್ರಶಂಸೆಯನ್ನು ತಮ್ಮ ಸ್ವಚ್ಛಂದ ವ್ಯವಹಾರಕ್ಕಾಗಿ ದುರುಪಯೋಗಪಡಿಸುವವರೂ ಅನೇಕರಿದ್ದಾರೆ. ಭಕ್ತಿಯೊಂದಿದ್ದರೆ ಸಾಕು, ಎಷ್ಟು ಅನೀತಿ ಅನಾಚಾರಗಳನ್ನಾದರೂ ಮಾಡಿ ದಕ್ಕಿಸಿಕೊಳ್ಳಬಹುದೆಂದು ಕೆಲವರು ಭಾವಿಸಿದ್ದಾರೆ. ನೀತಿ, ನಡತೆ, ಸದಾಚಾರ ಮುಂತಾದ ಬಾಹ್ಯ ವ್ಯವಹಾರಗಳಿಗೆ ನಾವು ಏನೂ ಮಹತ್ತ್ವ ಕೊಡಬೇಕಾಗಿಲ್ಲ. ಅಂತರ್ಯದಲ್ಲಿ ಭಕ್ತಿಯೊಂದಿದ್ದರೆ ಬಾಹ್ಯದಲ್ಲಿ ಯಾವ ದುರ್ವ್ಯವಹಾರವನ್ನು ಮಾಡಿದರೂ ಅವನು ಮುಕ್ತಿಯನ್ನು ಪಡೆಯಬಲ್ಲನೆಂಬ ಈ ವಿಚಾರದ ಸಮರ್ಥನೆಗೆ

**ಅಪಿ ಚೇತ್ ಸುದುರಾಚಾರೋ**
**ಭಜತೇ ಮಾಮನನ್ಯಭಾಕ್ ।**
**ಸಾಧುರೇವ ಸ ಮಂತವ್ಯಃ...**

ಈ ಶ್ಲೋಕವನ್ನು ಉದಾಹರಿಸಲಾಗುತ್ತಿದೆ. ದುರಾಚಾರಿಯಾಗಿದ್ದರೂ ಭಕ್ತನಾಗಿದ್ದರೆ ಅವನು ಸಾಧುವೆಂದು ಈ ಶ್ಲೋಕದಿಂದ ಕಂಡುಬರುವ ಅರ್ಥವನ್ನು ಗ್ರಹಿಸಿದಾಗ ಭಕ್ತಿಮಾರ್ಗವು ಅನೀತಿ ಅನಾಚಾರಗಳಿಗೆ ಮುಕ್ತದ್ವಾರ ದಂತಿದೆ ಎಂದು ನಮಗೆ ಅನಿಸಬಹುದು. ಆದರೆ ಉಪನಿಷತ್ತಿನಲ್ಲಿ,

**ನಾವಿರತೋ ದುಶ್ಚರಿತಾತ್...**
**ಪ್ರಜ್ಞಾನೇನೈನಮಾಪ್ನುಯಾತ್**

-ಕಠೋಪನಿಷತ್

ಎಂದು ದುರಾಚಾರದಿಂದ ದೂರನಾದವನೇ ಪರಮಾತ್ಮನನ್ನು ಹೊಂದಬಲ್ಲನೆಂದು ಭಕ್ತಿಗೂ ಸದಾಚಾರಕ್ಕೂ ಅಭೇದ್ಯ ಸಂಬಂಧವನ್ನು ಬೋಧಿಸಲಾಗಿದೆ. ಪರಮಾತ್ಮನಲ್ಲಿ ಪ್ರೇಮಭಾವವನ್ನು ಬೆಳೆಸಿಕೊಂಡಿರುವವನು ಪ್ರಪಂಚದ ವಿಷಯಗಳಲ್ಲಿ ಆಸಕ್ತಿಯನ್ನು ಕಳೆದುಕೊಂಡಿರುತ್ತಾನೆ. ವಿಷಯಾಸಕ್ತನಲ್ಲದ ಇಂತಹ ಭಕ್ತನು ರಾಗದ್ವೇಷದೂಷಿತಗಳಾದ ಹೀನಕೃತ್ಯಗಳನ್ನು ಹೇಗೆ

ಮಾಡಬಲ್ಲನು? ಭಗವತ್ಪ್ರೇಮಕ್ಕೆ ವಶಂವದವನಾಗಿ, ಲೋಕವ್ಯವಸ್ಥೆಗಾಗಿ ದೇವರು ಏರ್ಪಡಿಸಿದ ನಿಯಮಗಳನ್ನು ಸ್ವಯಂ ಪ್ರೇರಣೆಯಿಂದ ಅನುಸರಿಸುತ್ತಿರುವ ಭಕ್ತನಿಂದ ಅವುಗಳಿಗೆ ವಿಸಂಗತಗಳಾದ ವ್ಯವಹಾರಗಳು ಹೇಗೆ ಘಟಿಸಬಲ್ಲವು? ಆದುದರಿಂದ ಭಕ್ತಿ ಮತ್ತು ಸದಾಚಾರಗಳು ಪರಸ್ಪರ ಅವಿಭಕ್ತಗಳಾಗಿಯೇ ಇರುವವು. ಆದರೆ ಲೋಕದಲ್ಲಿ ಭಕ್ತರೆನಿಸಿಕೊಂಡು ಮುದ್ರೆ, ಅಂಗಾರಕ ಮೊದಲಾದ ಭಕ್ತಿಯ ಲಾಂಛನಗಳನ್ನು ಧರಿಸಿದವರೂ ತಾಸುಗಟ್ಟಲೆ ಜಪಪೂಜಾ ಪಾರಾಯಣಗಳಲ್ಲಿ ನಿರತರಾದವರೂ ಅನೈತಿಕ ವ್ಯವಹಾರಗಳಲ್ಲಿ ತೊಡಗಿರುವುದನ್ನು ಕಾಣುತ್ತಿರುವೆವಲ್ಲವೆ? ಎಂಬ ಪ್ರಶ್ನೆ ಉದ್ಭವಿಸುತ್ತದೆ. ಬಹಿರಂಗದಲ್ಲಿ ಪೂಜಾದಿಗಳ ವಿಡಂಬನೆ ಮಾಡಿ ಅಂತರಂಗದಲ್ಲಿ ಅನೀತಿ, ವಂಚನೆಗಳಲ್ಲಿ ತೊಡುಗುವವರನ್ನು ನಿಜವಾದ ಭಕ್ತರ ಸಾಲಿನಲ್ಲಿ ಪರಿಗಣಿಸಲಾಗುವುದಿಲ್ಲ. ರಂಗಭೂಮಿಯಲ್ಲಿ ದುಃಖ ದೈನ್ಯಗಳನ್ನು ಅಭಿನಯಿಸುವ ನಟರಂತೆ ಇವರು ಕೇವಲ ವೇಷಧಾರಿಗಳು. ಇವರದು ಭಾವನೆಯಿಲ್ಲದ ಭಕ್ತಿಯ ಅಭಿನಯ ಮಾತ್ರ.

**ಡಾಂಭಿಕತ್ವೇನ ಸೋಽನುಮೇಯಃ ।**

ಎಂದು ಗೀತಾಭಾಷ್ಯದಲ್ಲಿ ಆಚಾರ್ಯರು ಇಂತಹವರ ಬಗ್ಗೆ ಕಟುವಾಗಿ ಜರೆದಿದ್ದಾರೆ. ನಿಜವಾದ ಭಕ್ತನ ಅಂತರಂಗ ಬಹಿರಂಗಗಳೆರಡೂ ಪರಿಶುದ್ಧವಿರುತ್ತವೆ. ಅನಂತಗುಣಾಕರನಾದ ವಿಶ್ವದ ವ್ಯವಸ್ಥಾಪಕನೂ ಆದ ಪರಮಾತ್ಮನು ಎಲ್ಲ ಕಡೆಯಲ್ಲಿಯೂ ನೆಲೆಸಿರುವನು ಎಂಬ ಜಾಗೃತ ಪ್ರಜ್ಞೆಯನ್ನು ಪಡೆದ ಭಕ್ತನು ದುರ್ವ್ಯವಹಾರಗಳಿಗೆ ಎಂದಿಗೂ ಇಳಿಯಲಾರ. ಭಕ್ತಿಯಿಂದ ಮಾನವನಲ್ಲಿ ಉಂಟಾಗುವ ಸತ್ಪರಿಣಾಮವೇ ಸದಾಚಾರವಾಗಿದ್ದು ಅವೆರಡೂ ಪರಸ್ಪರವಾಗಿ ಹೊಂದಿಕೊಂಡೇ ಇರುವವು. ಆದುದರಿಂದ ಆಚಾರ, ನಡತೆ ಹೇಗೇ ಇರಲಿ, ಭಕ್ತಿಯೊಂದಿದ್ದರೆ ಸಾಕು ಎನ್ನುವುದು ಅಶಾಸ್ತ್ರೀಯವೂ ಅವೈಜ್ಞಾನಿಕವೂ ಆದ ವಿಚಾರವಾಗಿದೆ. ಜನರ ಬಾಹ್ಯ ವರ್ತನೆಯಿಂದಲೇ ಅವರ ಆಂತರಿಕವಾದ ಭಕ್ತಿಯ ನೈಜತೆಯನ್ನು ನಾವು ಅಳೆಯಬೇಕಾಗುವುದು. ಮೊದಲು ದುರಾಚಾರದಲ್ಲಿ ತೊಡಗಿದ್ದರೂ ಮುಂದೆ ಪರಮಾತ್ಮನಲ್ಲಿ ಭಕ್ತಿಯ ಉದಯವಾಗಿ ತನ್ನ ಹಿಂದಿನ ಅಕೃತ್ಯಗಳ ಬಗ್ಗೆ ಜಿಗುಪ್ಸೆ, ಪಶ್ಚಾತ್ತಾಪಗಳನ್ನು ಹೊಂದಿ ಸರಿಯಾದ ಭಕ್ತಜೀವನ

ವನ್ನು ನಡೆಸುತ್ತಿರುವವನನ್ನು ಅವನ ಹಿಂದಿನ ಆಚರಣೆಯನ್ನು ಅವಲಂಬಿಸಿ ತಿರಸ್ಕರಿಸದೆ ಅವನ ಸಜ್ಜನಿಕೆಯನ್ನು ಗೌರವಿಸಬೇಕೆಂಬುದೇ ಗೀತೆಯ ಅಭಿಪ್ರಾಯವಾಗಿದೆ. ದುರಾಚಾರಿಗೂ ಹೀನವೃತ್ತಿಯನ್ನವಲಂಬಿಸಿದವನಿಗೂ ತನ್ನನ್ನು ಭಕ್ತಿ ಜಲಧಾರೆಯಿಂದ ತೊಳೆದು ಪುನೀತಗೊಳಿಸಿಕೊಳ್ಳಲವಕಾಶವಿದೆ. ತಮ್ಮ ಪಾಪ ಜೀವನವನ್ನು ನೆನೆದು ತಮ್ಮ ಉದ್ಧಾರದ ಬಗ್ಗೆ ಪೂರ್ಣ ನಿರಾಶೆಗೊಂಡವರ ಹೃದಯವನ್ನು ಬೆಳಗಿಸುವ ಆಶಾದೀಪವೇ ಭಕ್ತಿಯಾಗಿರುವುದು. ಇಂತಹ ಭಕ್ತಿ ಗಂಗೆಯ ಅಮೃತಧಾರೆಯಲ್ಲಿ ವಿಹರಿಸಿದವನು ಮತ್ತೆ ದುರಾಚಾರದ ವಿಷವರ್ತುಲದಲ್ಲಿ ಇಳಿಯಲಾರನೆಂಬುದು ಸ್ಪಷ್ಟವೇ ಇದೆ.

ಇಂದು ಜಗತ್ತಿನಲ್ಲಿ ವಿಕಟತಾಂಡವವನ್ನು ಆಡುತ್ತಿರುವ ಭ್ರಷ್ಟಾಚಾರದ ಮಹಾದೈತ್ಯನ ಹುಟ್ಟಡಗಿಸಲು ಭಕ್ತಿಯ ಅಮೃತಪ್ರಾಶನವೇ ಏಕಮಾತ್ರ ಉಪಾಯವಾಗಿದೆ. ಸರಕಾರವು ವಿಧಿಸುವ ಕಾಯಿದೆಗಳಿಂದಲೇ ಲೋಕದ ಸುಧಾರಣೆಯಾಗದು. ಜನರ ಮನಸ್ಸಿನಲ್ಲಿ ಸುಧಾರಣೆ, ಪರಿವರ್ತನೆಗಳಾಗದೇ [illegible] ಈಗ ಮಾಡಲಾದ ಕಾಯಿದೆಗಳೆಲ್ಲ ಅಯಶಸ್ವಿಗಳೇ ಆಗಿವೆ. ಈ ಕಾಯಿದೆಗಳು ಬೆಳೆದಂತೆ ಅವುಗಳನ್ನು ಉಲ್ಲಂಘಿಸುವ ಕುತಂತ್ರಗಳ ಆವಿಷ್ಕಾರಗಳಿಗಿಂತ ಹೆಚ್ಚಿನದೇನೂ ಆಗುತ್ತಿಲ್ಲ. ಕಾಯಿದೆಯು ಸುಧಾರಣೆಯ ಮಗುವಾಗಿದೆ. ಅದು ಸುಧಾರಣೆಯ ತಾಯಿಯಾಗಲಾರದು. ಜನರ ಮನಸ್ಸಿನಲ್ಲಿ ಆಗುವ ಸುಧಾರಣೆಯಿಂದ ಯಶಸ್ವೀ ಕಾಯಿದೆಗಳನ್ನು ಸೃಜಿಸಬಲ್ಲೆವಲ್ಲದೆ ಕಾಯಿದೆಬಲದಿಂದ ಲೋಕವನ್ನು ಸುಧಾರಿಸಲು ಸಾಧ್ಯವಾಗಲಾರದು. ನೀತಿ-ಶೀಲಗಳ ಬಗ್ಗೆ ಅಂತಹ ಮೂಲಭೂತ ಮನೋಭೂಮಿಕೆಯನ್ನು ನಿರ್ಮಿಸುವುದೇ ಇಂದಿನ ಪ್ರಧಾನವಾದ ರಾಷ್ಟ್ರನಿರ್ಮಾಣಕಾರ್ಯವಾಗಿದೆ. ಎಲ್ಲ ಶೀಲ-ಸದ್ಗುಣಗಳ ಮುಖ್ಯ ಪ್ರೇರಕಶಕ್ತಿಯಾದ ಸೈಜವಾದ ಭಕ್ತಿಭಾವವನ್ನು ಸುಶಿಕ್ಷಿತ ಜನಾಂಗದಲ್ಲಿ ಒಡಮೂಡಿಸುವಂತಹ ಮಹಾಪ್ರಯತ್ನವು ಇಂದು ಭರದಿಂದ ನಡೆಯಬೇಕಾಗಿದೆ.

## ಭಗವಂತನ ವಿಭೂತಿಗಳು

ಹತ್ತನೆಯ ಅಧ್ಯಾಯದಲ್ಲಿ ಭಗವದ್ವಿಭೂತಿಗಳ ವಿಸ್ತಾರವಾದ ವರ್ಣನೆ

ಯಿದೆ. ಪರಮಾತ್ಮನು ಜಗತ್ತಿನ ಕಣಕಣಗಳಲ್ಲಿಯೂ ವ್ಯಾಪಿಸಿರುವುದರಿಂದಲೇ ಅವುಗಳಲ್ಲಿ ವಿವಿಧ ಕ್ರಿಯೆ ಪರಿಣಾಮಗಳು ಸಂಭವಿಸುತ್ತವೆ. ಆದುದರಿಂದ ಸರ್ವಪ್ರವರ್ತಕನಾಗಿ ಪರಮಾತ್ಮನು ಎಲ್ಲ ವಸ್ತುಗಳಲ್ಲಿ ನೆಲೆಸಿದ್ದರೂ ಕೆಲ ವಿಶಿಷ್ಟ ವಸ್ತುಗಳಲ್ಲಿ ಪರಮಾತ್ಮನ ಸನ್ನಿಧಾನವು ಅತಿಶಯಿತವಾಗಿದೆ. ಹೆಚ್ಚು ಶಕ್ತಿಶಾಲಿಯೂ ಪವಿತ್ರವೂ ಲೋಕೋಪಕಾರಕವೂ ಆದ ಗುಣಶಾಲಿ ವಸ್ತುಗಳಲ್ಲಿ ಪರಮಾತ್ಮನ ಸನ್ನಿಧಾನವು ಹೆಚ್ಚಿಗಿರುವುದು. ರೇಡಿಯೋ ಯಂತ್ರಗಳ ಶಕ್ತಿ, ಯೋಗ್ಯತೆಗಳನ್ನನುಸರಿಸಿ ಅವುಗಳ ಶಬ್ದಾಭಿ ವ್ಯಕ್ತಿಯ ತಾರತಮ್ಯವಿರುವಂತೆ ವಿಶಿಷ್ಟ ವಸ್ತುವಿನಲ್ಲಿ ಭಗವಂತನ ಸನ್ನಿಧಾನವು ಅಧಿಕವಾಗಿರುವುದು. ಶ್ರೇಷ್ಠ ವಸ್ತುಗಳಲ್ಲಿರುವ ಭಗವಂತನ ಈ ರೂಪವಿಶೇಷಗಳನ್ನು ಅರಿಯುವುದನ್ನೇ ವಿಭೂತಿದರ್ಶನವೆನ್ನಲಾಗುತ್ತದೆ. ಒಮ್ಮೆ ದೇವತೆಗಳು ಭಗವದುಪಾಸನೆಗಾಗಿ ಉತ್ತಮವಾದ ಪ್ರತಿಮೆಯೊಂದನ್ನು ಹುಡುಕುತ್ತಿದ್ದರು. ಹುಡುಕುತ್ತಿದ್ದುದು ಕಲ್ಲಿನ ಮೂರ್ತಿಯನ್ನಲ್ಲ. ಪರಮಾತ್ಮನಿಗೆ ಅಧೀನವಾಗಿರಬಹುದಾದ, ದೋಷ ವಿಪರ್ಯಾಸಗಳಿಂದ ದೂರವಾದ ಒಂದು ಮಹಾಚೇತನವನ್ನು ಅವರು ಆರಸುತ್ತಿದ್ದರು. ಸ್ವಚ್ಛವಾದ ಕನ್ನಡಿಯಲ್ಲಿಯೇ ಮುಖವು ಪ್ರತಿಬಿಂಬಿತವಾಗುವಂತೆ ದೋಷದ ಲವಲೇಶವೂ ಇಲ್ಲದ ನಿರ್ಮಲ ಚೇತನದಲ್ಲಿಯೇ ಪುರುಷೋತ್ತಮನ ಸನ್ನಿಧಾನವಿರುವುದರಿಂದ ಅಂತಹ ಶ್ರೇಷ್ಠಾತ್ಮನೇ ಭಗವದುಪಾಸನೆಗೆ ಅನುಕೂಲವಾದ ಪ್ರತಿಮೆಯೆಂದು ದೇವತೆಗಳ ವಿಚಾರವಾಗಿತ್ತು. ಆದರೆ ಯಾವ ವ್ಯಕ್ತಿಯನ್ನು ಪರೀಕ್ಷಿಸಿದರೂ ಅದು ದೋಷ ದೌರ್ಬಲ್ಯಗಳ ನೆಲೆಯಾಗಿತ್ತು. ಆಸುರೀ ಶಕ್ತಿಗಳು ಎಲ್ಲರ ಹೃದಯಗಳನ್ನು ಪ್ರವೇಶಿಸಿ ಅವುಗಳನ್ನು ಕಲುಷಿತಗೊಳಿಸುತ್ತಿದ್ದವು. ಈ ದುಃಶಕ್ತಿಗಳ ಪ್ರವೇಶಕ್ಕೆ ಎಡೆಯೇ ಇಲ್ಲದ ಹೃದಯವು ವಾಯುದೇವರದೊಂದೇ ಆಗಿತ್ತು. ವಾಯುದೇವರ ಮೇಲೆ ಅಭಿಯೋಗ ಮಾಡಲೆಳಸಿದ ಆಸುರೀ ದುಃಶಕ್ತಿಗಳೆಲ್ಲ ಕಲ್ಲಿನ ಗೋಡೆಗೆ ಅಪ್ಪಳಿಸಲಾದ ಮಣ್ಣು ಹೆಂಟೆಗಳಂತೆ ಶೀರ್ಣವಿಶೀರ್ಣ ವಾದವು. ಈ ದೈತ್ಯಶಕ್ತಿಯ ಗರ್ವಪರ್ವತಗಳನ್ನು ತನ್ನ ವಜ್ರಸತ್ತ್ವದಿಂದ ಭಿನ್ನವಿಭಿನ್ನಗೊಳಿಸಿ ತನ್ನ ಅಪ್ರತಿಹತ ಸಾತ್ತ್ವಿಕ ತೇಜಸ್ಸಿನಿಂದ ಬೆಳಗಿದ ಶ್ರೀವಾಯುದೇವರಲ್ಲಿ ಪರಮಾತ್ಮನ ಪೂರ್ಣ ಸಾನ್ನಿಧ್ಯವನ್ನು ಗುರುತಿಸಿ ತಮ್ಮ

ಉಪಾಸನೆಗೆ ಪ್ರತಿಮೆಯಾಗಿ ವಾಯುದೇವರನ್ನೇ ಆರಿಸಿದರೆಂದು ಉಪನಿಷತ್ತಿನಲ್ಲಿ ಕಥೆಯಿದೆ. ಎಲ್ಲಿ ಗುಣಾತಿಶಯವಿದೆಯೋ ಎಲ್ಲಿ ಸತ್ತ್ವಸೌಂದರ್ಯಗಳು ಅಧಿಕವಾಗಿವೆಯೋ ಅವುಗಳೆಲ್ಲ ದೈವೀ ಶಕ್ತಿಯ ವಿಶೇಷ ಕೇಂದ್ರವೆನಿಸುತ್ತವೆಂಬ ಪ್ರಮೇಯವೇ ಹತ್ತನೇ ಅಧ್ಯಾಯದಲ್ಲಿ ನಿರೂಪಿತವಾಗಿದೆ. ಪ್ರಪಂಚದಲ್ಲಿರುವ ಬೇರೆಬೇರೆ ಗುಂಪಿನ ವಿಶಿಷ್ಟ ವಸ್ತುವನ್ನುಲ್ಲೇಖಿಸಿ ಅಲ್ಲಿ ಪರಮಾತ್ಮನ ವಿಶೇಷ ವಿಭೂತಿ ಇರುವುದನ್ನು ವರ್ಣಿಸಿ,

**ಯದ್ಯದ್ ವಿಭೂತಿಮತ್ ಸತ್ತ್ವಂ**
**ಶ್ರೀಮದೂರ್ಜಿತಮೇವ ವಾ ।**
**ತತ್ತದೇವಾವಗಚ್ಛ ತ್ವಂ**
**ಮಮ ತೇಜೋಽಂಶಸಂಭವಮ್ ॥**

ಎಂದು ಮಥಿತಾರ್ಥವನ್ನು ಕೊನೆಗೆ ಹೇಳಲಾಗಿದೆ.

## ವಿಭೂತಿಯೋಗ ಸಂದೇಶ

ನಮ್ಮ ಹೃದಯವೂ ಪರಮಾತ್ಮನ ವಿಭೂತಿಯ ಅಧಿಷ್ಠಾನವಾಗುವಂತೆ ಪ್ರಯತ್ನಿಸಬೇಕೆನ್ನುವುದೇ ಈ ಹತ್ತನೆಯ ಅಧ್ಯಾಯದಿಂದ ನಾವು ಕಲಿಯಬೇಕಾದ ಸಂಗತಿಯಾಗಿದೆ. ನಮ್ಮ ಹೃದಯವು ಭಗವಂತನ ನೃತ್ಯಮಂದಿರವಾಗಬೇಕಾದರೆ ಪರಮಾತ್ಮನಿಗೆ ಪ್ರಿಯವಾದ ಸದ್ಗುಣಗಳಿಂದ ಇದನ್ನು ಸಿಂಗರಿಸಬೇಕು. ಮಗುವಿಗೆ ಬೇಕಾದ ತಿಂಡಿ, ಮಿಠಾಯಿಗಳು, ಸುಂದರ ಆಟಿಕೆಗಳು ನಮ್ಮಲ್ಲಿದ್ದರೆ ಮಗುವು ನಮ್ಮ ಕಡೆ ಓಡಿಬರುವುದು. ಹೊಲಸು ಪದಾರ್ಥಗಳಿಂದ ತುಂಬಿದ ಜಾಗವು ಕ್ರಿಮಿಕೀಟಗಳ ಆವಾಸಸ್ಥಾನವೇ ಆಗುವುದು. ಸದ್ಗುಣ ಸತ್ಕೃತಿಗಳಿಂದ ತುಂಬಿದ ನಮ್ಮ ಹೃದಯವು ಬಾಲಕೃಷ್ಣನ ಕ್ರೀಡಾಭೂಮಿಯಾಗುವುದಾದರೆ, ಅದೇ ದುರ್ಗುಣಗಳಿಂದ ದೂಷಿತವಾದಾಗ ಆಸುರೀಶಕ್ತಿಗಳ ರುದ್ರತಾಂಡವ ಭೂಮಿಯೆನಿಸಬಹುದು. ನಮ್ಮ ಮನಸ್ಸು ಬಾಲಗೋಪಾಲನ ನೃತ್ಯ ಮಂದಿರ ವಾಗುವಂತೆ ಸದ್ಗುಣ ಸದ್ವಿಚಾರಗಳಿಂದ ಅಲಂಕೃತಗೊಳಿಸೋಣ. ನಾವು ಮಾಡುವ ಸತ್‌ಕರ್ಮಗಳೇ ಭಗವಂತನು ನಮ್ಮಿಂದ ಸ್ವೀಕರಿಸಬಹುದಾದ ಅಮೂಲ್ಯ ನೈವೇದ್ಯವಾಗಿದೆ–

ಋತಂ ಪಿಬಂತೌ ಸುಕೃತಸ್ಯ ಲೋಕೇ ।

-ಕಠೋಪನಿಷತ್

ಶುಭಂ ಪಿಬತ್ಯಸೌ ನಿತ್ಯಂ
ನಾಶುಭಂ ಸ ಹರಿಃ ಪಿಬೇತ್ ।

-ಬ್ರಹ್ಮಸೂತ್ರಭಾಷ್ಯ

ನಮ್ಮ ಒಳಗೆ ನೆಲೆಸಿ ನಾವು ಮಾಡುವ ಶುಭಕರ್ಮಗಳನ್ನು ಮಾತ್ರ ಪರಿಗ್ರಹಿಸಿ ನಮ್ಮನ್ನು ಶ್ರೀಹರಿಯು ಅನುಗ್ರಹಿಸುತ್ತಾನೆ. ನಾವು ಸಮರ್ಪಿಸುವ ಶುಭಕರ್ಮಗಳೆಂಬ ಪ್ರಿಯ ಭೋಜ್ಯಗಳನ್ನು ಸ್ವೀಕರಿಸಲು ನಮ್ಮ ಹೃದಯಕ್ಕೆ ಭಗವಂತನು ಓಡಿಬರುವನು. ದುಷ್ಕರ್ಮಗಳನ್ನಾಚರಿಸಿ ನಾವು ಆ ಹರಿಯನ್ನು ನಮ್ಮಿಂದ ದೂರ ಓಡಿಸುತ್ತಿದ್ದೇವೆ. ಹಿರಿಯನಾದ ದಕ್ಷಪ್ರಜಾಪತಿಯನ್ನು ಅವನು ಬಂದಾಗ ಎದ್ದುನಿಂತು ಏಕೆ ಗೌರವಿಸಲಿಲ್ಲವೆಂದು ಸತಿಯು ಶಿವನನ್ನು ಪ್ರಶ್ನಿಸಿದಾಗ ಶಿವನು ನೀಡುವ ಉತ್ತರವು ಮಾರ್ಮಿಕವಾಗಿದೆ. ಉತ್ಥಾನ, ಅಭಿವಾದನ ಮುಂತಾದ ಗೌರವಗಳನ್ನು ನಾವು ವ್ಯಕ್ತಿಗೆ ಸಲ್ಲಿಸುತ್ತಿರದೆ ವ್ಯಕ್ತಿಯೊಳಗಿರುವ ಭಗವತ್-ಶಕ್ತಿಗೆ ಆ ಗೌರವಸಮರ್ಪಣೆಯಾಗಿದೆ ಗೌರವ ವನ್ನು ಸಲ್ಲಿಸುವವನೂ ಪಡೆಯುವವನೂ ಇದನ್ನು ಅರಿತುಕೊಂಡಿರಬೇಕು. ಅಧಿಕಾರದ ಉನ್ಮಾದದಿಂದ ಗರ್ವಿತನಾದ ದಕ್ಷಪ್ರಜಾಪತಿಯಲ್ಲಿ ಆ ಪ್ರಜ್ಞೆಯೇ ಇರಲಿಲ್ಲ. ದರ್ಪಾಹಂಕಾರಗಳಿಂದ ದೂಷಿತವಾದ ಅವನ ಹೃದಯದಲ್ಲಿ ಪರಮಾತ್ಮನನ್ನೆಷ್ಟು ಅರಸಿದರೂ ಅವನು ಕಾಣಲೊಲ್ಲನು. ಪರಮಾತ್ಮನ ಸನ್ನಿಧಾನವನ್ನೇ ಕಳೆದುಕೊಂಡ ಕಲಾಹೀನ ದೂಷಿತ ಪ್ರತಿಮೆಯನ್ನು ನಾನೇಕೆ ಗೌರವಿಸಲಿ ಎಂದು ಮಹಾದೇವನು ಪ್ರಶ್ನಿಸುತ್ತಾನೆ. ಅಸತ್ಯ, ಅಸದ್ವಿಚಾರಗಳಿಂದ ನಮ್ಮ ಒಳಗಿರುವ ದೇವಮಂದಿರವನ್ನು ನಾವು ಕೆಡಹುತ್ತಿದ್ದೇವೆ. ನಮ್ಮ ಜೀವನ ವನ್ನು ಅಪವಿತ್ರಗೊಳಿಸುವಂತಹ ಇಂತಹ ದುಷ್ಕೃತ್ಯಗಳ ಬಗ್ಗೆ ಎಚ್ಚರದಿಂದಿದ್ದು ನಮ್ಮಲ್ಲಿ ಪರಮಾತ್ಮನನ್ನು ಅಭಿವ್ಯಕ್ತಿಗೊಳಿಸಬಹುದಾದಂತಹ ಉತ್ತಮ ಕೃತಿಗಳಿಂದ ನಮ್ಮ ಜೀವನವನ್ನು ಉದಾತ್ತಗೊಳಿಸಬೇಕೆಂಬುದೇ ಹತ್ತನೆಯ ಅಧ್ಯಾಯದ ಸಂದೇಶವಾಗಿದೆ.

# ವಿಶ್ವರೂಪ ದರ್ಶನ

ಪರಮಾತ್ಮನ ಅಗಾಧ ಮಹಿಮೆಯ ವಿಸ್ತೃತ ವರ್ಣನೆಯನ್ನು ಕೇಳಿದ ಅರ್ಜುನನಿಗೆ ವಿಶ್ವಧಾರಕವಾದ ಅವನ ವಿರಾಡ್ರೂಪದ ಪ್ರತ್ಯಕ್ಷದರ್ಶನವನ್ನು ಪಡೆಯುವ ಬಯಕೆಯುಂಟಾಗುವುದು. ಆದಕ್ಕಾಗಿ ಅವನಿಗೆ ದಿವ್ಯದೃಷ್ಟಿಯನ್ನು ಕರುಣಿಸಿ ಶ್ರೀಕೃಷ್ಣನು ತನ್ನ ವಿಶ್ವರೂಪದರ್ಶನವನ್ನು ಅವನಿಗೆ ಅನುಗ್ರಹಿಸುವನು. ನಮ್ಮೆದುರಿಗೆ ನೂರಾರು ಸೂಕ್ಷ್ಮ ವಸ್ತುಗಳು ಹರಿದಾಡುತ್ತಿದ್ದರೂ ನಮಗೆ ಅವುಗಳ ಪರಿಜ್ಞಾನವೇ ಆಗುವುದಿಲ್ಲ. ಸೂಕ್ಷ್ಮದರ್ಶಕಯಂತ್ರದ ಸಹಾಯದಿಂದ ನಮ್ಮ ಚಕ್ಷುಸ್ಸಿಗೆ ಗೋಚರವಾಗದ ಅನೇಕ ಸೂಕ್ಷ್ಮ ವಿಷಯಗಳನ್ನು ನಾವು ಗ್ರಹಿಸುವೆವು. ಅದರಂತೆ ವಿಶ್ವವ್ಯಾಪಿಯಾಗಿ ಸರ್ವಪದಾರ್ಥಗಳಲ್ಲಿಯೂ ಅನುಸ್ಯೂತನಾದ ಪರಮಾತ್ಮನ ಸಚ್ಚಿದಾನಂದ ಮಯ ರೂಪಗಳು ನಮ್ಮ ಸ್ಥೂಲ ದೃಷ್ಟಿಗೆ ನಿಲುಕುವುದಿಲ್ಲ. ಆದಕ್ಕಾಗಿ ಈ ಸಂದರ್ಭದಲ್ಲಿ ಅರ್ಜುನನಿಗೆ ದಿವ್ಯಚಕ್ಷುಸ್ಸನ್ನು ಪರಮಾತ್ಮನು ಪ್ರದಾನ ಮಾಡಿದ್ದಾನೆ. ಹುಟ್ಟು ಕುರುಡನಾದ ಧೃತರಾಷ್ಟ್ರನಿಗೂ ದಿವ್ಯ ದೃಷ್ಟಿಯನ್ನು ನೀಡಿ ತನ್ನ ವಿಶ್ವರೂಪದ ದರ್ಶನವನ್ನು ಶ್ರೀಕೃಷ್ಣನು ಮಾಡಿಸಿದ್ದುಂಟು. ಶಾಂತಿಯ ಉಪದೇಶವನ್ನು ನೀಡಿದ ಶ್ರೀಕೃಷ್ಣನನ್ನು ಬಂಧಿಸಲು ದುರ್ಯೋಧನಾದಿಗಳು ಹವಣಿಸಿದಾಗ ಭೀಷ್ಮ ಧೃತರಾಷ್ಟ್ರಾದಿ ಸಜ್ಜನವರ್ಗಕ್ಕೆ ಶ್ರೀಕೃಷ್ಣನ ವಿರಾಟ್ ರೂಪದ ದರ್ಶನವನ್ನು ಪಡೆಯುವ ಮಹಾಭಾಗ್ಯ ಒದಗಿತ್ತು. ಕೃಷ್ಣನ ಅನುಗ್ರಹದಿಂದ ಚಕ್ಷುಸ್ಸನ್ನು ಪಡೆದ ಧೃತರಾಷ್ಟ್ರನಂತೂ ಶ್ರೀಕೃಷ್ಣನ ದಿವ್ಯಮಂಗಲ ರೂಪಗಳನ್ನು ಕಂಡು ಆನಂದತುಂದಿಲನಾಗಿ "ಕೃಷ್ಣ, ಈ ವಿಶ್ವರೂಪವನ್ನು ಉಪಸಂಹರಿಸಿದ ನಂತರ ನನ್ನನ್ನು ಮೊದಲಿನಂತೆ ಕುರುಡನನ್ನಾಗಿಸು. ಪರಮಕಲ್ಯಾಣವಾದ ನಿನ್ನ ಈ ರೂಪವನ್ನು ಕಂಡ ಕಣ್ಣುಗಳಿಂದ ಜಗತ್ತಿನ ಅಭದ್ರ ಪ್ರಾಕೃತ ರೂಪಗಳನ್ನು ನಾನು ಹೇಗೆ ನೋಡಲಿ? ಆದುದರಿಂದ ಮೊದಲಿನಂತೆ ಕುರುಡನಾಗಿರುವುದರಲ್ಲೇ ನನಗೆ ಆನಂದವಿದೆ'' ಎಂದು ಶ್ರೀಕೃಷ್ಣನನ್ನು ಪ್ರಾರ್ಥಿಸುತ್ತಾನೆ. ಜೀವನದಲ್ಲಿ ಶ್ರೀಕೃಷ್ಣನ ವಿಶ್ವರೂಪವನ್ನು ಹೊರತು ಬೇರೆ ಯಾವ ಪ್ರಾಪಂಚಿಕ ಪದಾರ್ಥವನ್ನೂ ಒಮ್ಮೆಯೂ ನೋಡದ ಈ ಕುರುಡ ಭಕ್ತನೇ ಪರಮ ಧನ್ಯನೆಂದು ನಮಗನಿಸುತ್ತದೆ.

ಶ್ರೀಕೃಷ್ಣನ ವಿಶ್ವಂಭರ ರೂಪವನ್ನು ಕಂಡ ಅರ್ಜುನನು ಹರ್ಷಪುಲಕಿತನಾಗು ವನು. ಸಾವಿರ ಸೂರ್ಯರು ಒಮ್ಮೆಲೆ ಗಗನದಲ್ಲಿ ಉದಿಸಿದಂತಹ ಅದ್ಭುತ ಪ್ರಭೆಯು ಸುತ್ತಲೂ ಹರಡಿದೆ. ಎಲ್ಲಿ ನೋಡಿದರೂ ಪರಮಾತ್ಮನ ಮುಖಕಮಲ ಗಳು ಗೋಚರಿಸುತ್ತಿದ್ದರೆ ಸುತ್ತಲೂ ಪರಮಾತ್ಮನ ಕಣ್ಣುಗಳು ಜಗತ್ತಿನ ಕಣಕಣಗಳನ್ನೂ ಪರೀಕ್ಷಿಸುತ್ತಿವೆ. ಅವನ ಸಹಸ್ರಾರು ಕರಚರಣಗಳು ಜಗತ್ತನ್ನೆಲ್ಲ ವಸರಿಸಿ ನಿಂತಿವೆ. ವಿಶ್ವತಶ್ಚಕ್ಷುವೂ ವಿಶ್ವತೋಮುಖನೂ ಆದ ಪರಮಾತ್ಮನಲ್ಲಿ ಭೂತಭವಿಷ್ಯದ್ ವರ್ತಮಾನಗಳೆಲ್ಲವನ್ನೂ ಅರ್ಜುನನು ಕಂಡನು.

**ತತ್ರೈಕಸ್ಥಂ ಜಗತ್ ಕೃತ್ಸ್ನಂ ಪ್ರವಿಭಕ್ತಮನೇಕಧಾ ।**

ಅನಂತ ವೈವಿಧ್ಯಪೂರ್ಣವಾದ ಜಗತ್ತೆಲ್ಲವೂ ಕ್ರೋಡೀಕೃತವಾಗಿ ಅಲ್ಲಿದೆ. ಅರ್ಜುನನಿಗೆ ಪರಮಾತ್ಮನ ದೇಹದಲ್ಲಿ ಸಮಗ್ರವಿಶ್ವದ ದರ್ಶನವಾಗುವುದು. ವಾಯು, ಯಮ, ಅಗ್ನಿ, ಬ್ರಹ್ಮ, ರುದ್ರ ಮುಂತಾದ ಸಕಲ ದೇವತೆಗಳೂ ಪರಮಾತ್ಮನ ಆಶ್ರಯದಲ್ಲಿ ಅವನ ದೇಹದಲ್ಲಿ ನೆಲೆಸಿರುವುದನ್ನೂ ಅರ್ಜುನನು ನೋಡುವನು. ಹೀಗೆ ಸರ್ವ ಜಡವಸ್ತುಗಳಿಗೂ ಸಕಲ ಪ್ರಾಣಿಗಳಿಗೂ ಸಮಸ್ತ ದೇವತೆಗಳಿಗೂ ಆಶ್ರಯನೆನಿಸಿ ಅವೆಲ್ಲವುಗಳ ಪ್ರವರ್ತನೆಗಾಗಿ ಅನಂತ ರೂಪ ಗಳನ್ನು ಧರಿಸಿದ ಈ ವಿಶ್ವರೂಪಿಯಾದ ಪರಮಾತ್ಮನನ್ನು ಕಂಡು ಹರ್ಷವಿಭ್ರಾಂತ ನಾದ ಅರ್ಜುನನು ವಿಸ್ಮಯಭರಿತನಾಗಿ ಭಕ್ತಿಪರವಶತೆಯಿಂದ ನಾನಾರೀತಿ ಯಲ್ಲಿ ಸ್ತುತಿಸುವನು.

## ಭಗವಂತನು ನಿರಾಕಾರನೇ.?

ಪರಮಾತ್ಮನಿಗೆ ಸಾವಿರ ಕಣ್ಣು ಮುಖಗಳಿರುವವೆಂಬ ವರ್ಣನೆಯು ಕೆಲವರಿಗೆ ವಿಚಿತ್ರವೆನಿಸಬಹುದು. ದೇವರಿಗೆ ನಮ್ಮಂತೆ ಕಣ್ಣು, ಕಿವಿ, ಕಾಲುಗಳೆಲ್ಲ ಇರಲು ಸಾಧ್ಯವೆ? ನಮ್ಮಂತೆ ಶರೀರೇಂದ್ರಿಯಗಳು ಪರಮಾತ್ಮನಿಗಿದ್ದರೆ ಅವನ ದೇವತ್ತ್ವ ಎಲ್ಲಿ ಉಳಿಯುವುದು? ಅವನೂ ಮಾನವ ವರ್ಗಕ್ಕೆ ಸೇರಬೇಕಾಗು ವುದು. ಪರಮಾತ್ಮನಲ್ಲಿ ಈ ಎಲ್ಲ ಆಕಾರ ರೂಪಗಳನ್ನು ಮಾನವರು ತಮ್ಮ ತಮ್ಮ ಬುದ್ಧಿಗನುಸಾರವಾಗಿ ಕಲ್ಪನೆ ಮಾಡಿರುವರಲ್ಲದೆ ಇದು ವಾಸ್ತವ ವರ್ಣನೆಯಲ್ಲ- ಎಂದೂ ಕೆಲವರು ವಾದಿಸುತ್ತಾರೆ. ಪರಮಾತ್ಮನ ರೂಪಕ್ಕೂ ನಮ್ಮ ಲೌಕಿಕ

ಆಕಾರಗಳಿಗೂ ಇರುವ ಅಂತರವನ್ನು ತಿಳಿಯದಿರುವುದರಿಂದಲೇ ವೇದೋಪನಿಷತ್ತುಗಳಲ್ಲಿ ವರ್ಣಿಸಿರುವ ಪರಮಾತ್ಮನ ಆಕಾರವನ್ನು ಇವರು ಅಲ್ಲಗಳೆಯುತ್ತಾರೆ. ಶರೀರ, ಅವಯುವಗಳೆಂದರೇನೇ ಅದು ಹೊಲಸು, ಅಪವಿತ್ರವೆಂದು ನಾವು ಬೆಚ್ಚಿಬೀಳಬೇಕಾಗಿಲ್ಲ. ಪಂಚಭೂತಗಳ ವಿಕಾರಗಳಿನಿಸಿದ ಹೊಲಸು ದುರ್ಗಂಧಗಳಿಂದ ತುಂಬಿದ ನಮ್ಮ ಶರೀರಾವಯುವಗಳಿಗೂ ಭಗವಂತನ ಚಿದಾನಂದಘನವೂ ಸರ್ವಸುರಭಿಯೂ ಆದ ಅಂಗ ಆಕೃತಿಗೂ ಇರುವ ಅಂತರ ಅಪಾರ. ಒಂದು ಮಣ್ಣಿನ ಮಡಕೆಯಾದರೆ ಇನ್ನೊಂದು ಬಂಗಾರದ ಮಡಕೆ. ಅವೆರಡರ ಜಾತಿಗುಣ ಧರ್ಮಗಳೇ ಬೇರೆ. ಬರೇ ಆಕಾರಸಾಮ್ಯದಿಂದ ಅವೆರಡನ್ನೂ ಸಮಾನವಾದ ಮಟ್ಟದಲ್ಲಿ ನಾವು ನೋಡಬಾರದು. ಮಿಠಾಯಿಗಾರನು ನಾನಾ ರೀತಿಯ ಪ್ರಾಣಿಗಳ ಆಕಾರದಲ್ಲಿ ತಯಾರಿಸಿದ ಸಕ್ಕರೆ ಮಿಠಾಯಿಗಳನ್ನು ಮಕ್ಕಳು ನಿಃಸಂಕೋಚದಿಂದ ಜಗಿದು ತಿನ್ನುವುದಿಲ್ಲವೆ? ಪ್ರಾಣಿಗಳ ವಿವಿಧ ಆಕಾರಗಳನ್ನು ಹೋಲುತ್ತಿದ್ದರೂ ಆ ಮಿಠಾಯಿಗಳ ಸ್ವಾದ ಸಕ್ಕರೆಯದೇ ಆಗಿರುತ್ತದೆ. ಹೀಗೆ ಸಕ್ಕರೆಯ ಮಿಠಾಯಿಗಳಿಗೂ ನಿಜವಾದ ಪ್ರಾಣಿಗಳಿಗೂ ಇರುವ ವ್ಯತ್ಯಾಸದಂತೆ ಪರಮಾತ್ಮನ ಚಿನ್ಮಯರೂಪಕ್ಕೂ ನಮ್ಮ ಭೌತಿಕ ಆಕಾರಕ್ಕೂ ಬಹಳ ಅಂತರವಿರುತ್ತದೆ. ಆದುದರಿಂದ ಪರಮಾತ್ಮನಿಗೆ ಚಿದಾನಂದಮಯವಾದ ಆಕಾರವನ್ನು ಒಪ್ಪಿದ್ದರಿಂದ ಅವನನ್ನು ಸಂಸಾರಿಗಳ ಮಟ್ಟಕ್ಕೆ ಇಳಿಸಿದಂತಾಗುವುದಿಲ್ಲ. ಈ ದೃಷ್ಟಿಯಿಂದಲೇ ಶ್ರುತಿ ಪುರಾಣಗಳಲ್ಲಿ ದೇವರನ್ನು ನಿರಾಕಾರನೆಂದು ವರ್ಣಿಸಲಾಗಿದೆ. ಕೆಲವು ಕಡೆಗಳಲ್ಲಿ ದೇವರಿಗೆ ಆಕಾರವಿಲ್ಲವೆಂದು ಉಲ್ಲೇಖಿಸಿದ್ದರೆ ಪರಮಾತ್ಮನ ಸುಂದರಾಕೃತಿಯ ಸವಿಸ್ತರವಾದ ವರ್ಣನೆಯೂ ಬಹಳ ಕಡೆ ಇದೆ. ಇವೆರಡೂ ಉಲ್ಲೇಖಗಳನ್ನು ನಾವು ಸಮನ್ವಯದೃಷ್ಟಿಯಿಂದ ನೋಡಬೇಕು. ಪ್ರಾಕೃತವಾದ ಜಡಮಯ ಆಕಾರವಿಲ್ಲವೆಂಬ ಅರ್ಥದಲ್ಲಿ ನಿರಾಕಾರನೆಂದು ಪರಮಾತ್ಮನನ್ನು ಶ್ರುತಿಪುರಾಣಗಳಲ್ಲಿ ನಿರ್ದೇಶಿಸಿದ್ದರೆ ಅಪ್ರಾಕೃತವಾದ ಸಚ್ಚಿದಾನಂದಾತ್ಮಕವಾದ ದಿವ್ಯ ಮಂಗಲ ವಿಗ್ರಹವನ್ನನುಲಕ್ಷಿಸಿ ಸಾಕಾರನೆಂದು ಅವನನ್ನು ಉಲ್ಲೇಖಿಸಲಾಗಿದೆ. ಶ್ರುತಿಪುರಾಣಗಳ ಪ್ರಾಮಾಣ್ಯಕ್ಕೆ ಧಕ್ಕೆಯಾಗದಂತೆ ಅವುಗಳ ವಿರೋಧಾಭಾಸವನ್ನು ಪರಿಹರಿಸಲು ಅಪ್ರಾಕೃತ ಆಕಾರವನ್ನು ಒಪ್ಪುವುದೊಂದೇ ಮಾರ್ಗವಾಗಿದೆ.

ಭಗವಂತನ ಆಕಾರದ ಬಗ್ಗೆ ಇರುವ ವಾದವನ್ನು ಇನ್ನೂ ಒಂದು ದೃಷ್ಟಿಯಿಂದ ಪರಿಶೀಲಿಸಬಹುದು. ಪ್ರತಿಯೊಂದು ಜಡಚೇತನ ವಸ್ತುವಿಗೂ ಪರಮಾತ್ಮನು ಬಿಂಬರೂಪಿಯಾಗಿರುವನು. ಪ್ರತಿಬಿಂಬದ ಅಸ್ತಿತ್ವ ಅದರ ಆಕಾರ ಕ್ರಿಯೆ ಗಳೆಲ್ಲವುಗಳಿಗೂ ಬಿಂಬವೇ ಕಾರಣವಾಗಿರುವುದರಿಂದ ಪರಮಾತ್ಮನು ಜಗತ್ತಿನ ಪ್ರತಿಯೊಂದು ಪದಾರ್ಥದಲ್ಲಿ ವ್ಯಾಪಿಸಿ ಅವುಗಳ ಕ್ರಿಯೆಗಳಿಗೆ ಪ್ರವರ್ತಕ ನಾಗಿರುವನು. ಬಿಂಬರೂಪಿಯಾದ ಪರಮಾತ್ಮನ ಬಲದಿಂದಲೇ ಜಗತ್ತಿನ ಎಲ್ಲ ವ್ಯವಹಾರಗಳೂ ನಡೆಯುತ್ತಿವೆ. ಪ್ರಕೃತಿಯಾಗಲಿ ಪರಮಾಣುಗಳಾಗಲಿ ಈ ಭಿನ್ನ ಭಿನ್ನ ಆಕೃತಿಗಳನ್ನು ತಳೆದು ನಿಲ್ಲಲು ಅದೇ ಆಕಾರದಲ್ಲಿ ಅವುಗಳಿಗೆ ಬಿಂಬರೂಪಿಯಾಗಿ ಪರಮಾತ್ಮನು ನೆಲೆಸಿರುವುದೇ ಕಾರಣವಾಗಿದೆ. ಬಿಂಬದಲ್ಲಿ ಆಕಾರವಿಲ್ಲದೆ ಪ್ರತಿಬಿಂಬವು ಆಕಾರವನ್ನು ಪಡೆಯಲಾರದು. ಶುಭ್ರವಾದ ಸುಂದರವಾದ ಬಿಂಬದಿಂದ ಕಪ್ಪಾದ ವಿಕೃತ ಪ್ರತಿಬಿಂಬವು ಮೂಡಬಹು ದಾಗಿದ್ದರೂ ಬಿಂಬ ಪ್ರತಿಬಿಂಬಗಳಿಗೆ ಒಂದು ರೀತಿಯ ಆಕಾರಸಮತೆಯು ಇದ್ದೇ ತೀರುವುದು. ಪರಮಾತ್ಮನಿಗೂ ಪ್ರಕೃತಿಜೀವಿಗಳಿಗೂ ಗುಣಧರ್ಮಗಳಲ್ಲಿ ಬಹಳ ಅಂತರವಿದ್ದರೂ ಬಿಂಬ-ಪ್ರತಿಬಿಂಬಗಳಂತಿರುವ ಇವುಗಳಿಗೆ ಒಂದು ತರಹದ ಆಂತರಿಕ ಸಾಮ್ಯವಿರಲೇಬೇಕು. ಪ್ರಪಂಚದ ಸೂಕ್ಷ್ಮ ವಸ್ತುಗಳಾದ ಪರಮಾಣುಗಳು, ಪರಸ್ಪರ ಸಂಯೋಗದಿಂದ ವೈವಿಧ್ಯಗಳಿಂದ ತುಂಬಿದ ಭಿನ್ನ ಭಿನ್ನ ಆಕಾರಗಳನ್ನು ಪಡೆದು ನಿಂತಿವೆ. ಪರಮಾಣುಗಳಲ್ಲಿ ಇಂತಹ ವಿಶಿಷ್ಟ ರೀತಿಯ ಜೋಡಣೆಗಳು ಉಂಟಾಗಲು ಪ್ರಕೃತಿಯಲ್ಲಿ ವ್ಯಾಪಿಸಿರುವ ಪರಮಾತ್ಮನ ಅನಂತರೂಪಗಳೇ ಕಾರಣವಾಗಿವೆ.

**ತತ್ ಸೃಷ್ಟ್ವಾ ತದೇವಾನುಪ್ರಾವಿಶತ್ ।**
**ತದನುಪ್ರವಿಶ್ಯ ಸಚ್ಚ ತ್ಯಚ್ಚಾಭವತ್ ।** -ತೈತ್ತಿರೀಯೋಪನಿಷತ್

ಪರಮಾತ್ಮನ ಪ್ರವೇಶದಿಂದಲೇ ಪ್ರಕೃತಿಯು ವಿವಿಧ ರೂಪಗಳನ್ನು ತಾಳಿ ತನ್ನ ವಿಚಿತ್ರ ವಿಭ್ರಮ ವಿಲಾಸಗಳನ್ನು ತೋರಿಸುತ್ತದೆ ಎಂದು ಉಪನಿಷತ್ತು ನಿರೂಪಿಸುತ್ತಿದೆ. ಬೇರೆ ಬೇರೆ ಸ್ಥಳ, ಪಾತ್ರೆಗಳಲ್ಲಿ ಇರುವ ನೀರು ಭಿನ್ನ ಭಿನ್ನ ಆಕಾರಗಳನ್ನು ಪಡೆದಿರುವಂತೆ ನಾನಾರೀತಿಯ ಜಡಚೇತನ ವಸ್ತುಗಳನ್ನು ವ್ಯಾಪಿಸಿರುವ ಪರಮಾತ್ಮನು ಅನಂತ ಆಕಾರಗಳನ್ನು ಪಡೆದಿರುವನು. ಭಗವಂತ

ನಲ್ಲಿ ಅನಂತ ಆಕಾರಗಳಿರುವುದರಿಂದಲೇ ಪ್ರಪಂಚದಲ್ಲಿ ವಿವಿಧಾಕೃತಿ ವೈಭವದ ಪ್ರದರ್ಶನವು ನಡೆದಿದೆ. ಆದುದರಿಂದ ಪರಮಾತ್ಮನನ್ನು ನಿರಾಕಾರನೆನ್ನುವುದಕ್ಕಿಂತ ಸರ್ವರಿಗೆ ಬಿಂಬನೂ ಸರ್ವ ವ್ಯಾಪ್ತಿಯೂ ಆದ ಅವನನ್ನು ಸರ್ವಾಕಾರನೆನ್ನುವುದೇ ಸೂಕ್ತವಾಗಿದೆ. ಎಲ್ಲ ವಸ್ತುಗಳಲ್ಲಿದ್ದರೂ ಅವುಗಳ ವಿಕಾರ-ವಿದ್ರೂಪಗಳಿಗೆ ಒಳಗಾಗದೆ, ಅವುಗಳ ಜಡರೂಪಗಳಿಂದ ಬೇರೆಯಾದ ಅದೇ ಆಕಾರದ ಚಿದಾನಂದಮಂಗಲಮಯ ಅನಂತರೂಪಗಳನ್ನು ಧರಿಸಿದ ಸರ್ವಾಕಾರನಾದ ಆ ವಿಶ್ವರೂಪೀ ಹರಿಯ ಮಹಾದರ್ಶನವನ್ನೇ ತನ್ನ ದಿವ್ಯ ಚಕ್ಷುಸ್ಸಿನಿಂದ ಅರ್ಜುನನು ಪಡೆದುದಾಗಿದೆ.

ವೇದ ಪುರಾಣಗಳಲ್ಲಿ ವರ್ಣಿಸಲಾದ ಭಗವಂತನ ರೂಪ ಆಕಾರಗಳು ಕೇವಲ ಕಾಲ್ಪನಿಕಗಳೆಂದೂ ಅವು ವಾಸ್ತವಗಳಲ್ಲವೆಂದೂ ಕೆಲವರ ಅಭಿಪ್ರಾಯವಿದೆ. ಶ್ರುತಿಪುರಾಣಗಳು ಹಿಂದೂ ಧರ್ಮದ ಪರಮ ಪ್ರಮಾಣಗಳೆಂದು ಒಪ್ಪಿಕೊಂಡು ಅವುಗಳು ಇಂತಹ ಕಲ್ಪಿತ ವಿಷಯಗಳನ್ನು ಬೋಧಿಸಿ ಜನರಲ್ಲಿ ವಿಪರ್ಯಾಸಬುದ್ಧಿಯನ್ನು ಉಂಟುಮಾಡುವವೆಂದು ಹೇಳುವುದು ಪರಸ್ಪರ ವ್ಯಾಹತವಾದ ವಿಚಾರವಾಗಿದೆ. ಧ್ರುವ ಮುಂತಾದ ಪರಮ ಭಾಗವತರು ಅನೇಕ ವರ್ಷಗಳ ಅನವರತ ಧ್ಯಾನ ತಪಸ್ಯೆಗಳ ನಂತರ ಸಾಕ್ಷಾತ್ಕರಿಸಿದ ಭಗವಂತನ ಸುಂದರ ಮೂರ್ತಿಯು ಅದೆಂತು ಕಾಲ್ಪನಿಕವಾಗಬಲ್ಲದು? ಸಾಧಾರಣವಾದ ಭೌತಿಕ ಚಕ್ಷುಸ್ಸಿಗೆ ಗೋಚರವಾಗುವ ವಸ್ತುಗಳು ಒಮ್ಮೊಮ್ಮೆ ಬರೇ ಕಲ್ಪನೆಯಾಗುವ ಸಂಭವವಿದೆ. ಅರ್ಜುನನು ದಿವ್ಯ ಚಕ್ಷುಸ್ಸಿನಿಂದ ಕಂಡ ಪದಾರ್ಥಗಳು ಹೇಗೆ ಅಸತ್ಯವೆನಿಸುವವು? ವಿಪರ್ಯಾಸದ ವಸ್ತುಗಳು ಯಾವವೂ ಜ್ಞಾನದಲ್ಲಿ ಪ್ರತೀತಗಳಾಗಲಾರವು. ಅರ್ಜುನನು ಕಂಡ ಭಗವಂತನ ಅನಂತರೂಪ ಆಕಾರಗಳು, ಅವನನ್ನು ಆಶ್ರಯಿಸಿಕೊಂಡು ಭಕ್ತಿಭರಿತರಾಗಿ ಸ್ತುತಿಸುವ ಬ್ರಹ್ಮ ರುದ್ರಾದಿ ದೇವತೆಗಳು ಮುಂತಾದ ಈ ಆಧ್ಯಾತ್ಮಿಕ ಪ್ರಪಂಚವೆಲ್ಲ ಪುರಾಣ ಋಷಿಗಳ ಕಲ್ಪನಾಜಾಲವಾಗಿರದೆ ಪೂರ್ಣ ಸತ್ಯವೆಂದು ಸಿದ್ಧವಾಗುವುದರ ಜೊತೆಗೆ ನಮ್ಮೆಲ್ಲರ ಕಣ್ಣಿಗೆ ತೋರುವ ಈ ಭೌತಿಕ ಪ್ರಪಂಚವೂ ಸತ್ಯವೆಂದು ಸ್ಪಷ್ಟವಾಗುತ್ತದೆ. ಕೆಲವರು ಹೇಳುವಂತೆ ಈ ಜಗತ್ತು ಅವಾಸ್ತವವಾದರೆ ಈ ದ್ಯಾವಾಪೃಥಿವ್ಯಾದಿ ಸಮಗ್ರಲೋಕಗಳು ಪರಮಾತ್ಮನ

ಆಶ್ರಯದಲ್ಲಿ ಇರುವುದನ್ನು ಅರ್ಜುನನು ತನ್ನ ದಿವ್ಯ ಚಕ್ಷುಸ್ಸಿನಿಂದ ಕಾಣುತ್ತಿರಲಿಲ್ಲ. ಆದುದರಿಂದ ಪರಮಾತ್ಮ, ಜೀವ, ಜಡಗಳೆಂಬ ಪ್ರಪಂಚದ ಮೂರು ವರ್ಗವೂ ವಿಶ್ವರೂಪದರ್ಶನದಲ್ಲಿ ಅರ್ಜುನನಿಗೆ ಕಂಡಂತೆ ಪರಸ್ಪರ ವಿಭಿನ್ನವೂ ಸತ್ಯವೂ ಆಗಿದೆ ಎನ್ನುವ ಬಗ್ಗೆ ಯಾವ ಸಂಶಯ ಲೇಶಕ್ಕೂ ಎಡೆ ಇಲ್ಲದಂತಾಗಿದೆ.

## ನಿತ್ಯಜೀವನದಲ್ಲಿ ವಿಶ್ವರೂಪಪ್ರಜ್ಞೆ

ಅರ್ಜುನನ ಈ ವಿಶ್ವರೂಪದೃಷ್ಟಿಯನ್ನು ನಾವು ನಮ್ಮ ಜೀವನದಲ್ಲಿ ಅಳವಡಿಸಿಕೊಳ್ಳಬೇಕು. ಪರಮಾತ್ಮನಿಗೆ ಅನಂತರೂಪಗಳಿವೆ. ಒಂದೊಂದು ವಸ್ತುವಿನಲ್ಲಿಯೂ ಪರಮಾತ್ಮನ ಒಂದೊಂದು ಚಿನ್ಮಯ ರೂಪವಿದೆ. ಅನಂತ ಕಣ್ಣುಗಳಿಂದ ಅನಂತ ಮುಖಗಳಿಂದ ಅವನು ಜಗತ್ತನ್ನು ವ್ಯಾಪಿಸಿರುವನು ಎಂಬ ತಿಳುವಳಿಕೆಯು ನಮ್ಮಲ್ಲಿ ಜಾಗರೂಕತೆಯನ್ನೂ ಸತ್‌ಪ್ರವೃತ್ತಿಯನ್ನೂ ಬೆಳೆಸುತ್ತದೆ. ಸರಕಾರವನ್ನು ವಂಚಿಸಬಹುದು. ಕಾಯಿದೆಯಿಂದ ತಪ್ಪಿಸಿಕೊಳ್ಳಬಹುದು. ಆದರೆ ವಿಶ್ವತೋಮುಖನೂ ವಿಶ್ವತಶ್ಚಕ್ಷುವೂ ಆದ ದೇವನ ದೃಷ್ಟಿಯನ್ನು ತಪ್ಪಿಸಿ ನಮ್ಮಿಂದ ಏನನ್ನು ಮಾಡಲು ಸಾಧ್ಯವಿಲ್ಲವೆಂಬ ಪ್ರಜ್ಞೆಯು ಜಾಗೃತವಾದಲ್ಲಿ ನಮ್ಮದು ಧನ್ಯಪಾವನ ಜೀವನವೆನಿಸಬಲ್ಲದು. ಕನಕದಾಸನಿಗೆ ಬಾಳೆಹಣ್ಣನ್ನು ಗುಟ್ಟಾಗಿ ತಿನ್ನಲು ಏಕಾಂತವಾದ ಜಾಗವೇ ದೊರೆಯಲಿಲ್ಲವಂತೆ; ಲೋಕದ ಎಲ್ಲೆಡೆಯಲ್ಲಿಯೂ ಅವನಿಗೆ ಶ್ರೀಹರಿಯ ದರ್ಶನವಾಗುತ್ತಿತ್ತು. ಈ ರೀತಿಯಿಂದ ಭಗವಂತನನ್ನು ತಿಳಿದುಕೊಂಡವನಿಗೆ ಕುಕೃತ್ಯವನ್ನು ಮಾಡಿ ಅಡಗಿಸಲು ರಹಸ್ಯ ಪ್ರದೇಶವೇ ದೊರೆಯದು. ಅವನ ಜೀವನವು ತೆರೆದ ಪುಸ್ತಕದಂತೆ ನಿರ್ಮಲವಾದೀತು.

**ನ ರಾಜ್ಯಂ ನ ಚ ರಾಜಾಸೀತ್ ನ ದಂಡೋ ನ ಚ ದಾಂಡಿಕಃ ।**
**ಧರ್ಮೇಣೈವ ಪ್ರಜಾಃ ಸರ್ವಾಃ ರಕ್ಷಂತಿ ಸ್ಮ ಪರಸ್ಪರಂ ॥**

-ಮಹಾಭಾರತ

ಕೃತಯುಗದಲ್ಲಿ ಕಾಯಿದೆ, ಅಧಿಕಾರಿಗಳು ಮತ್ತು ರಾಜನ ಆವಶ್ಯಕತೆಯಿಲ್ಲದೆ ಸ್ವಯಂಪ್ರೇರಣೆಯಿಂದ ಧರ್ಮಶೀಲರಾಗಿ ಸುವ್ಯವಸ್ಥಿತವಾಗಿ ಪ್ರಜೆಗಳು

ಬಾಳುತ್ತಿದ್ದರು. ಎಷ್ಟು ಕಾಯಿದೆಗಳನ್ನು ಮಾಡಿದರೂ ಎಷ್ಟು ಅಧಿಕಾರಿಗಳನ್ನು ನೇಮಿಸಿದರೂ ಧರ್ಮನೀತಿಗಳ ಸ್ವಯಂಪ್ರಜ್ಞೆಯ ಆಧಾರಭೂಮಿ ಇಲ್ಲದೆ ಸಮಾಜವು ಕುಸಿದುಬೀಳುತ್ತದೆ ಎಂಬುದನ್ನು ಇಂದಿನ ಸನ್ನಿವೇಶಗಳಿಂದ ನಾವು ತಿಳಿದುಕೊಳ್ಳಬಹುದು. ಹನ್ನೊಂದನೆಯ ಅಧ್ಯಾಯದಲ್ಲಿ ಕಂಡುಬರುವ ಈ ವಿಶ್ವರೂಪದೃಷ್ಟಿಯು ನಮ್ಮ ಜೀವನದಲ್ಲಿ ಹಾಸುಹೊಕ್ಕಾಗಿ ಅದೇ ನಮ್ಮ ಸಮಾಜರಚನೆಯ ತಳಹದಿಯೆನಿಸಬೇಕು.

## ಶ್ರೀತತ್ತ್ವದ ಉಪಾಸನೆ

ಪರಮಾತ್ಮನ ಭಕ್ತಿ ಹಾಗೂ ಅವನ ಉಪಾಸನೆಯಿಂದಲೇ ಮುಕ್ತಿ ಎಂಬುದು ಈವರೆಗಿನ ಭಕ್ತಿಯೋಗದ ವಿಸ್ತೃತನಿರೂಪಣೆಯಿಂದ ಸ್ಪಷ್ಟವಾಗಿದೆ. ಆದರೂ ಪರಮಾತ್ಮನ ಉಪಾಸನೆಯ ಬದಲು ಜಗತ್ತಿನ ಮೂಲಕಾರಣವಾದ ಜಡಪ್ರಕೃತಿಯ ಅಭಿಮಾನಿಯಾದ ಚಿತ್‌ಪ್ರಕೃತಿ ಎನಿಸಿರುವ ಶ್ರೀತತ್ತ್ವದ ಉಪಾಸನೆಯಿಂದಲೂ ಮುಕ್ತಿಯು ದೊರೆಯಬಹುದೆ? ಎಂಬ ಪ್ರಶ್ನೆಯು ಉದ್ಭವಿಸುತ್ತದೆ. ಪರಮಪುರುಷನಾದ ಶ್ರೀನಾರಾಯಣನು ಮತ್ತು ಜಗನ್ಮಾತೆಯೂ ಮಂಗಲದೇವತೆಯೂ ಆದ ಲಕ್ಷ್ಮೀದೇವಿಯು ಇವರಿಬ್ಬರೂ ಸಮಾನವ್ಯಾಪ್ತಿ ಯುಳ್ಳ ನಿತ್ಯಮುಕ್ತರಾದ ಜಗತ್ತಿನ ಪರತತ್ತ್ವಗಳೆನಿಸಿದ್ದಾರೆ. ಇವರಿಬ್ಬರಲ್ಲಿ ಯಾರ ಉಪಾಸನೆಯಿಂದಲೂ ಮುಕ್ತಿಯನ್ನು ಪಡೆಯಬಹುದೆಂಬ ಶಂಕೆಯು ಮೂಡುವುದು ಸಹಜವಾಗಿದೆ. ಅದರಲ್ಲಿಯೂ ಜಗತ್ತಿನ ತಂದೆಯಾದ ಶ್ರೀಹರಿ ಯನ್ನು ಪ್ರಸನ್ನಗೊಳಿಸುವುದಕ್ಕಿಂತ ಜಗನ್ಮಾತೆಯನ್ನು ಬೇಗನೆ ಒಲಿಸಬಹು ದಾದುದರಿಂದ ಈ ಸುಲಭೋಪಾಯವನ್ನೇ ಏಕೆ ಅನುಸರಿಸಬಾರದು? ಎಂಬ ಭಾವನೆಯೂ ಸಹಜವಾಗಿ ಉಂಟಾಗುತ್ತದೆ. ಈ ಸಂದೇಹವನ್ನೇ ಅರ್ಜುನನೂ ಶ್ರೀಕೃಷ್ಣನಲ್ಲಿ ಕೋಡಿಕೊಳ್ಳುತ್ತಾನೆ.

**ಏವಂ ಸತತಯುಕ್ತಾ ಯೇಭಕ್ತಾಸ್ತ್ವಾಂ ಪರ್ಯುಪಾಸತೇ ।**
**ಯೇ ಚಾಪ್ಯಕ್ಷರಮವ್ಯಕ್ತಂ ತೇಷಾಂ ಕೇ ಯೋಗವಿತ್ತಮಾಃ ॥**

ಅವ್ಯಕ್ತತತ್ತ್ವದ ಅರ್ಥಾತ್ ಶ್ರೀತತ್ತ್ವದ ಉಪಾಸನೆಯನ್ನು ಮಾಡಿದರೂ ಪರಮಾತ್ಮನ ಉಪಾಸನೆ ಮತ್ತು ಸಾಕ್ಷಾತ್ಕಾರವಿಲ್ಲದೆ ಮುಕ್ತಿಯನ್ನು ಸರ್ವಥಾ

ಪಡೆಯಲು ಶಕ್ಯವಿಲ್ಲ. ತನ್ನನ್ನು ಉಪಾಸನೆ ಮಾಡಿದರೂ ಪರಮಪುರುಷನ ಆರಾಧನೆಯನ್ನು ಮಾಡದ ವ್ಯಕ್ತಿಯಲ್ಲಿ ದೇವಿಯೂ ಪ್ರಸನ್ನಳಾಗುವುದಿಲ್ಲ. ದೇವಿಯ ಉಪಾಸನೆಯು ಕ್ಲಿಷ್ಟವಾದ ಭಗವದುಪಾಸನೆಯ ಮಾರ್ಗವನ್ನು ಸುಲಭಗೊಳಿಸುವುದರಿಂದ ಮೋಕ್ಷಾರ್ಥಿಗಳು ಅದನ್ನು ಸ್ವಾಗತಿಸಬಹುದಾದರೂ ಅದರಿಂದಲೇ ಮುಕ್ತಿಯನ್ನು ಪಡೆಯಲು ಸಾಧ್ಯವಿಲ್ಲ. ಆದುದರಿಂದ ಚಿತ್‌ಪ್ರಕೃತಿಯನ್ನು ಉಪಾಸಿಸಿ ಅದರ ಮೂಲಕವಾಗಿ ಪರಮಪುರುಷನ ಉಪಾಸನೆಯನ್ನು ಗೈಯುವ ಈ ಬಳಸು ದಾರಿಯನ್ನು ಅನುಸರಿಸುವುದಕ್ಕಿಂತ ನೇರವಾಗಿ ತನ್ನನ್ನೇ ಆರಾಧಿಸುವ ಸುಲಭ ಮಾರ್ಗವನ್ನೇ ಹಿಡಿಯುವಂತೆ ಶ್ರೀಕೃಷ್ಣನು ಉಪದೇಶಿಸುವನು.

**ಕ್ಲೇಶೋಽಧಿಕತರಸ್ತೇಷಾಂ ಅವ್ಯಕ್ತಾಸಕ್ತಚೇತಸಾಮ್ ।**

ಜಗತ್ತಿನ ತಂದೆ ತಾಯಂದಿರಾದ ಪರಮಾತ್ಮ ಮತ್ತು ಚಿತ್‌ಪ್ರಕೃತಿ ಇವೆರಡು ಪರತತ್ತ್ವಗಳನ್ನು ಚಿಂತಿಸಿಕೊಂಡು ಲಕ್ಷ್ಮೀಪತಿಯಾದ ಶ್ರೀಹರಿಯ ಪೂಜೋಪಾಸನೆಗಳಿಂದಲೇ ಮೋಕ್ಷಪದವಿಯನ್ನು ಪಡೆಯಲು ಪ್ರಯತ್ನಿಸುವುದು ಸರಿಯಾದ ಹಾಗೂ ಸುಲಭವಾದ ಮಾರ್ಗವಾಗಿದೆ. ಒಂದು ದೃಷ್ಟಿಯಿಂದ ನಾವೆಲ್ಲರೂ ಲಕ್ಷ್ಮಿಯ ಆರಾಧಕರೇ ಎಂದೆನ್ನಬಹುದು. ಪರಮಾತ್ಮನನ್ನು ಮರೆತು ಜೀವನವಿಡೀ ಲಕ್ಷ್ಮಿಯ ಅರ್ಥಾತ್ ಸಂಪತ್ತಿನ ಧ್ಯಾನದಲ್ಲಿಯೇ ನಾವು ಮುಳುಗಿದ್ದೇವೆ. ಆದರೆ ದೇವನನ್ನು ಮರೆತು ಬರೇ ಸಂಪತ್ತಿನ ಚಿಂತನದಲ್ಲೇ ತಲ್ಲೀನರಾದ ನಮಗೆ ಸಿರಿದೇವಿಯು ಒಲಿದಾಳೆಯೆ? ಸಿರಿಯೊಡೆಯನನ್ನು ತೊರೆದ ನಮ್ಮಿಂದ ಸಿರಿಯೂ ದೂರವಿರುವುದು ಸಹಜವೇ ಆಗಿದೆ.

**ವಿಷ್ಣುನಾ ಸಹಿತಾ ಧ್ಯಾತಾ ಸಾ ಹಿ ತುಷ್ಟಿಂ ಪರಾಂ ವ್ರಜೇತ್ ।**

ವಿಷ್ಣುವಿನ ಜೊತೆಗೆ ಪೂಜಿಸಿದರೇನೇ ಲಕ್ಷ್ಮಿಗೆ ಪರಮ ಸಂತೋಷವಂತೆ. ಪರಮಾತ್ಮನನ್ನು ಮರೆತು ಜೀವನವಿಡೀ ಬರಿ ಸಿರಿ-ಸಂಪತ್ತುಗಳ ಪೂಜೆಯನ್ನೇ ನಡೆಸುವ ನಾವು ಭೂತಿ ಮತ್ತು ಭಗವಂತ ಇವೆರಡನ್ನೂ ಕಳೆದುಕೊಳ್ಳುತ್ತೇವೆ. ಅಂತೂ ಲಕ್ಷ್ಮೀ ಉಪಾಸನೆಗಿಂತಲೂ ಲಕ್ಷ್ಮೀನಾರಾಯಣನ ಉಪಾಸನೆಯೇ ಜೀವನದ ಪರಮಪುರುಷಾರ್ಥವನ್ನು ಪಡೆಯುವ ಶ್ರೇಷ್ಠವಾದ ಸಾಧನವೆಂದು ಈ ಭಾಗದ ತಾತ್ಪರ್ಯವಾಗಿದೆ.

## ಅವ್ಯಕ್ತವು ನಿರ್ಗುಣ ಬ್ರಹ್ಮವೆ?

ಕೆಲವರು ಇಲ್ಲಿ ಸಗುಣ-ನಿರ್ಗುಣಗಳ ಗೊಂದಲವನ್ನು ತರುವ ಪ್ರಯತ್ನ ಮಾಡುತ್ತಾರೆ. ಜ್ಞಾನ, ಶಕ್ತಿ, ಕ್ರಿಯಾ ಮೊದಲಾದ ಮಹಾ ಗುಣಗಳಿಂದ ಕೂಡಿದ ಬ್ರಹ್ಮನು ಸಗುಣನೆಂದೂ ಈ ಗುಣಧರ್ಮಗಳಿಂದ ರಹಿತವಾದ ಅಪರಿಚ್ಛಿನ್ನ ಚೈತನ್ಯವೇ ನಿರ್ಗುಣವೆಂದೂ ಬ್ರಹ್ಮವನ್ನು ಇವರು ಎರಡು ವಿಧವಾಗಿ ವಿಂಗಡಿಸುತ್ತಾರೆ. ನಿರ್ಗುಣೋಪಾಸನೆಯು ಶ್ರೇಷ್ಠವಾದರೂ ಕ್ಲಿಷ್ಟವಾಗಿರುವುದರಿಂದ ಸಗುಣೋಪಾಸನೆಯ ಸುಲಭ ಮಾರ್ಗವನ್ನು ಕೃಷ್ಣನು ಬೋಧಿಸಿರುವುದಾಗಿ ಗೀತೆಯ ಆಶಯವನ್ನು ವಿವರಿಸುತ್ತಾರೆ. ಪರಬ್ರಹ್ಮನನ್ನು ಸಗುಣ, ನಿರ್ಗುಣ ಎಂಬುದಾಗಿ ವಿಭಜಿಸಿ ಒಂದು ಪರಮ ಸತ್ಯವೆಂದೂ ಇನ್ನೊಂದು ಮಾಯಿಕವೆಂದೂ ಹೇಳುವುದು ಸರಿಯಲ್ಲ. ಉಪನಿಷತ್ತಿನಲ್ಲಿ ಎಲ್ಲಿಯೂ ಬ್ರಹ್ಮನನ್ನು ಈ ವಿಧವಾಗಿ ವಿಂಗಡಿಸಿರುವುದು ಕಂಡುಬರುವುದಿಲ್ಲ. ಒಬ್ಬನೇ ಬ್ರಹ್ಮನು ಸಗುಣನೂ ನಿರ್ಗುಣನೂ ಆಗಿರುವನು. ಸತ್ತ್ವ, ರಜಸ್ಸು, ತಮಸ್ಸು ಮುಂತಾದ ಪ್ರಾಕೃತ ಗುಣಗಳಿಂದ ವಿರಹಿತನೂ ಜ್ಞಾನ ಆನಂದಾದಿ ಚೈತನ್ಯಮಯ ಸದ್ಗುಣಭರಿತನೂ ಆದ ಪರಮಾತ್ಮನೊಬ್ಬನೇ ಸಗುಣನೂ ನಿರ್ಗುಣನೂ ಆಗಿರುವನು. ಅಪ್ರಾಕೃತ ಗುಣಗಳ ದೃಷ್ಟಿಯಿಂದ ಸಗುಣನೆಂದೂ ಪ್ರಾಕೃತ ಗುಣಗಳ ದೃಷ್ಟಿಯಿಂದ ನಿರ್ಗುಣನೆಂದೂ ಒಬ್ಬನನ್ನೇ ಕರೆಯಲಾಗುತ್ತದೆ.

**ಏಕೋ ದೇವಃ ಸರ್ವಭೂತೇಷು ಗೂಢಃ**
**ಸರ್ವವ್ಯಾಪೀ ಸರ್ವಭೂತಾಂತರಾತ್ಮಾ ।**
**ಕರ್ಮಾಧ್ಯಕ್ಷಃ ಸರ್ವಲೋಕಾಧಿವಾಸಃ**
**ಸಾಕ್ಷೀ ಚೇತಾ ಕೇವಲೋ ನಿರ್ಗುಣಶ್ಚ ॥**

-ಶ್ವೇತಾಶ್ವತರೋಪನಿಷತ್

ಎಂದು ಉಪನಿಷತ್ತಿನಲ್ಲಿ ಸರ್ವವ್ಯಾಪಿಯೂ ಸರ್ವಭೂತಾಂತರಾತ್ಮನೂ ದೇವನೂ ಆದ ಸಗುಣವಸ್ತುವನ್ನೇ ನಿರ್ಗುಣವೆಂದು ಕರೆಯಲಾಗಿದೆ. ಹೀಗಿರುವಾಗ ಸಗುಣನು ಬೇರೆ ನಿರ್ಗುಣನು ಬೇರೆ ಎಂದು ಪರಬ್ರಹ್ಮ ವಸ್ತುವನ್ನು ಭಿನ್ನವಿಭಿನ್ನಗೊಳಿಸಿ ಜಗಜ್ಜನ್ಮಾದಿಕರ್ತೃವೂ ಸರ್ವಜ್ಞನೂ ಸರ್ವಶಕ್ತಿಯೂ ಆದ

ಸಗುಣಬ್ರಹ್ಮವನ್ನು ಮಾಯಿಕವೆಂದು ಪರಿಕಲ್ಪಿಸುವುದು ಮಹಾ ಅಪಲಾಪವೆನಿಸು ವುದು.

ಅವ್ಯಕ್ತೋಪಾಸಕರು ಹಾಗೂ ಭಗವದುಪಾಸಕರು ಇವರಿಬ್ಬರಲ್ಲಿ ಯಾರು ಶ್ರೇಷ್ಠರು ಎಂಬ ಅರ್ಜುನನ ಪ್ರಶ್ನೆಯನ್ನು ಉತ್ತರಿಸುವ ಪ್ರಸ್ತುತ ಸಂದರ್ಭದಲ್ಲಿ ಶ್ರೀಕೃಷ್ಣನು ಸ್ಪಷ್ಟವಾಗಿ -

> ಮಯ್ಯಾವೇಶ್ಯ ಮನೋ ಯೇ ಮಾಂ
> ನಿತ್ಯಯುಕ್ತಾ ಉಪಾಸತೇ ।
> ಶ್ರದ್ಧಯಾಪರಯೋಪೇತಾ
> ಸ್ತೇಮೇ ಯುಕ್ತತಮಾ ಮತಾಃ ॥

ಎಂದು ಅವ್ಯಕ್ತವನ್ನು ಉಪಾಸಿಸುವುದಕ್ಕಿಂತ ತನ್ನನ್ನು ಆರಾಧಿಸುವವರೇ ಶ್ರೇಷ್ಠರು ಎಂದು ಹೇಳುತ್ತಾನೆ. ನಿರ್ಗುಣವೇ ಪರಮ ಸತ್ಯವಾಗಿದ್ದ ಪಕ್ಷದಲ್ಲಿ ಸಗುಣರಾದ ತನ್ನ ಉಪಾಸಕರೇ ಯುಕ್ತತಮರೆಂಬ ಶ್ರೀಕೃಷ್ಣನ ಮಾತು ಹೇಗೆ ಸುಸಂಗತವಾಗುವುದು? ಶ್ರೀಕೃಷ್ಣನು ನಿರ್ಗುಣ ತತ್ತ್ವವಲ್ಲವೆಂದೂ ಸಗುಣನೂ ಸರ್ವಜ್ಞನೂ ಆದ ಪುರುಷೋತ್ತಮನೇ ಶ್ರೀಕೃಷ್ಣನೆಂದೂ ಸರ್ವವಿದಿತವಾದ ಅಂಶವಾಗಿದೆ.

> ಯೇ ತ್ವಕ್ಷರಮನಿರ್ದೇಶ್ಯಂ ಅವ್ಯಕ್ತಂ ಪರ್ಯುಪಾಸತೇ ।
> ತೇ ಪ್ರಾಪ್ನುವಂತಿ ಮಾಮೇವ .... ।

ಎಂಬುದಾಗಿ ಅವ್ಯಕ್ತವನ್ನು ಉಪಾಸಿಸುವವರೂ ತನ್ನನ್ನೇ ಹೊಂದುವರೆಂಬ ಶ್ರೀಕೃಷ್ಣನ ವಚನವನ್ನಂತೂ ನಿರ್ಗುಣೋಪಾಸನೆಯೇ ಅವ್ಯಕ್ತೋಪಾಸನೆ ಯಾಗಿರುವ ಪಕ್ಷದಲ್ಲಿ ಸರ್ವಥಾ ಯೋಚಿಸಲು ಶಕ್ಯವಿಲ್ಲ. ನಿರ್ಗುಣೋಪಾಸಕನು ಸಗುಣನಾದ ಕೃಷ್ಣನನ್ನು ಹೇಗೆ ಹೊಂದಬಲ್ಲನು? ನೈರ್ಗುಣ್ಯವಾದದ ತತ್ತ್ವನಿರೂಪಣೆಯಂತೆ ನಿರ್ಗುಣೋಪಾಸನೆಯಿಂದ ಸಾಧಕರು ಪರಬ್ರಹ್ಮ ಭಾವವನ್ನು ಹೊಂದುವರಲ್ಲದೆ ಸಗುಣಪ್ರಾಪ್ತಿಯನ್ನು ಅದರ ಫಲವಾಗಿ ಅಂಗೀಕರಿಸಲಾಗಿಲ್ಲ. ಅಂತೂ ಇಲ್ಲಿ ನಿರೂಪಿಸಲಾದ ಅವ್ಯಕ್ತೋಪಾಸನೆಯ ಫಲವನ್ನು ಪರಿಶೀಲಿಸುವಾಗಲೂ ಅವ್ಯಕ್ತೋಪಾಸನೆಗಿಂತ ಭಗವದುಪಾಸನೆಗೆ

ನೀಡಲಾದ ಪ್ರಾಶಸ್ತ್ಯವನ್ನು ಗಮನಿಸುವಾಗಲೂ ಸಗುಣ, ನಿರ್ಗುಣ ವಿಚಾರಗಳಿಗೆ ಇಲ್ಲಿ ಅವಕಾಶವಿಲ್ಲವೆಂದೂ ಶ್ರೀತತ್ತ್ವ ಹಾಗೂ ಪರಮಾತ್ಮತತ್ತ್ವಗಳ ಉಪಾಸನೆಗಳ ವಿವೇಚನೆಗೇ ಈ ಭಾಗ ಸಂಬಂಧಿಸಿದೆಯೆಂಬುದೂ ಸ್ಪಷ್ಟವಾಗುತ್ತದೆ.

## ಸಗುಣೋಪಾಸನೆಯು ಸರ್ವಸಮ್ಮತ

ಇಲ್ಲಿ ಇನ್ನೂ ಒಂದು ಅಂಶವನ್ನು ಎಲ್ಲರೂ ಗಮನದಲ್ಲಿಟ್ಟುಕೊಳ್ಳಬೇಕು. ಸಗುಣದಿಂದ ಅತೀತವಾದ ನಿರ್ಗುಣವಾದ ಅಪರಿಚ್ಛಿನ್ನ ಚೈತನ್ಯ ಒಂದಿದೆ ಮತ್ತು ಅದೇ ಪರಮ ಸತ್ಯವೆಂದು ಕೆಲವರು ಕಲ್ಪಿಸಿರಬಹುದು. ಅದೇನೇ ಇರಲಿ, ಗುಣಪೂರ್ಣನಾದ ಪರಬ್ರಹ್ಮನ ಚಿಂತನದಿಂದ ಮುಕ್ತಿಯನ್ನು ಪಡೆಯಬಹುದೆಂಬುದನ್ನೂ ಅದೇ ಮುಕ್ತಿಗೆ ಸುಲಭದ ದಾರಿ ಎಂಬುದನ್ನೂ ನಿರ್ಗುಣವಾದಿಗಳೂ ಅಂಗೀಕರಿಸಿದ್ದಾರೆ.

ನ ಚ ಪುನರಾವರ್ತತೇ ನ ಚ ಪುನರಾವರ್ತತೇ ।

ಎಂಬ ಬ್ರಹ್ಮಸೂತ್ರದ ವ್ಯಾಖ್ಯಾನಸಂದರ್ಭದಲ್ಲಿ ಈ ಸಗುಣವಸ್ತುವಿನ ಉಪಾಸನೆಯಿಂದ ಪುನರಾವೃತ್ತಿಯಿಲ್ಲದ ಪರಮಪದವನ್ನು ಹೊಂದಬಹುದೆಂದು ಶ್ರೀ ಶಂಕರಾಚಾರ್ಯರೇ ಒಪ್ಪಿದ್ದಾರೆ.

ತತೋ ಹ್ಯಸ್ಯ ಬಂಧವಿಪರ್ಯಯೌ ।

ಎಂಬ ಬ್ರಹ್ಮಸೂತ್ರ ವ್ಯಾಖ್ಯಾನದ ಸಂದರ್ಭದಲ್ಲಿಯೂ ಅನಾದಿಯಾದ ಈ ಸಂಸಾರಬಂಧನದ ನಿವೃತ್ತಿಯು ಸರ್ವಜ್ಞನೂ ಸರ್ವಶಕ್ತಿಶಾಲಿಯೂ ಆದ ಈಶ್ವರನ ಪರಮಾನುಗ್ರಹದಿಂದಲೇ ಆಗುವುದು ಎಂದು ಶಂಕರಾಚಾರ್ಯರೇ ವಿವರಿಸಿದ್ದಾರೆ. ಹೀಗೆ ಗುಣಪೂರ್ಣನಾದ ಪರಬ್ರಹ್ಮನ ಭಕ್ತಿ ಉಪಾಸನೆಗಳಿಂದ ಜೀವನದ ಪರಮ ಶ್ರೇಯಸ್ಸನ್ನು ಪಡೆಯಬಹುದೆಂದೂ ಅದರಿಂದ ಯಾವುದೇ ಅನರ್ಥಕ್ಕೆ ಅವಕಾಶವಿಲ್ಲವೆಂದೂ ವಿವಾದಾತೀತವಾಗಿರುವಾಗ ಈ ನಿಃಸಂದಿಗ್ಧವೂ ನಿರಾಬಾಧವೂ ಆದ ರಾಜಪಥವನ್ನು ತೊರೆದು ವಿವಾದಗ್ರಸ್ತವಾದ ಜೀವಬ್ರಹ್ಮೈಕ್ಯವಾದದ ನೈರ್ಗುಣ್ಯ ಮಾರ್ಗದಲ್ಲಿ ನಾವು ಏಕೆ ಹೆಜ್ಜೆ ಇಡಬೇಕು? ಅನಾವಶ್ಯಕವಾಗಿ ಸಾಮಾನ್ಯ ಜನರಲ್ಲಿ ಇಂತಹ ಸಂದಿಗ್ಧ ವಿಷಯಗಳನ್ನೆತ್ತಿ ವೈಚಾರಿಕ ಗೊಂದಲವನ್ನೆಬ್ಬಿಸದೆ ನಿರ್ಣೀತವಾದ, ಎಲ್ಲರಿಗೂ

ಒಪ್ಪಿಗೆಯಾದ ಸಗುಣೋಪಾಸನೆಯ ವಿಶಾಲ ರಾಜವೀಥಿಯಲ್ಲಿ ಜನತೆಯನ್ನು ಮುನ್ನಡೆಸುವುದೇ ವಿಹಿತ ವಿಚಾರವಾಗಿದೆ.

## ಧ್ಯಾನಮಾರ್ಗದ ಮೆಟ್ಟಿಲುಗಳು

ಮುಕ್ತಿ ಹಾಗೂ ಸಾಕ್ಷಾತ್ಕಾರಗಳಿಗೆ ಪ್ರಧಾನಕಾರಣವಾದ ಭಕ್ತಿಪುರಸ್ಸರವಾದ ನಿರಂತರ ಭಗವದ್‌ಧ್ಯಾನವನ್ನು ಮಾಡಲು ಸಾಧಾರಣ ಜನರಿಗೆ ಸಾಧ್ಯವಾಗುವುದಿಲ್ಲ. ಅಂತಹ ಆಳವಾದ ಭಕ್ತಿಯಾಗಲೀ ಹೃದಯ ಬಲವಾಗಲೀ ವಿಷಯ ವೈರಾಗ್ಯವಾಗಲೀ ಇಲ್ಲದ ನಮಗೆ ಈ ಅಖಂಡ ಧ್ಯಾನವನ್ನು ಮಾಡಲು ಸಾಧ್ಯವಾಗದಿದ್ದರೂ ಆ ಬಗ್ಗೆ ತೀವ್ರ ಅಭ್ಯಾಸವನ್ನಾದರೂ ಮಾಡಬೇಕು. ಹಸಿ ಕಟ್ಟಿಗೆಯಲ್ಲಿ ಹೊಗೆಯನ್ನಲ್ಲದೇ ಬೆಂಕಿಯನ್ನು ನಾವು ಕಾಣಲಾರೆವು. ತುಪ್ಪದಲ್ಲಿ ಅದ್ದಿದ ಒಣಗಿದ ಬತ್ತಿಯಲ್ಲಿ ಮಾತ್ರ ದೀಪ ಉರಿಯಬಲ್ಲದು. ವಿಷಯಜಲದಲ್ಲಿ ಮಿಂದ ಹಸಿ ಅಂತಃಕರಣದಲ್ಲಿ ರಾಗ-ಮೋಹಗಳ ಹೊಗೆಯಲ್ಲದೆ ಜ್ಞಾನದ ಕಿಡಿಯು ಪ್ರಜ್ವಲಿಸಲಾರದು. ತಪಸ್ಸು ಮತ್ತು ಸತ್ಕರ್ಮಗಳಿಂದ ಸಂಸ್ಕಾರ ಹೊಂದಿದ, ಭಕ್ತಿಯ ಘೃತಧಾರೆಯಲ್ಲಿ ಮಿಂದ ಅಂತಃಕರಣದಲ್ಲಿ ಮಾತ್ರ ಜ್ಞಾನಜ್ಯೋತಿಯು ಬೆಳಗಬಲ್ಲದು. ಆದುದರಿಂದ ವಿಷಯದಲ್ಲಿ ವಿರಕ್ತಿಯನ್ನೂ ಪರಮಾತ್ಮನಲ್ಲಿ ಭಕ್ತಿಯನ್ನೂ ಅಭಿವೃದ್ಧಿಗೊಳಿಸಲು ತೀವ್ರ ಪ್ರಯತ್ನವನ್ನಾದರೂ ನಿರಂತರವಾಗಿ ಮಾಡಬೇಕು.

**ಅಥ ಚಿತ್ತಂ ಸಮಾಧಾತುಂ ನ ಶಕ್ನೋಷಿ ಮಯಿ ಸ್ಥಿರಂ ।**
**ಅಭ್ಯಾಸಯೋಗೇನ ತತೋ ಮಾಮಿಚ್ಛಾಽಽಪ್ತುಂ ಧನಂಜಯ ॥**
**ಅಭ್ಯಾಸೇಽಪ್ಯಸಮರ್ಥೋಽಸಿ ಮತ್ಕರ್ಮಪರಮೋ ಭವ ।**

ಈ ತೀವ್ರಾಭ್ಯಾಸವನ್ನು ಕೈಗೊಳ್ಳುವ ಮಾನಸಿಕ ಸಂಸ್ಕಾರವನ್ನು ಪಡೆದಿರದಿದ್ದರೆ ಭಗವತ್‌ಪ್ರೀತಿಯ ಉದ್ದೇಶದಿಂದ ನಿಷ್ಕಾಮನೆಯಿಂದ ಕರ್ಮಾಚರಣೆಯನ್ನೆಸಗುವ ಕರ್ಮಯೋಗದ ಸಿದ್ಧಿಯನ್ನಾದರೂ ನಾವು ಹೊಂದಿರಬೇಕು. ಕರ್ಮಯೋಗವು ಅಂತಃಕರಣಶಕ್ತಿಯನ್ನು ಹೆಚ್ಚಿಸಿ ಧ್ಯಾನಯೋಗದ ಪ್ರಯತ್ನವನ್ನು ಕೈಗೊಳ್ಳಲು ನಮ್ಮನ್ನು ಅಣಿಗೊಳಿಸುವುದು. ಇಂತಹ ನಿಷ್ಕಾಮಕರ್ಮಯೋಗದ ಅವಸ್ಥೆಯನ್ನು ನಾವು ತಲುಪಿರದಿದ್ದರೆ ನಾವು ವಿವಿಧ

ಅಪೇಕ್ಷೆಗಳಿಂದ ಕೈಗೊಂಡಿರುವ ನಾನಾ ವಿಧ ವ್ಯವಹಾರಗಳ ಮಧ್ಯದಲ್ಲಿಯೂ ಪದೇ ಪದೇ ಭಗವಂತನ ಸ್ಮರಣೆ ಮಾಡುತ್ತ ನಮ್ಮ ಕರ್ಮಗಳನ್ನು ಅವನಿಗೆ ಅರ್ಪಿಸುವ ಸಮರ್ಪಣ ಮನೋಭಾವವನ್ನಾದರೂ ನಮ್ಮ ಹೃದಯದಲ್ಲಿ ಜಾಗೃತಗೊಳಿಸಬೇಕು. ಪ್ರಾರಂಭದಿಂದ ಕೊನೆಯವರೆಗೂ ನಮ್ಮ ಸಕಲ ಕ್ರಿಯಾವ್ಯವಹಾರಗಳಲ್ಲಿ ನಿಷ್ಕಾಮನೆ ಹಾಗೂ ಭಗವದರ್ಪಣಭಾವವನ್ನು ಸಂಪೂರ್ಣವಾಗಿ ಅನುಸ್ಯೂತಗೊಳಿಸಲು ನಮಗೆ ಶಕ್ಯವಾಗದಿದ್ದರೂ ಮಧ್ಯ ದಲ್ಲಾದರೂ ಆ ಬೆಳಕು ನುಸುಳಿಬರಲು ಅವಕಾಶವಿದ್ದರೆ ನಮ್ಮ ಜೀವನದಲ್ಲಿ ಗಾಢಾಂಧಕಾರವು ವ್ಯಾಪಿಸಲಾರದು. ನಮ್ಮ ಎಲ್ಲ ವ್ಯವಹಾರಗಳಲ್ಲಿಯೂ ಭಗವಂತನ ವ್ಯಾಪ್ತಿಯನ್ನು ಸಾಧಿಸಲಾಗದಿದ್ದರೂ ಜೀವನದಲ್ಲಿ ಭಗವಂತನ ಸಂಬಂಧಸ್ಥಾಪನೆಯಂತಹ ಈ ಚಿಕ್ಕ ಪ್ರಯತ್ನವನ್ನಾದರೂ ನಾವು ಏಕೆ ಮಾಡಬಾರದು? ಹೀಗೆ ಗೀತೆಯು ಭಿನ್ನ ಭಿನ್ನ ಹಂತಗಳಲ್ಲಿ ನಾವು ಮಾಡಬಹುದಾದಂತಹ ಸಾಧನೆಯ ಸಾಮಗ್ರಿಯನ್ನು ನಮಗೆ ಎಟಕುವಂತಹ ರೀತಿಯಲ್ಲಿ ವಿವರಿಸಿದೆ. ಭಗವತ್‌ಸಂಬಂಧ ಸ್ಥಾಪನೆ, ನಿಷ್ಕಾಮ ಕರ್ಮಯೋಗ, ಧ್ಯಾನದ ಮಹಾ ಪ್ರಯತ್ನ, ಅಖಂಡ ಧ್ಯಾನ ಇವೇ ಗೀತೆಯು ಬೋಧಿಸಿದ ನಾಲ್ಕು ಮೆಟ್ಟಲುಗಳಾಗಿದ್ದು ಕ್ರಮ ಕ್ರಮವಾಗಿ ಇವುಗಳನ್ನೇರಿ ನಮ್ಮ ಆತ್ಮವನ್ನೆತ್ತರಿಸಲು ಪ್ರಯತ್ನಿಸಬೇಕು.

## ನಿಷ್ಕಾಮ ಧ್ಯಾನ

ಸಕಾಮ ಧ್ಯಾನ ಮತ್ತು ನಿಷ್ಕಾಮ ಧ್ಯಾನ ಎಂಬುದಾಗಿ ಧ್ಯಾನದಲ್ಲಿಯೂ ಎರಡು ವಿಧಗಳಿವೆ. ನಿತ್ಯನೈಮಿತ್ತಿಕಾದಿ ಕರ್ಮಗಳನ್ನು ಫಲಾಪೇಕ್ಷೆಯಿಂದಲೂ ಮಾಡಬಹುದು; ಇದನ್ನು ನಿರಪೇಕ್ಷ ಭಾವನೆಯಿಂದಲೂ ಆಚರಿಸಬಹುದು. ಅದರಂತೆ ವಿಶಿಷ್ಟ ಫಲವನ್ನು ಅಪೇಕ್ಷಿಸಿ ಧ್ಯಾನವನ್ನು ಮಾಡುವವರಿದ್ದಾರೆ. ಧ್ರುವ ಮೊದಲಾದವರು ಒಮ್ಮೆ ಇಂತಹ ಕಾಮನೆಯಿಂದಲೇ ಭಗವಂತನ ಧ್ಯಾನವನ್ನು ಮಾಡಿದ್ದಿದೆ. ಯಾವ ಫಲಾಪೇಕ್ಷೆಯೂ ಇಲ್ಲದೆ ಪರಮಾತ್ಮನ ಪ್ರೀತಿಯೊಂದನ್ನೇ ಉದ್ದೇಶಿಸಿ ಧ್ಯಾನವನ್ನು ಆಚರಿಸುವವರೂ ಇದ್ದಾರೆ. ಇದೇ ಶ್ರೇಷ್ಠವಾದ ಧ್ಯಾನಯೋಗವಾಗಿದೆ. ನಿಷ್ಕಾಮಕರ್ಮಯೋಗದಲ್ಲಿ ಯಶಸ್ವಿಯಾದವರು

ಇಂತಹ ಪರಿಪೂರ್ಣ ಧ್ಯಾನಯೋಗದಿಂದಲೇ ಭಗವಂತನನ್ನು ಪ್ರಸನ್ನಗೊಳಿಸಿ ಕೃತಕೃತ್ಯರಾಗುವರು.

ಒಬ್ಬ ಋಷಿಯು ಅನೇಕ ವರ್ಷಗಳಿಂದ ದೇವಿಯನ್ನು ಆರಾಧಿಸಿದನು. ದೇವಿಯು ಪ್ರತ್ಯಕ್ಷಳಾಗಿ ಅವನು ಬಯಸಿದ ಪುರುಷಾರ್ಥಗಳನ್ನೆಲ್ಲ ಕೊಡಲು ಸಿದ್ಧಳಾದಳು. ಸ್ವರ್ಗವನ್ನು ಕೊಡಲೇ ಮಾನುಷ ಪ್ರಪಂಚದ ಸಕಲ ಭೋಗ ವೈಭವಗಳನ್ನು ನೀಡಲೇ ಎಂದು ದೇವಿಯು ಕೇಳಲು ಈ ಋಷಿಯು ಅವೆಲ್ಲವನ್ನೂ ನಿರಾಕರಿಸಿದನು. ''ದೇವಿ, ನನಗೆ ಸ್ವರ್ಗವಾಗಲಿ ಪ್ರಾಪಂಚಿಕ ಭೋಗವಾಗಲಿ ಯಾವುದೂ ಬೇಡ. ಭಗವಂತನನ್ನು ಅಖಂಡ ಭಕ್ತಿಯಿಂದ ನಿರಂತರವಾಗಿ ಧ್ಯಾನಿಸುವುದು ನನಗೆ ಬೇಕಾಗಿದೆ. ಈ ಸಾಧನಶರೀರದಿಂದ ನನ್ನ ಈ ತಪಸ್ಸೆಯು ನಿರಾತಂಕವಾಗಿ ನಡೆಯುವಂತೆ ನೀನು ಅನುಗ್ರಹಿಸು.'' ಎಂದು ಆ ಋಷಿಯು ಬೇಡುತ್ತಾನೆ. ದೇವಿಯ ಅನುಗ್ರಹದಿಂದ ಈ ನಿಷ್ಕಾಮ ಧ್ಯಾನ ನಿರಾಬಾಧವಾಗಿ ಸಾಗಿತು. ಇಕ್ಷ್ವಾಕುರಾಜನು ಒಮ್ಮೆ ಆ ಕಡೆಗೆ ಬರುತ್ತಾನೆ. ತನ್ನಿಂದ ಏನಾದರೂ ಪಡೆಯಲು ರಾಜನು ಆ ಋಷಿಯನ್ನು ಒತ್ತಾಯ ಪಡಿಸುತ್ತಾನೆ. ''ದೇವರಿಂದಲೂ ಏನನ್ನೂ ಬಯಸದ ನಾನು ನಿನ್ನಂತಹ ಸಾಧಾರಣ ರಾಜನಿಂದ ಏನನ್ನು ಬಯಸಿ ಪಡೆಯಲಿ?'' ಎಂದು ರಾಜನ ಪ್ರಾರ್ಥನೆಯನ್ನು ತಳ್ಳಿಹಾಕಿ ತನ್ನಿಂದಲೇ ಏನಾದರೂ ಕೇಳಿ ಪಡೆಯುವಂತೆ ಪ್ರತಿ ಆಹ್ವಾನವನ್ನು ಆ ಋಷಿಯು ರಾಜನಿಗೆ ನೀಡುವನು. ಕ್ಷತ್ರಿಯನಾದುದರಿಂದ ಆ ಬ್ರಾಹ್ಮಣನಲ್ಲಿ ಯಾವುದನ್ನಾದರೂ ಬೇಡಿ ಪಡೆಯಲು ಇಕ್ಷ್ವಾಕುವು ಮೊದಲು ಸಂಕೋಚಗೊಂಡರೂ ನಂತರ ಅವನ ಆವರೆಗಿನ ತಪಸ್ಸಿನ ಫಲವನ್ನೇ ನೀಡುವಂತೆ ಕೇಳುವನು. ಎಂತಹ ಭಯಂಕರವಾದ ಬೇಡಿಕೆ! ತನ್ನ ಇಡೀ ಜೀವನದ ಸಿದ್ಧಿ ಸಾಧನೆಗಳನ್ನೆಲ್ಲ ನೀಡುವುದೆಂಬುದು ಎಂತಹ ಕಲ್ಪನಾತೀತವಾದ ವಿಚಾರ! ಋಷಿಯು ಒಂದು ಕ್ಷಣ ಸಂಕೋಚದಿಂದ ಹಿಂದು ಮುಂದು ನೋಡಿದನು. ನಂತರ ತನ್ನ ತಪಸ್ಸಿನ ಅರ್ಧ ಫಲವನ್ನು ನೀಡುವುದಾಗಿ ಸಾರಿ, ಮರುಕ್ಷಣದಲ್ಲಿಯೇ ರಾಜನ ಬೇಡಿಕೆಯಂತೆ ತನ್ನ ತಪಸ್ಸಿನ ಪೂರ್ಣ ಫಲವನ್ನೇ ಈಗಲೇ ಧಾರೆ ಎರೆಯುವುದಾಗಿ ಧೀರಭಾವದಿಂದ ಋಷಿಯು ಘೋಷಿಸಿದನು. ತ್ಯಾಗದ ಮಹಾಮೇರುವಿನಂತಿರುವ ಋಷಿಯ ಈ ಕೃತಿಯನ್ನು ಕಂಡು ರಾಜನು

ವಿಚಲಿತನಾದನು. ತಾನು ಒಪ್ಪಿಕೊಂಡಂತೆ ಋಷಿಯು ನೀಡುವ ಈ ಮಹಾಫಲವನ್ನು ಸ್ವೀಕರಿಸಲು ಆತನು ಹಿಂಜರಿಯುತ್ತ ಈ ತಪಸ್ಸಿನ ಫಲದ ವಿಸ್ತಾರವೆಷ್ಟೆಂಬುದನ್ನು ಕೇಳುವನು. ''ತಪಸ್ಸಿನ ಫಲವನ್ನು ನೀಡಬೇಕೆಂದು ನೀನು ಕೇಳಿದ್ದಿ. ನಾನು ನೀಡಿದ್ದೇನೆ. ತಪಸ್ಸಿನ ಫಲ ಏನು ಮತ್ತು ಎಷ್ಟು ಎಂಬುದನ್ನು ನಾನು ತಿಳಿದಿಲ್ಲ. ಯಾವ ಫಲಾಪೇಕ್ಷೆಯೂ ಇಲ್ಲದೆ ನಾನು ಈ ತಪಸ್ಸನ್ನು ಆಚರಿಸುವಾಗ ನಿನಗೆ ಆ ಫಲವನ್ನು ನಾನು ಹೇಗೆ ಅರುಹಲಿ?'' ಎಂದು ಋಷಿಯು ಕೇಳುವನು. ''ಫಲದ ಸ್ವರೂಪವನ್ನೂ ಪರಿಮಿತಿಯನ್ನೂ ತಿಳಿಯದೆ ನಾನು ಅದನ್ನು ಹೇಗೆ ಸ್ವೀಕರಿಸಲಿ?'' ಎಂದು ಇಕ್ಷ್ವಾಕುವು ಆ ದಾನವನ್ನು ನಿರಾಕರಿಸುವನು. ಮೊದಲು ಕೊಟ್ಟ ಮಾತಿನಂತೆ ಆ ದಾನವನ್ನು ಸ್ವೀಕರಿಸಲೇಬೇಕೆಂದು ಋಷಿಯೂ ಪಟ್ಟು ಹಿಡಿಯುವನು. ಹೀಗೆ ಆ ಫಲವನ್ನು ಸ್ವೀಕರಿಸಲೊಲ್ಲದ ಈ ರಾಜ ಮತ್ತು ಅದನ್ನು ಸ್ವೀಕರಿಸಲೇಬೇಕೆಂದು ಆಗ್ರಹಿಸುವ ಆ ತ್ಯಾಗಮೂರ್ತಿಯಾದ ಮಹರ್ಷಿ ಇವರಿಬ್ಬರ ತಿಕ್ಕಾಟವನ್ನು ಪರಿಹರಿಸಲು ದೇವತೆಗಳೇ ಅಲ್ಲಿ ಉಪಸ್ಥಿತರಾಗುವರು. ಮಹಾಭಾರತದ ಜಾಪಕೋಪಾಖ್ಯಾನದಲ್ಲಿ ಈ ಕಥೆಯನ್ನು ಬಹು ಸುಂದರವಾಗಿ ವರ್ಣಿಸಿದ್ದಾರೆ. ನಿಷ್ಕಾಮಧ್ಯಾನದ ಜ್ವಲಂತ ನಿದರ್ಶನವಾಗಿ ಈ ಋಷಿಯನ್ನು ಅಲ್ಲಿ ಚಿತ್ರಿಸಲಾಗಿದೆ. ತಾನು ಜೀವನವಿಡೀ ನಡೆಸಿದ ಧ್ಯಾನದ ಫಲವನ್ನೇ ತಾನು ಅರಿಯದ ಮತ್ತು ತನ್ನ ಜೀವನದ ಸಿದ್ಧಿ ಸರ್ವಸ್ವವನ್ನೇ ನಿಃಸಂಕೋಚ ಭಾವದಿಂದ ತ್ಯಾಗ ಮಾಡಿದ ಆ ಋಷಿಯ ನಿಷ್ಕಾಮವೃತ್ತಿಯು ಆಶ್ಚರ್ಯಕರವಾಗಿದೆ. ನಿಷ್ಕಾಮಕರ್ಮಯೋಗದ ಅನಂತರದಲ್ಲಿ ಮಹಾ ಪ್ರಯತ್ನಗಳಿಂದ ಇಂತಹ ಕಾಮನಾರಹಿತವಾದ ಧ್ಯಾನಯೋಗದ ಅವಸ್ಥೆಯನ್ನು ತಲುಪಲು ಸಾಧಕನು ಪ್ರಯತ್ನಿಸಬೇಕು.

## ಸಾಧಕನಲ್ಲಿ ಶೀಲಸಂವರ್ಧನೆ

ಸಾಧಕನು ನಿಷ್ಕಾಮಕರ್ಮಾಚರಣ, ವೈರಾಗ್ಯ ಮತ್ತು ಪ್ರಯತ್ನಗಳ ಜೊತೆಗೆ ತನ್ನಲ್ಲಿ ಸದ್ಗುಣಗಳನ್ನು ಬೆಳೆಸಿಕೊಳ್ಳಲು ಪ್ರಯತ್ನಿಸಬೇಕು. ನಮ್ಮಲ್ಲಿ ಸದ್ಗುಣಗಳನ್ನು ವಿಕಸಿತಗೊಳಿಸುವುದೂ ಪರಮಾತ್ಮನ ಸಾಕ್ಷಾತ್ಕಾರಕ್ಕೆ

ಆವಶ್ಯಕವಾಗಿದೆ. ಮುಕ್ತಿಯನ್ನು ಹೊಂದಲಿರುವ ಆತ್ಮರೆಲ್ಲರೂ ಸ್ವತಃ ಸದ್ಗುಣರೂಪಿಗಳೇ ಆಗಿರುವರು. ಅಜ್ಞಾನದಿಂದ ಆವೃತವಾದ, ಆದರೆ ಸ್ವಾಭಾವಿಕವಾಗಿ ಸದ್ಗುಣಾತ್ಮಕವಾದ ತಮ್ಮ ಚೈತನ್ಯವನ್ನು ಆವಿಷ್ಕಾರಗೊಳಿಸುವುದೇ ಮುಕ್ತಿ ಎಂದು ಶಾಸ್ತ್ರಗಳಲ್ಲಿ ಹೇಳಿದೆ. ಹೀಗೆ ನಮ್ಮ ಮೂಲಭೂತ ಸದ್ಗುಣಗಳ ಅಭಿವ್ಯಕ್ತಿಯಾಗಲು ಅದಕ್ಕೆ ಅನುಕೂಲವೆನಿಸುವ ಪ್ರವೃತ್ತಿಗಳೇ ನಮ್ಮ ಜೀವನದಲ್ಲಿ ವ್ಯಾಪಿಸಿಕೊಂಡಿರಬೇಕು. ಆತನ ಸ್ವಾಭಾವಿಕ ಧರ್ಮಗಳೆನಿಸಿದ ಸತ್ಯ, ಜ್ಞಾನ, ದಯೆ, ತ್ಯಾಗ ಮುಂತಾದ ಸ್ವರೂಪ ಸದ್ಗುಣಗಳಿಗೆ ತೀರ ವ್ಯತಿರಿಕ್ತವೂ ವಿರೋಧಿಯೂ ಆದ ಪ್ರವೃತ್ತಿಯನ್ನು ನಮ್ಮಲ್ಲಿ ರೂಢಿಸಿಕೊಂಡಲ್ಲಿ ನಮ್ಮ ಆತ್ಮವು ಇನ್ನೂ ಹೆಚ್ಚು ಘನವಾದ ಆವರಣಕ್ಕೆ ಒಳಪಟ್ಟಂತಾಗುವುದು. ಅಸತ್ಯ, ಕ್ರೌರ್ಯ, ಹಿಂಸೆ, ವಂಚನೆ ಮೊದಲಾದ ದುರ್ಗುಣಗಳು ಆತ್ಮಸ್ವರೂಪಕ್ಕೆ ತೀರ ವಿಸಂಗತಗಳಾದ ವಿರೋಧಿ ಭಾವಗಳಾಗಿವೆ. ಇಂತಹ ದುರ್ಗುಣಗಳಿಗೆ ನಮ್ಮ ಜೀವನದಲ್ಲಿ ಅವಕಾಶ ದೊರೆಯುವುದರಿಂದ ನಮ್ಮ ಆತ್ಮವನ್ನು ಕುಗ್ಗಿಸಿ ಅಜ್ಞಾನ ಪ್ರಕೃತಿಗಳ ವಿಜೃಂಭಣೆಯನ್ನು ಇನ್ನೂ ಹೆಚ್ಚಿಸಿದಂತಾಗುತ್ತದೆ.

ಅದರಂತೆ ನಮ್ಮಲ್ಲಿ ದುರ್ಗುಣಗಳು ಹೆಚ್ಚಿದರೆ ಅನಂತಗುಣರೂಪಿಯಾದ ಭಗವಂತನ ಧ್ಯಾನ ಸಾಕ್ಷಾತ್ಕಾರಗಳನ್ನು ಪಡೆಯುವ ಅರ್ಹತೆಯನ್ನೇ ನಾವು ಕಳೆದುಕೊಂಡಂತಾಗುವುದು. ನಮ್ಮ ನಿತ್ಯವ್ಯವಹಾರಗಳೆಲ್ಲವೂ ದುರ್ಗುಣ ದುರಾಚಾರಗಳಿಂದ ದೂಷಿತವಾಗಿದ್ದರೆ, ಸುಗುಣಮೂರ್ತಿಯಾದ ಪರಮಾತ್ಮನ ಸಾಮ್ಯಪ್ರಾಪ್ತಿಯೆನ್ನಲಾಗುವ ಮುಕ್ತಿಯನ್ನು ಪಡೆಯಲು ನಾವು ಹೇಗೆ ಅರ್ಹರಾಗಬಲ್ಲೆವು? ಆದುದರಿಂದ ನಮ್ಮ ಮೂಲಭೂತ ಸ್ಥಿತಿಯೆನಿಸಿದ ನಮ್ಮ ಆತ್ಮದ ಸ್ವಾಭಾವಿಕ ಗುಣಧರ್ಮಗಳಿಗೂ ನಮ್ಮ ಪರಮಪ್ರಾಪ್ಯಸ್ಥಾನವಾಗಿರುವ ಪರಮಾತ್ಮ ಸ್ವರೂಪಗುಣಗಳಿಗೂ ತೀರ ವಿರೋಧಿಯಾದ ಮನೋಧರ್ಮಗಳಿಗೆ ನಮ್ಮ ಜೀವನದಲ್ಲಿ ಸರ್ವಥಾ ಅವಕಾಶವಿರಬಾರದು. ಇದರಿಂದ ಭಗವಂತನಿಂದ ನಾವು ಇನ್ನೂ ಹೆಚ್ಚು ದೂರ ಉಳಿಯುವ ಮತ್ತು ಆತ್ಮವಿಕಾಸಕ್ಕೆ ಅಡಚಣೆಯಾಗುವ ದುರಂತ ಸನ್ನಿವೇಶವು ಒದಗುವುದು. ಆದುದರಿಂದ ಅನಂತಗುಣಮೂರ್ತಿಯಾದ ಪರಮಾತ್ಮನ ಸಾಕ್ಷಾತ್ಕಾರದಿಂದ ನಮ್ಮಲ್ಲಿಯೇ ಸಹಜವಾಗಿ ಹುದುಗಿರುವ ಚೇತನಾತ್ಮಕ ಸದ್ಗುಣಪ್ರಭೆಗಳಿಂದ ನಾವು

ಬೆಳಗಬೇಕಾದರೆ ನಮ್ಮ ಲೌಕಿಕ ಜೀವನವು ನೀತಿಶೀಲಸಂಪನ್ನವಾಗಿರಬೇಕು. ನಮ್ಮ ವ್ಯವಹಾರಗಳೆಲ್ಲ ಸದ್ಗುಣಮಯವಾಗಿರಬೇಕು. ಸಾಧಕನು ತನ್ನಲ್ಲಿ ಅಳವಡಿಸಿಕೊಳ್ಳಬೇಕಾದ ಈ ಗುಣಗಳ ಯಾದಿಯನ್ನು ಹನ್ನೆರಡನೆಯ ಅಧ್ಯಾಯದ ಕೊನೆಯಲ್ಲಿ ಬರುವ,

ಅದ್ವೇಷ್ಟಾ ಸರ್ವಭೂತಾನಾಂ ಮೈತ್ರಃ ಕರುಣ ಏವ ಚ ।

ಮುಂತಾದ ಶ್ಲೋಕಗಳಲ್ಲಿ ನಾವು ಕಾಣಬಹುದು. ಅದ್ವೇಷ, ಮೈತ್ರಿ, ಕರುಣೆ, ನಿರ್ಮಮತೆ, ನಿರಹಂಕಾರ, ಸಹನೆ, ಅಲಂಬುದ್ಧಿ ಮೊದಲಾದವುಗಳೇ ನಮ್ಮಲ್ಲಿ ಅಳವಡಿಸಿಕೊಳ್ಳಬೇಕಾದ ಸದ್ಗುಣಗಳಾಗಿವೆ. ಭಕ್ತನಲ್ಲಿ ಈ ಗುಣಗಳು ತುಂಬಿರುತ್ತವೆ. ಇಂತಹ ಗುಣಶಾಲಿಯೇ ತನಗೆ ಅತ್ಯಂತ ಪ್ರೀತಿಪಾತ್ರನೆಂದು ಸ್ವಾಮಿಯು ಅರುಹಿದ್ದಾನೆ. ಲೋಕದ ಯಾವುದೇ ವ್ಯವಹಾರದಿಂದ ಉದ್ವಿಗ್ನನಾಗದೆ, ಯಾರಿಗೂ ಹೆದರದೆ ಭಕ್ತನು ತನ್ನ ಕರ್ತವ್ಯವನ್ನು ನಿರ್ವಹಿಸುತ್ತಾನೆ. ಅದರಂತೆ ಅವನಿಂದಲೂ ಜನರಿಗೆ ಯಾವ ಭಯ, ಅಪಾಯ ಉಪದ್ರವಗಳೂ ಇಲ್ಲ. ಸರ್ವರಿಗೂ ಅಭಯ ನೀಡಿ ತಾನೂ ನಿರ್ಭಯವಾಗಿ, ಉಳಿದವರೂ ನಿರುದ್ವಿಗ್ನರಾಗಿರುವಂತಹ ಸನ್ನಿವೇಶವನ್ನು ಭಕ್ತನು ನಿರ್ಮಿಸುತ್ತಾನೆ. ಆತನು 'ಸರ್ವಾರಂಭ ಪರಿತ್ಯಾಗಿ' ಅಂದರೆ ಪರಮಾತ್ಮನ ಪ್ರೀತಿಕರವಾಗದ ಕೇವಲ ಸ್ವಫಲಾಪೇಕ್ಷೆಯ ಕರ್ಮಗಳಿಂದ ದೂರವಾಗಿರುತ್ತಾನೆ. ಅವನಿಗೆ ಸುಖದುಃಖಗಳೆರಡರಲ್ಲಿಯೂ ಸಮದೃಷ್ಟಿ ಇರುತ್ತದೆ. ಸುಖದಂತೆ ದುಃಖವೂ ಅವನಿಗೆ ಅಪೇಕ್ಷಿತವೇ. ತನ್ನ ದುಷ್ಕೃತ್ಯಗಳ ಫಲರೂಪವಾದ ದುಃಖತಾಪಗಳನ್ನು ಅನುಭವಿಸಿ ತನ್ನ ಪಾತಕಗಳನ್ನು ಪರಿಹರಿಸಿಕೊಳ್ಳಲು ಭಕ್ತನು ತವಕಿಸುತ್ತಾನೆ. ತನ್ನ ಆತ್ಮಶುದ್ಧಿಗೆ ಸಹಾಯಕವೆಂದು ದುಃಖದ ಸನ್ನಿವೇಶವನ್ನು ಸಂತೋಷ ಸಮಾರಂಭವೆಂಬಂತೆ ಉತ್ಸಾಹದಿಂದ ಆತನು ಸ್ವಾಗತಿಸುತ್ತಾನೆ. ಅದರಂತೆ ಭಕ್ತನು ದುಃಖದಂತೆ ಸುಖವನ್ನು ಉಪೇಕ್ಷಾಬುದ್ಧಿಯಿಂದ ನೋಡುವನು. ದುಃಖವು ಕ್ಲೇಶರೂಪವಾಗಿರುವಂತೆ ಸುಖವೂ ಅನಂತ ಕ್ಲೇಶಕರವಾಗಿದೆ. ಒಂದು ಸುಖದ ತುಣುಕಿಗಾಗಿ ಮಾನವನು ಅದೆಷ್ಟು ದೈನ್ಯ ಸಂಕಟಗಳನ್ನು ಅನುಭವಿಸುತ್ತಾನೆ! ಸಮಚಿತ್ತನಾದ ಭಕ್ತನ ದೃಷ್ಟಿಯಲ್ಲಿ ವೈಷಯಿಕ ಸುಖ ಹಾಗೂ ಸಾಂಸಾರಿಕ ಕ್ಲೇಶ ಇವೆರಡಕ್ಕೂ ಒಂದೇ ಬೆಲೆ. ಎರಡನ್ನೂ ಹೇಯಭಾವನೆಯಿಂದಲೇ ಆತನು

ನಿರೀಕ್ಷಿಸುತ್ತಿರುವುದರಿಂದ ಆತನು ಸಮದುಃಖ ಸುಖನೆನಿಸುತ್ತಾನೆ. ಸ್ತುತಿನಿಂದೆಗಳೆರಡರಲ್ಲಿಯೂ ನಿರ್ವಿಕಾರನಾಗಿರುವುದೂ ಒಂದು ಅಪೂರ್ವವಾದ ಮಹತ್ವದ ಗುಣವಾಗಿದೆ. ಉಳಿದ ಎಲ್ಲ ಗುಣಗಳಿದ್ದರೂ ಸ್ತುತಿನಿಂದೆಗಳಿಂದ ವಿಕಾರವಶನಾಗದ ವ್ಯಕ್ತಿಯು ದೊರೆಯುವುದು ವಿರಳ. ಸರ್ವಸಂಗ ಪರಿತ್ಯಾಗಿಗಳಿಗೂ ನಿಃಸ್ಪೃಹಸೇವಾಜೀವಿಗಳಿಗೂ ಸ್ತುತಿಯ ಮೋಹವನ್ನು ಮೀರಿ ನಿಲ್ಲಲಾಗುವುದಿಲ್ಲ. ತನ್ನ ತ್ಯಾಗಸೇವೆಗಳನ್ನು ಸ್ತುತಿಸುವಾಗ ಎಂತಹ ತ್ಯಾಗ ತಪಸ್ವಿಯ ಮುಖವೂ ಅರಳುತ್ತದೆ. ಫಲಾಶೆ ಇಲ್ಲದೆ ಕೇವಲ ಹರಿ ಪ್ರೀತಿಯ ಅಪೇಕ್ಷೆಯಿಂದ ಸ್ವಕರ್ತವ್ಯಬುದ್ಧಿಯಿಂದ ನಡೆಯುವ ಕರ್ಮ ಯೋಗಿಯಾದ ಭಕ್ತನಿಗೆ ಸ್ತುತಿನಿಂದೆಗಳೆರಡೂ ಸಮಾನವೇ ಆಗುವವು. ಇಂತಹ ದಿವ್ಯ ಸದ್ಗುಣಗಳನ್ನೆಲ್ಲ ಪಡೆಯಲು ಸಾಧಕನು ಪ್ರಯತ್ನಿಸಿದಲ್ಲಿ ಅಧ್ಯಾತ್ಮನಿಧಿಯು ಅವನ ಹಸ್ತಗತವಾಗುವುದರಲ್ಲಿ ವಿಲಂಬವಾಗುವುದಿಲ್ಲ.

**ಯೇತು ಧರ್ಮ್ಯಾಮೃತಮಿದಂ ಯಥೋಕ್ತಂ ಪರ್ಯುಪಾಸತೇ ।**

ಈ ಸದ್ಗುಣಗಳು ಧರ್ಮ್ಯ ಹಾಗೂ ಅಮೃತಗಳಾಗಿವೆ.

## ಕ್ಷೇತ್ರಜ್ಞನು ಯಾರು ?

ಇನ್ನು ಮುಂದೆ ಗೀತೆಯಲ್ಲಿ ಕ್ಷೇತ್ರ-ಕ್ಷೇತ್ರಜ್ಞರ ನಿರೂಪಣೆಯಿದೆ. ಈ ಪ್ರಕೃತಿ-ಪ್ರಾಕೃತರೂಪವಾದ ಸಮಗ್ರ ಬ್ರಹ್ಮಾಂಡವೇ ಕ್ಷೇತ್ರವಾಗಿದೆ. ಭಗವಂತನಿಂದ ಅಧಿಷ್ಠಿತವಾದ ಸ್ಥಾನವನ್ನೇ ಲೋಕದಲ್ಲಿ ಕ್ಷೇತ್ರವೆಂದು ಕರೆಯಲಾಗುವುದು. ಇಡೀ ಬ್ರಹ್ಮಾಂಡವನ್ನೇ ಭಗವಂತನು ವ್ಯಾಪಿಸಿ ನೆಲೆಸಿರುವುದರಿಂದ ಅದೆಲ್ಲವೂ ಕ್ಷೇತ್ರವಾಗಿದೆ. ಈ ವಿಶ್ವವು ಪರಮಾತ್ಮನಿಗೆ ಶರೀರದಂತಿದೆ. ಭಗವಂತನು ಜಗತ್ತಿಗೆ ಆತ್ಮದಂತಿದ್ದಾನೆ. ಶರೀರದ ಪ್ರತಿಯೊಂದು ಕ್ರಿಯೆಗೂ ಆತ್ಮದ ಅಧಿಷ್ಠಾನವು ಅವಶ್ಯವಿರುವಂತೆ ಪರಮಾತ್ಮನ ಅನುಪ್ರವೇಶದಿಂದಲೇ ವಿಶ್ವದ ಎಲ್ಲ ಪ್ರವೃತ್ತಿ ವ್ಯವಹಾರಗಳು ನಡೆದಿವೆ. ಭಗವಂತನು ವಿಶ್ವಾತ್ಮನೆನಿಸಿದ್ದರೆ ವಿಶ್ವವು ಭಗವಂತನ ಶರೀರವೆನಿಸಿದೆ.

**ಇದಂ ಶರೀರಂ ಕೌಂತೇಯ ಕ್ಷೇತ್ರಮಿತ್ಯಭಿಧೀಯತೇ ।**
**ಕ್ಷೇತ್ರಜ್ಞಂ ಚಾಪಿ ಮಾಂ ವಿದ್ಧಿ ।**

ಪರಬ್ರಹ್ಮನ ಶರೀರದಂತಿರುವ ವಿಶ್ವವೇ ಕ್ಷೇತ್ರವು. ಇದನ್ನು ಸರ್ವಾಂಶಗಳಿಂದಲೂ ತಿಳಿದಿರುವ ಸರ್ವಜ್ಞನಾದ ಪರಮಾತ್ಮನೇ ಕ್ಷೇತ್ರಜ್ಞನೆಂದೂ ಆ ಭಗವಂತನ ಸ್ವರೂಪವೇ ತಾನೆಂದೂ ಶ್ರೀಕೃಷ್ಣನು ಹೇಳಿರುವನು.

ನಮ್ಮ ದೇಹವೇ ಕ್ಷೇತ್ರವೆಂದೂ ಇದರ ಅಭಿಮಾನಿಯಾದ ಜೀವನು ಕ್ಷೇತ್ರಜ್ಞನಾಗಿದ್ದು ಅವನಿಗೂ ಪರಬ್ರಹ್ಮನಿಗೂ ಅಭೇದವನ್ನು ಇಲ್ಲಿ ಹೇಳಲಾಗುತ್ತದೆ ಎಂದೂ ಕೆಲವರ ನಿರೂಪಣೆ ಇದೆ. ಗೀತೆಯಲ್ಲಿಯೇ ಮಾಡಿರುವ ಕ್ಷೇತ್ರಶಬ್ದದ ಅರ್ಥವ್ಯಾಪ್ತಿಯನ್ನು ಪರಿಶೀಲಿಸಿದಲ್ಲಿ ನಮ್ಮ ದೇಹೇಂದ್ರಿಯಗಳನ್ನು ಮಾತ್ರ ಇಲ್ಲಿ ಪರಿಗ್ರಹಿಸಲು ಶಕ್ಯವಾಗಲಾರದು.

**ಮಹಾಭೂತಾನ್ಯಹಂಕಾರೋ ಬುದ್ಧಿರವ್ಯಕ್ತಮೇವ ಚ ।**
**ಏತತ್ ಕ್ಷೇತ್ರಂ ಸಮಾಸೇನ ಸವಿಕಾರಮುದಾಹೃತಮ್ ।**

ಪ್ರಕೃತಿ, ಅಹಂಕಾರತತ್ತ್ವ, ಪಂಚಭೂತಗಳು ಮುಂತಾದ ಪ್ರಕೃತಿ ವಿಕಾರಾತ್ಮಕವಾದ ಈ ಚರಾಚರ ವಿಶ್ವವೆಲ್ಲವೂ ಕ್ಷೇತ್ರವೆಂಬ ವಿಸ್ತೃತ ಅರ್ಥದಲ್ಲಿ ಕ್ಷೇತ್ರಶಬ್ದದ ವ್ಯಾಖ್ಯೆಯನ್ನು ಇಲ್ಲಿ ಮಾಡಲಾಗಿದೆ. ಜಗದಂತರ್ಯಾಮಿಯಾಗಿ ಬ್ರಹ್ಮಾಂಡದ ಒಳಹೊರಗನ್ನೆಲ್ಲ ಅರಿತಿರುವ ಪರಮಾತ್ಮನೇ ಕ್ಷೇತ್ರಜ್ಞನೆಂದೂ ತನ್ನ ಶರೀರವನ್ನೇ ಸಮಗ್ರವಾಗಿ ಅರಿಯದ ಈ ಬಡಪಾಯಿ ಜೀವನು ಕ್ಷೇತ್ರಜ್ಞನಲ್ಲವೆಂದೂ ಇದರಿಂದ ಸುಸ್ಪಷ್ಟವಾಗುತ್ತದೆ. ಭಾಗವತದಲ್ಲಿಯೂ

**ಕ್ಷೇತ್ರಜ್ಞ ಆತ್ಮಾ ಪುರುಷಃ ಪುರಾಣಃ**
**ಸಾಕ್ಷಾತ್ ಸ್ವಯಂಜ್ಯೋತಿರಜಃ ಪರೇಶಃ ।**
**ನಾರಾಯಣೋ ಭಗವಾನ್ ವಾಸುದೇವಃ**
**ಸ್ವಮಾಯಯಾಽಽತ್ಮನ್ಯವಧೀಯಮಾನಃ ॥**

ಜೀವನಿಂದ ಪ್ರತ್ಯೇಕವಾದ ಸರ್ವಜ್ಞನಾದ ಶ್ರೀನಾರಾಯಣನೇ ಕ್ಷೇತ್ರಜ್ಞನೆಂದು ನಿಃಸಂದಿಗ್ಧವಾಣಿಯಲ್ಲಿ ಹೇಳಿದೆ.

## ಜ್ಞೇಯ ಮತ್ತು ಜಿಜ್ಞಾಸು ಗುಣಧರ್ಮಗಳು

ಕ್ಷೇತ್ರ-ಕ್ಷೇತ್ರಜ್ಞರನ್ನು ನಿರೂಪಿಸಿದ ನಂತರ ಜ್ಞೇಯ ಮತ್ತು ಜ್ಞಾನವನ್ನು

ಪಡೆಯಲು ನಮ್ಮಲ್ಲಿ ಇರಬೇಕಾದ ಅರ್ಹತೆಗಳು - ಇವುಗಳನ್ನು ವಿವರಿಸಲಾಗಿದೆ.

ಇಡೀ ವಿಶ್ವಕ್ಕೆ ಆತ್ಮದಂತಿರುವ ಸರ್ವವ್ಯಾಪಕನಾದ ಪರಮಾತ್ಮನೇ ಜ್ಞೇಯನು. ಜಗತ್ತಿನಲ್ಲಿ ಮುಖ್ಯವಾಗಿ ತಿಳಿಯಬೇಕಾದ ವಸ್ತುವು ಈತನೇ. ಹನ್ನೆರಡು ವರ್ಷಗಳ ಗುರುಕುಲವಾಸದ ನಂತರ ಮನೆಗೆ ಹಿಂತಿರುಗಿದ ಶ್ವೇತಕೇತುವಿನ ಮುಖದಲ್ಲಿ ಅವನ ತಂದೆಗೆ ಜ್ಞಾನದ ವರ್ಚಸ್ಸು, ಲಕ್ಷಣಗಳೇನೂ ಕಾಣಲೊಲ್ಲವು. ಅಲ್ಲಿ ಸ್ತಬ್ಧತೆ, ಅಹಂಕಾರಗಳನ್ನೇ ಗುರುತಿಸಿದ ತಂದೆ ಉದ್ದಾಲಕನು ಖಿನ್ನನಾಗಿ

ಉತ ತಮಾದೇಶಮಪ್ರಾಕ್ಷ್ಯಃ ಯೇನಾಶ್ರುತಂ ಶ್ರುತಂ
ಭವತ್ಯಮತಂ ಮತಮವಿಜ್ಞಾತಂ ವಿಜ್ಞಾತಮ್

-ಛಾಂದೋಗ್ಯೋಪನಿಷತ್

ಯಾವ ಒಂದು ವಸ್ತುವಿನ ಜ್ಞಾನದಿಂದ ಎಲ್ಲವೂ ತಿಳಿಯಲ್ಪಡುವುದೋ ಆ ವಸ್ತುವಿನ ಜ್ಞಾನವನ್ನು ಪಡೆದಿರುವೆಯಾ? ಎಂದು ಕೇಳುವನು. ಶ್ವೇತಕೇತುವಿಗೆ ತಂದೆಯ ಪ್ರಶ್ನೆಯನ್ನು ಉತ್ತರಿಸಲಾಗಲಿಲ್ಲ. ಒಂದರ ತಿಳುವಳಿಕೆಯಿಂದ ಎಲ್ಲವನ್ನೂ ತಿಳಿಯಬಹುದೆಂಬ ತಂದೆಯ ಮಾತು ಅವನಿಗೆ ಒಂದು ಒಗಟಾಗಿ ತೋರಿತು. ''ಪರಮಾತ್ಮನ ಜ್ಞಾನವೇ ಅಂತಹದು. ಅವನ ಜ್ಞಾನದಿಂದ ನಾವು ಇಡೀ ಜಗತ್ತನ್ನು ತಿಳಿದಂತೆಯೇ. ಮಾವಿನ ಹಣ್ಣನ್ನು ತಿನ್ನುವವನು ಅದರ ಸಿಪ್ಪೆ, ಗೊರಟುಗಳನ್ನು ಜಗಿಯಬೇಕಾಗಿಲ್ಲ. ಹಣ್ಣಿನ ರಸಕವಲವನ್ನು ಆಸ್ವಾದಿಸಿದರೆ ಇಡೀ ಹಣ್ಣನ್ನು ತಿಂದಂತೆ. ಜಗತ್ತಿನ ಸಾರವಸ್ತುವಾದ ಪರಮಾತ್ಮನನ್ನು ಅರಿತರೆ ಉಳಿದ ಪ್ರಪಂಚವನ್ನು ನಾವು ಬೇರೆ ತಿಳಿಯಬೇಕೆ? ಪ್ರಪಂಚದ ಸಾರಸರ್ವಸ್ವವೆನಿಸಿದ ಸರ್ವೋತ್ತಮನಾದ ಪರಮಾತ್ಮನ ಜ್ಞಾನವನ್ನು ಪಡೆಯದೆ ಸಿಪ್ಪೆಯಂತಿರುವ ಈ ತುಚ್ಛ ಜಗತ್ತಿನ ಪರಿಜ್ಞಾನದಿಂದಲೇ ಗರ್ವಿತನಾಗಿ ನೀನಿಲ್ಲಿಗೆ ಬಂದಿರುವಿ. ಜ್ಞಾನದ ಪರಿಣತಿಯಾದ ವಿನಯಪ್ರವೃತ್ತಿಯು ನಿನ್ನ ಮುಖದಲ್ಲಿ ಕಾಣಿಸುವುದಿಲ್ಲ'' ಎಂದು ಉದ್ದಾಲಕನು ಉಪದೇಶ ನೀಡಿ ಅವನ ಕಣ್ಣು ತೆರೆಯುತ್ತಾನೆ. ಅಂತೂ ಪರಮಾತ್ಮನೇ ಜಗತ್ತಿನಲ್ಲಿ ಮುಖ್ಯವಾದ ಜ್ಞೇಯ

ವಸ್ತುವೆಂದು ಇದರಿಂದ ವಿಶದವಾಗುವುದು. ಎಲ್ಲೆಡೆಗಳಲ್ಲಿಯೂ ತನ್ನ ಅಪ್ರಾಕೃತ ಸರ್ವೇಂದ್ರಿಯಗಳನ್ನು ಹರಡಿಸಿ ನಮ್ಮೆಲ್ಲರ ಬಾಹ್ಯ ಅಂತರಗಳೆಲ್ಲವನ್ನೂ ಪೂರ್ತಿಯಾಗಿ ಅರಿತಿರುವ, ಪ್ರಪಂಚದ ಒಳಗೂ ಹೊರಗೂ ವ್ಯಾಪಿಸಿರುವ, ನಮ್ಮಿಂದ ಬಹು ದೂರದಲ್ಲಿದ್ದರೂ ನಮ್ಮ ಸನಿಹದಲ್ಲಿಯೇ ಇರುವ, ಪ್ರಕೃತಿ ಮತ್ತು ಅದರ ಗುಣಗಳಿಗೆ ಅತೀತನೂ ದಿವ ಕಲ್ಯಾಣಗುಣಾಕರನೂ ಆದ, ವಿಶ್ವರೂಪಿಯಾದ ಪರಬ್ರಹ್ಮನ ಜ್ಞಾನವನ್ನು ಸಂಪಾದಿಸುವುದೇ ನಮ್ಮ ಜೀವನದ ಪರಮ ಲಕ್ಷ್ಯವಾಗಿರಬೇಕು.

ಈ ಜ್ಞಾನವನ್ನು ಸಂಪಾದಿಸಲು ಕೆಲವು ಮೂಲಭೂತ ಅರ್ಹತೆಗಳು ನಮ್ಮಲ್ಲಿರಬೇಕಾಗಿದ್ದು ಅವುಗಳ ಕಡೆಗೆ ನಾವು ವಿಶೇಷವಾಗಿ ಗಮನಹರಿಸಬೇಕು. ಆತ್ಮಶ್ಲಾಘನೆ, ಹಿಂಸೆ ದಂಭಗಳಿಲ್ಲದ ವ್ಯವಹಾರ, ಕ್ಷಮಾವೃತ್ತಿ, ಪ್ರಾಮಾಣಿಕತನ, ಗುರುಶುಶ್ರೂಷೆ, ಶುಚಿತ್ವ, ಆತ್ಮನಿಗ್ರಹ, ವೈಷಯಿಕ ಪದಾರ್ಥಗಳಲ್ಲಿ ಅನಾಸಕ್ತಿ, ವಿನಯ, ಪ್ರಪಂಚದಲ್ಲಿರುವ ದೋಷನ್ಯೂನತೆಗಳನ್ನು ಅರಿಯುವ ವಿವೇಕದೃಷ್ಟಿ, ಮಾನಸಿಕ ಸಂತುಲನ, ಪರಮಾತ್ಮನಲ್ಲಿ ಅನನ್ಯಭಕ್ತಿ ಇವೇ ಮುಂತಾದ ಸದ್ಗುಣಗಳನ್ನು ಅಳವಡಿಸಿಕೊಂಡವನೇ ಜ್ಞಾನವನ್ನು ಪಡೆಯಬಲ್ಲನು.

ಆರ್ಜವ ಗುಣದಿಂದಲೇ ಸತ್ಯಕಾಮ ಜಾಬಾಲಿಯ ಅರ್ಹತೆಯನ್ನು ಅವನ ಗುರುವು ಗುರುತಿಸುತ್ತಾನೆ. ಪ್ರಪಂಚದ ಸಕಲ ಭೋಗಪದಾರ್ಥಗಳನ್ನು ಕೊಡಮಾಡಿದರೂ ಜ್ಞಾನದ ಮುಂದೆ ಅದೆಲ್ಲ ತುಚ್ಛವೆಂದು ಪರಿಗಣಿಸಿದ ಬಾಲ ನಚಿಕೇತನ ತ್ಯಾಗ ವೈರಾಗ್ಯಗಳಿಗೆ ಬೆರಗಾದ ಯಮನು ಸುಪ್ರಸನ್ನನಾಗಿ ಅವನಿಗೆ ಪರವಿದ್ಯೆಯನ್ನು ಉಪದೇಶಿಸುತ್ತಾನೆ. ತಾನು ಅನೇಕ ಕಷ್ಟ ನಿಷ್ಠುರಗಳನ್ನು ಅನುಭವಿಸಿದರೂ ಗುರುಗಳ ಆದೇಶವನ್ನು ಮೀರಬಾರದೆಂಬ ದೃಢನಿಷ್ಠೆಯಿಂದ ವರ್ತಿಸಿದ ಆರುಣಿ, ಉಪಮನ್ಯುಗಳು ಆಚಾರ್ಯೋಪಾಸನದ ಬಲದಿಂದಲೇ ಸಕಲ ವಿದ್ಯೆಗಳನ್ನು ಪಡೆದರು. ಇಂದು ವಿದ್ಯೆಯ ಕ್ಷೇತ್ರದಲ್ಲಿ ಆಚಾರ್ಯೋಪಾಸನೆಯು ಸಂಪೂರ್ಣವಾಗಿ ಲುಪ್ತವಾಗಿದೆ. ಗುರುಗಳೇ ಶಿಷ್ಯರಿಗೆ ಹೆದರಿ ನಡೆಯುವಂತಹ ವಾತಾವರಣವು ಇಂದು ವಿಶ್ವವಿದ್ಯಾಲಯಗಳಲ್ಲಿ ಏರ್ಪಟ್ಟಿದೆ. ಗುರುಶಿಷ್ಯರ ಸಂಬಂಧದಲ್ಲಿಯೂ ವ್ಯಾಪಾರಿವೃತ್ತಿಯು ಸೇರಿಕೊಂಡಿದೆ. ಗಿರಣಿ

ಕಾರಖಾನೆಗಳಲ್ಲಿ ಮಾಲಿಕರು ಮತ್ತು ಕೆಲಸಗಾರರುಗಳಲ್ಲಿರುವಂತೆ ಇಂದು ಅಧ್ಯಾಪಕರ ಹಾಗೂ ವಿದ್ಯಾರ್ಥಿಗಳ ಸಂಬಂಧವು ರೂಪುಗೊಂಡಿದೆ ಎಂದು ಹೇಳಿದರೂ ತಪ್ಪಾಗದು.

ಜ್ಞಾನಾರ್ಥಿಗಳ ಅರ್ಹತೆಗಳಲ್ಲಿ ಒಂದಾಗಿ ಪರಿಗಣಿತವಾದ ಶುಚಿತ್ವವೂ ಕೇವಲ ಕಾಯಿಕವಲ್ಲ. ಆಂತರಿಕ ಶುಚಿತ್ವವೇ ಇಲ್ಲಿ ಪ್ರಧಾನವಾಗಿ ಪರಿಗ್ರಹಿಸಲ್ಪಟ್ಟಿದೆ. ಎಷ್ಟು ಸಾರಿ ನೀರಲ್ಲಿ ಮುಳುಗಿದರೂ ಎಷ್ಟು ಬಾರಿ ಮೃತ್ತಿಕಾಲೇಪವನ್ನು ಮಾಡಿಕೊಂಡರೂ ಮಾನಸಿಕ ನೈರ್ಮಲ್ಯವನ್ನು ಪಡೆಯದ ವ್ಯಕ್ತಿಯು ಜ್ಞಾನಕ್ಕೆ ಅಧಿಕಾರಿಯಾಗಲಾರ. ಆತ್ಮನಿಗ್ರಹಕ್ಕೆ ಬೈದರ ಶಿಷ್ಯನಾದ ಉತ್ತಂಕನು ಆದರ್ಶ ಉದಾಹರಣೆಯಾಗಿದ್ದಾನೆ. ಗುರುಗಳ ಅನುಪಸ್ಥಿತಿಯಲ್ಲಿ ಸುಂದರಿಯಾದ ಗುರುಪತ್ನಿಯ ವಿಲಾಸ-ವಿಭ್ರಮಗಳಿಗೆ ಬಲಿಯಾಗದೆ ಆತ್ಮಸ್ಥೈರ್ಯವನ್ನು ಕಾಪಾಡಿಕೊಂಡ ಉತ್ತಂಕನು ಗುರುಗಳ ವಿಶೇಷ ಅನುಗ್ರಹವನ್ನು ಪಡೆಯುವನು. ದಂಭ, ಅಹಂಕಾರಗಳಂತೂ ಜ್ಞಾನದ ಕಡು ವೈರಿಗಳು. ಎತ್ತರದ ಜಾಗಕ್ಕೆ ನೀರು ಹರಿಯಲಾರದು. ನೀರು ಹರಿಯಲು ತಗ್ಗಾದ ಸ್ಥಳವೇ ಬೇಕು. ಅಹಂಕಾರ ಔದ್ಧತ್ಯಗಳಿರುವಲ್ಲಿ ಜ್ಞಾನವು ಪ್ರವಹಿಸಲಾರದು. ವಿನಯದಿಂದ ನಮ್ರವಾದ ಅಂತಃಕರಣದೆಡೆಗೇ ಜ್ಞಾನದ ಪ್ರವಾಹವು ವೇಗದಿಂದ ಹರಿಯಬಲ್ಲದು. ತನ್ನ ಅಲ್ಪತೆಯನ್ನು ಅರಿತೂ ಅವಾಸ್ತವವಾಗಿ ತನ್ನ ಹೆಚ್ಚುಗಾರಿಕೆಯನ್ನು ಪ್ರದರ್ಶಿಸುವುದೇ ದಂಭವೆನಿಸುವುದು. ಈಗ ಎಲ್ಲೆಡೆಗಳಲ್ಲಿಯೂ ಇಂತಹ ಕೃತ್ರಿಮ ಜೀವನವನ್ನೇ ಕಾಣುತ್ತಿದ್ದೇವೆ. ಒಬ್ಬ ವ್ಯಕ್ತಿಯು ತನ್ನನ್ನು ತಿಳಿದುಕೊಂಡಿರುವ ಮಾನವು ಒಂದಾಗಿದ್ದರೆ ಉಳಿದವರು ಅವನನ್ನು ತಿಳಿದುಕೊಂಡಿರುವ ಸ್ವರೂಪವೇ ಬೇರೆ ಇರುತ್ತದೆ. ಆದರೆ ವಾಸ್ತವವಾದ ಅವನ ವ್ಯಕ್ತಿತ್ವವು ಇವೆರಡಕ್ಕಿಂತಲೂ ಭಿನ್ನವಾಗಿರುತ್ತದೆ. ಅಂತೂ ಸ್ವಾರ್ಥಸಾಧನೆಯ ಹೆಸರಿನಲ್ಲಾಗಲಿ ಶಿಷ್ಟಾಚಾರದ ರೂಪದಲ್ಲಾಗಲಿ ಈ ದಂಭವಂಚನೆಗಳ ಸಾಮ್ರಾಜ್ಯವೇ ಎಲ್ಲೆಡೆಗಳಲ್ಲಿಯೂ ಪಸರಿಸಿದೆ. ನಮ್ಮ ಈ ಮಾನಸಿಕ ವಿಕೃತಿಗಳ ವಿರುದ್ಧವಾಗಿ ಸಂತತವಾದ ಹೋರಾಟವನ್ನು ನಡೆಸಿ ಆತ್ಮಗುಣಗಳನ್ನು ಅಭಿವೃದ್ಧಿಗೊಳಿಸಿದಲ್ಲೇ ಮಾನವನಜೀವನದ ಪರಮೋದ್ದೇಶವೆನಿಸಿದ ಸುಜ್ಞಾನವನ್ನು ಹೊಂದಲು ನಾವು ಸಮರ್ಥರಾಗುವೆವು.

## ಅನಾದಿ ತತ್ತ್ವಗಳ ವಿವೇಚನೆ

ಪ್ರಪಂಚದ ಬಗ್ಗೆ ವಿಶದವಾದ ನಿರ್ಣೀತವಾದ ಜ್ಞಾನವುಂಟಾಗಲು ಅನುಕೂಲವಾಗುವಂತೆ ಪ್ರಪಂಚವನ್ನು ವಿಭಜಿಸಿ ಪೃಥಕ್ಕರಿಸಿ ಶ್ರೀಕೃಷ್ಣನು ನಿರೂಪಿಸುತ್ತಾನೆ. ಜಗತ್ತಿನಲ್ಲಿ ಪ್ರಕೃತಿ ಮತ್ತು ಜೀವರೆಂದು ಅನಾದಿಯಾದ ಎರಡು ತತ್ತ್ವಗಳಿವೆ. ಜಡತತ್ತ್ವವಾದ ಪ್ರಕೃತಿಯು ಅನಾದಿಯಾಗಿದ್ದರೂ ಅದು ವಿಕಾರಶೀಲವಾಗಿದೆ. ಅದರ ಪರಿಣತಿಯೇ ಈ ಸ್ಥೂಲವಾದ ಜಡಪ್ರಪಂಚವಾಗಿದೆ. ಈ ವಿಕಾರ ಪರಿಣಾಮಗಳಿಗೆ ಪ್ರಕೃತಿಯು ಆಧಾರವಾಗಿದ್ದರೆ, ಪ್ರಾಕೃತಿಕ ಪದಾರ್ಥಗಳಿಂದ ಜನಿಸುವ ಸುಖದುಃಖಗಳ ಭೋಕ್ತಾರನೇ ಜೀವನಾಗಿರುವನು.

> ಕಾರ್ಯಕಾರಣಕರ್ತೃತ್ವೇ ಹೇತುಃ ಪ್ರಕೃತಿರುಚ್ಯತೇ ।
> ಪುರುಷಃ ಸುಖದುಃಖಾನಾಂ ಭೋಕ್ತೃತ್ವೇ ಹೇತುರುಚ್ಯತೇ ॥

ಇವೆರಡನ್ನೂ ಮೀರಿ ನಿಂತಿರುವ ಇನ್ನೊಬ್ಬ ಮಹಾಚೇತನನು ಈ ಜಗತ್ತಿನಲ್ಲಿ ನೆಲೆಸಿದ್ದಾನೆ. ಅವನೇ ಪರಮಾತ್ಮನು. ಅವನಲ್ಲಿ ಪ್ರಕೃತಿಯಲ್ಲಿರುವಂತೆ ವಿಕಾರ ಮಾರ್ಪಾಡುಗಳಾಗಲಿ ಜೀವರಲ್ಲಿ ಇರುವಂತೆ ವಿಕಾಸ ಸಂಕೋಚಗಳಾಗಲಿ ಇರುವುದಿಲ್ಲ. ನಿರ್ವಿಕಾರನೂ ನಿತ್ಯಾನಂದನೂ ಆದ ಪರಮಪುರುಷನು ಜೀವಪ್ರಕೃತಿಗಳಿಗಿಂತ ಭಿನ್ನನಾಗಿ ಈ ದೇಹದಲ್ಲಿಯೂ ಬ್ರಹ್ಮಾಂಡದಲ್ಲಿಯೂ ಇರುವನು.

> ಪರಮಾತ್ಮೇತಿ ಚಾಪ್ಯುಕ್ತೋ ದೇಹೇಽಸ್ಮಿನ್ ಪುರುಷಃ ಪರಃ ।

"ಹಿಂದೆ ನಿರೂಪಿಸಿದ ಪ್ರಕೃತಿಜೀವರಿಗಿಂತ ಬೇರೆಯಾದ ಪುರುಷನು ಸರ್ವಕ್ರಿಯಾಪ್ರವರ್ತಕನಾಗಿ ಈ ದೇಹದಲ್ಲಿದ್ದಾನೆ. ಅವನೇ ಪರಮಾತ್ಮನೆನಿಸಿದ್ದಾನೆ." ಇವನು ಸರ್ವವ್ಯಾಪಿಯಾದ ಆಕಾಶದಂತೆ ಅಲಿಪ್ತನಾಗಿರುವನು. ಭೂಮಂಡಲವೆಲ್ಲ ಸೂರ್ಯನಿಂದ ಪ್ರಕಾಶಿತವಾಗುವಂತೆ ಪ್ರಕೃತಿಪ್ರಾಕೃತಾತ್ಮಕವಾದ ಪ್ರಪಂಚವೆಲ್ಲ ಇವನ ಶಕ್ತಿಯಿಂದಲೇ ನಮಗೆ ಕಾಣುತ್ತದೆ. ಹೀಗೆ ಜಡ-ಜೀವ-ಪರಮಾತ್ಮ ಎಂಬ ಮೂರು ಅನಾದಿ ತತ್ತ್ವಗಳಿಂದ ಜಗತ್ತು ವಿಭಕ್ತವಾಗಿರುವುದು ಸುಸ್ಪಷ್ಟವಿದೆ. ಈ

ಮೂರು ಅನಾದಿ ವಸ್ತುಗಳನ್ನು ಆಧರಿಸಿಯೇ ಶ್ರೀಮಧ್ವಾಚಾರ್ಯರು ಪಂಚಭೇದಗಳನ್ನು ನಿರೂಪಿಸಿದ್ದಾರೆ.

ಪ್ರಪಂಚದ ಈ ತಾತ್ತ್ವಿಕ ವಿವೇಚನೆಯು ಏಕೆ ಬೇಕೆಂದು ಕೆಲವರು ಆಕ್ಷೇಪಿಸುವರು. ಪ್ರಪಂಚದಲ್ಲಿ ತತ್ತ್ವಗಳೆಷ್ಟಿವೆ? ಇದು ತತ್ತ್ವವೆ? ಅತತ್ತ್ವವೆ? ಎಂದು ಮುಂತಾದ ಸೂಕ್ಷ್ಮ ವಿವೇಚನೆಯಿಂದ ಪ್ರತ್ಯಕ್ಷ ಜೀವನಕ್ಕೆ ಏನೂ ಲಾಭವಿಲ್ಲ. ಸಮುದ್ರತೀರದಲ್ಲಿ ಉರಿಬಿಸಿಲಿನಲ್ಲಿ ಕುಳಿತು ಅದರ ಮಳಲನ್ನು ಎಣಿಸಿದಂತೆ ಈ ಲೌಕಿಕ ಚರ್ಚೆಯು ಬರೇ ನಿರರ್ಥಕ ಪ್ರಯಾಸವೇ ಆಗಿದೆ. ಸುಖಶಾಂತಿಮಯಜೀವನಕ್ಕೆ ಆವಶ್ಯಕಗಳಾದ ನೀತಿ, ಸದ್ಗುಣಗಳನ್ನು ಮಾತ್ರ ಈ ಜಗತ್ತಿಗೆ ಉಪದೇಶಿಸಿದರೆ ಸಾಕು. ಈ ಒಣ ಚರ್ಚೆಯಿಂದ ದೂರ ಉಳಿದಷ್ಟು ಜಗತ್ತಿಗೆ ಕ್ಷೇಮ ಎಂದು ಭಾವಿಸುವವರು ಬಹಳ ಮಂದಿ ಇದ್ದಾರೆ. ಈ ಬಗ್ಗೆ ಗೌತಮಬುದ್ಧನು ಹೇಳಿದ ಕತೆಯನ್ನು ಉದಾಹರಿಸಲಾಗುತ್ತದೆ. ಸಾಂಸಾರಿಕ ಕ್ಲೇಶಗಳಿಂದ ಬಳಲಿ ಧರ್ಮೋಪದೇಶವನ್ನು ಪಡೆಯಲು ಗೌತಮಬುದ್ಧನ ಬಳಿಗೆ ಬಂದ ಶಿಷ್ಯನೊಬ್ಬನು ಜೀವ-ಜಗತ್ತುಗಳಿಗೆ ಸಂಬಂಧಿಸಿದ ಕೆಲವು ತಾತ್ತ್ವಿಕ ಪ್ರಶ್ನೆಗಳನ್ನು ಮುಂದಿಟ್ಟು ಅದರ ಉತ್ತರವನ್ನು ಕೊಡಲೇಬೇಕೆಂದು ಗೌತಮ ಬುದ್ಧನಲ್ಲಿ ಹಠ ಹಿಡಿಯುವನು. ಆಗ ಗೌತಮಬುದ್ಧನು ಹೇಳುವ ಉದಾಹರಣೆ ಇದು: ವಿಷಲಿಪ್ತವಾದ ಬಾಣವು ಚುಚ್ಚಿ ಅದರ ತೀವ್ರವೇದನೆಯನ್ನು ಸಹಿಸಲಾರದೆ ಒಬ್ಬ ವ್ಯಕ್ತಿಯು ವೈದ್ಯನ ಬಳಿಗೆ ಬರುವನು. ವೈದ್ಯನು ನೀಡುವ ಔಷಧವನ್ನು ಸ್ವೀಕರಿಸುವ ಬದಲು ಅವನು ಕರಾರು ಹಾಕುತ್ತಾನೆ - ಆ ಬಾಣದ ರೂಪವೇನು, ಬಣ್ಣವೇನು? ಬಾಣವನ್ನು ಯಾವುದರಿಂದ ನಿರ್ಮಿಸಲಾಗಿದೆ? ಔಷಧವನ್ನು ಸ್ವೀಕರಿಸುವ ಮುಂಚೆ ಈ ಎಲ್ಲ ಪ್ರಶ್ನೆಗಳಿಗೆ ಉತ್ತರ ಕೊಡಲೇಬೇಕು ಎಂದು. ತಾತ್ತ್ವಿಕ ವಿವೇಚನೆಗಳು ಇದರಂತೆಯೇ ನಿತ್ಯಜೀವನದ ಕ್ಲೇಶಪರಿಹಾರಕ್ಕೆ ಅನವಶ್ಯಕವಾಗಿದ್ದು, ವೈದ್ಯನಲ್ಲಿ ರೋಗಿಯು ಕೇಳುವ ತಲೆಹರಟೆಯ ಪ್ರಶ್ನೆಯಂತೆ ತತ್ತ್ವವಿವೇಚನೆಯು ವೃಥಾ ಕಾಲಹರಣವೆಂದು ಗೌತಮಬುದ್ಧನ ಆಶಯವಾಗಿದೆ. ಈಗಲೂ ಇದನ್ನು ಅನುಮೋದಿಸುವವರು ಬಹಳ ಜನರಿರುವರು. ಆದರೆ ಇವರೆಲ್ಲರೂ ಇತರ ಆರ್ಥಿಕ ರಾಜಕೀಯ ವಿಷಯಗಳಲ್ಲಿ ಸೂಕ್ಷ್ಮ ವಿವೇಚನೆಯ ಆವಶ್ಯಕತೆಯನ್ನು ಒಪ್ಪುತ್ತಾರೆ. ಸಮಸ್ಯೆಯ

ಮೂಲಭೂತ ಅಂಶಗಳನ್ನು ತಿಳಿಯದೆ ಮಾಡಿಕೊಳ್ಳುವ ಪರಿಹಾರಕಾರ್ಯವು ವಿಪರೀತ ಸ್ಥಿತಿಗೆ ಕಾರಣವಾಗುತ್ತದೆಂಬುದನ್ನು ಎಲ್ಲರೂ ಅಂಗೀಕರಿಸುತ್ತಾರೆ. ದೇಹರಚನೆಯ ಸ್ಥಿತಿಯನ್ನು ಸರಿಯಾಗಿ ತಿಳಿಯದ, ಔಷಧದ ಗುಣಧರ್ಮಗಳನ್ನು ಅರಿಯದ ವೈದ್ಯರಿಂದ ಚಿಕಿತ್ಸೆಯನ್ನು ಯಾರೂ ಪಡೆದುಕೊಳ್ಳರು. ಚಿಕ್ಕ ಪುಟ್ಟ ವ್ಯವಹಾರ ಕೈಗೊಳ್ಳುವಾಗಲೂ ಅದರ ಪೂರ್ವಾಪರಗಳನ್ನು ಅರಿಯಲು ಆತುರರಾಗಿರುವ ನಾವು, ನಮ್ಮ ಇರವಿನ ನಿಜಸ್ಥಿತಿಯನ್ನು ತಿಳಿದುಕೊಳ್ಳುವುದೂ ಅನವಶ್ಯಕವಾದ ಸಂಗತಿ ಎನಿಸುವುದೆ? ನಮ್ಮ ಜೀವನದ ಹಿನ್ನೆಲೆಯನ್ನೂ ಜಗತ್ತಿನ ಮೂಲಭೂತ ತತ್ತ್ವವನ್ನೂ ಅರಿತುಕೊಳ್ಳುವುದರಿಂದ ನಮ್ಮ ಜೀವನವನ್ನು ಹೇಗೆ ರೂಪಿಸ ಬೇಕೆನ್ನುವುದರ ತಿಳುವಳಿಕೆಯು ನಮಗೆ ಮೂಡುವದು. ನಮ್ಮ ಸಾಂಸಾರಿಕ ವೇದನೆಯ ಮೂಲವೆಲ್ಲಿದೆ ಎಂಬುದರ ಅರ್ಥವೂ ನಮಗಾಗುವುದು. ದೇವರ ಅಸ್ತಿತ್ವವನ್ನು ಮನಗಂಡು, ಅದರ ಆಧಾರದಲ್ಲಿ ರೂಪುಗೊಳಿಸುವ ಬಾಳುವೆಗೂ ಪರಮಾತ್ಮನಲ್ಲಿ ವಿಶ್ವಾಸವಿಲ್ಲದ ಭೌತಿಕಪ್ರಧಾನತೆಯ ಜೀವನಕ್ಕೂ ಮಹದಂತರ ವಿರಲು ಸಾಧ್ಯವಿದೆ. ನಮ್ಮ ಜೀವನದ ರೀತಿ, ಧೋರಣೆಗಳ ದಿಶೆಗಳನ್ನೇ ಬದಲಿಸಬಲ್ಲ, ನಮ್ಮ ನಡತೆಗಳಿಗೆ ಹೊಸ ಹೊಸ ಮೌಲ್ಯಗಳನ್ನು ಕಲ್ಪಿಸುವಂತಹ ತಾತ್ತ್ವಿಕ ವಿವೇಚನೆಗಳನ್ನು ಅಷ್ಟು ಲಘುವಾದ ದೃಷ್ಟಿಯಲ್ಲಿ ಹೀಗ್ಳೆಯುವುದು ಸರಿಯಲ್ಲ. ನಮ್ಮ ಬಾಳುವೆಯನ್ನು ರೂಪಿಸುವ ಮೊದಲು, ಅದರ ಹಿನ್ನೆಲೆಯೆನಿಸಿದ ಎಲ್ಲ ಸಂಗತಿಗಳನ್ನೂ ಸರಿಯಾಗಿ ವಿಮರ್ಶಿಸಿ, ನಿರ್ಧರಿಸಿ ಒಂದು ನಿರ್ದಿಷ್ಟ ಧೋರಣೆಯನ್ನು ಸ್ವೀಕರಿಸಲು ಪೂರ್ಣ ಅವಕಾಶವೂ ಸ್ವಾತಂತ್ರ್ಯವೂ ಮಾನವನಿಗೆ ದೊರೆಯಲೇಬೇಕು. ಆದುದರಿಂದಲೇ ಸ್ವತಂತ್ರ ದೃಷ್ಟಿಯ ತಾತ್ತ್ವಿಕ ವಿಮರ್ಶೆಯ ವಿವಿಧ ಪದ್ಧತಿ, ಪರಂಪರೆಗಳು ಭಾರತದಲ್ಲಿ ಉದಯವಾಗಲು ಅವಕಾಶ ದೊರೆತಿದೆ. ಈ ದೃಷ್ಟಿಯಿಂದಲೇ ಶ್ರೀಕೃಷ್ಣನು ಜಡ, ಜೀವ, ಪರಮಾತ್ಮರ ನೈಜ ಸ್ವರೂಪವನ್ನೂ ಅವುಗಳಲ್ಲಿರುವ ಪ್ರತ್ಯೇಕತೆ ಹಾಗೂ ಪರಸ್ಪರ ಸಂಬಂಧವನ್ನೂ ತನ್ನ ಸರ್ವಗ್ರಾಹಿ ದೃಷ್ಟಿಯಿಂದ ವಿಶದೀಕರಿಸಿದ್ದಾನೆ.

## ಸಂಸಾರಬಂಧನದ ಮೂಲ

ಜೀವ-ಜಡ-ಪರಮಾತ್ಮರೆಂದು ಮೂರು ವಿಧವಾಗಿ ವಿಭಕ್ತವಾದ ಈ

ಪ್ರಪಂಚದಲ್ಲಿ ಸಂಸಾರಬಂಧನಕ್ಕೆ ಒಳಗಾಗುವವನು ಜೀವನೊಬ್ಬನೇ. ಪರಿಪೂರ್ಣನೂ ಆನಂದಮಯನೂ ಆದ ಪರಬ್ರಹ್ಮನಲ್ಲಿಯೂ ಚೈತನ್ಯ ಶೂನ್ಯವಾದ ಜಡವರ್ಗದಲ್ಲಿಯೂ ದುಃಖ, ಮೋಹ, ಅಜ್ಞಾನಗಳ ಪ್ರಸಕ್ತಿಯೇ ಇಲ್ಲ. ಸಂಸಾರದ ಈ ದುಃಖಗರ್ತದಲ್ಲಿ ಬಿದ್ದು ಜನನ-ಮರಣ ಪರಿವರ್ತಗಳಲ್ಲಿ ಸಿಲುಕಿ ತೊಳಲಾಡುತ್ತ ಮುಕ್ತಿಗಾಗಿ ಚಡಪಡಿಸುವವನೂ ಜೀವನೇ. ಜ್ಞಾನಾನಂದಮಯನಾದ ಜೀವನಲ್ಲಿ ಅವನ ಸ್ವಭಾವಕ್ಕೆ ವ್ಯತಿರಿಕ್ತವಾಗಿ ಈ ಅಜ್ಞಾತ ದುಃಖಗಳ ಉಪದ್ರವವು ಸಂಭವಿಸಲು ಕಾರಣವೇನು? ಎಂಬುದನ್ನು ನಾವು ಪರಿಶೀಲಿಸಬೇಕು. ಚಿದಾನಂದ ಘನನಾದ ಭಗವಂತನ ಸಾಧರ್ಮ್ಯವನ್ನು ಹೊಂದುವುದೇ ಜೀವರ ಅಂತಿಮ ಲಕ್ಷ್ಯವಾಗಿರುವಾಗ ಅದರ ತೀರ ವಿಪರೀತ ಸ್ಥಿತಿಯನ್ನು ಜೀವನು ಹೊಂದಿರುವುದೆಂತು ಎಂಬುದೂ ಒಂದು ಸಮಸ್ಯೆಯೇ ಆಗಿದೆ. ಇದರ ವಿವೇಚನೆಯು ಈ ದುರ್ದಶೆಯ ವಿಮೋಚನೆಗೆ ತುಂಬ ಸಹಾಯಕವಾಗುವುದು.

ಚೈತನ್ಯ, ಆನಂದಗಳು ಜೀವನಲ್ಲಿ ಸ್ವಭಾವತಃ ಅಡಕವಾಗಿದ್ದರೂ ಪ್ರಕೃತಿಯ ಘನ ಆವರಣದಲ್ಲಿ ಅವೆಲ್ಲವೂ ಮುಚ್ಚಿಹೋಗಿವೆ. ಜೀವನು ತನಗೆ ಮೀರಿದ ಶಕ್ತಿಯೆನಿಸಿದ ಪ್ರಕೃತಿಯ ಪ್ರಭಾವಕ್ಕೆ ಒಳಗಾಗಿ ತನ್ನನ್ನೇ ತಾನು ಕಳೆದುಕೊಂಡಂತಹ ರೀತಿಯಲ್ಲಿ ಈ ಸಾಂಸಾರಿಕ ದುರ್ದಶೆಗೆ ಗುರಿಯಾಗಿರು ವನು. ಪ್ರಕೃತಿಯ ಮರೆಯಲ್ಲಿ ಅವನ ವ್ಯಕ್ತಿತ್ವವು ಪೂರ್ಣವಾಗಿ ಅಡಗಿ ನಿಷ್ಪ್ರಭವಾಗಿದೆ. ಜೀವನು ಅನಾದಿಯಾಗಿರುವಂತೆ ಪ್ರಕೃತಿಯೂ ಅನಾದಿಯಾಗಿರುವುದರಿಂದ ಆರಂಭದಿಂದಲೂ ಇದರ ಆವರಣಕ್ಕೆ ಒಳಗಾಗಿಯೇ ಜೀವನಿರುವನು. ಚೈತನ್ಯಮಯವಾದ ಜೀವಾತ್ಮನ ಪ್ರಕಾಶವು ಪ್ರಕೃತಿಯ ರಾಹುಗ್ರಹಣದಿಂದ ಪೂರ್ಣವಾಗಿ ಆಚ್ಛಾದಿತವಾಗಿದೆ. ಪ್ರಕೃತಿಯು ಸತ್ತ್ವ, ರಜಸ್ಸು, ತಮಸ್ಸುಗಳೆಂಬ ತನ್ನ ಬಣ್ಣಗಳಿಂದ ಜೀವನ ನೈಜರೂಪವನ್ನು ಮುಚ್ಚಿ ಅಲ್ಲಿ ವಿಕೃತರೂಪವನ್ನು ಚಿತ್ರಿಸಿದೆ. ಬಟ್ಟೆಯು ಬಿಳಿ ಇದ್ದರೂ ಮಣ್ಣಿನ ಸಂಪರ್ಕದಿಂದ ಅದು ಕಪ್ಪಾಗಿಯೇ ತೋರುವಂತೆ ಪ್ರಕೃತಿಯ ಅನಾದಿ ಸಂಪರ್ಕದಿಂದ ಜೀವನು ಈ ಅಸ್ವಾಭಾವಿಕ ವಿಕಾರಗಳನ್ನು ಪಡೆದಿರುತ್ತಾನೆ. ಹೀಗೆ ಪ್ರಕೃತಿಯು ಜೀವನ ಮೇಲೆ ಬೀರಿದ ಪ್ರಭಾವವೇ ಈ ಸಂಸಾರವಾಗಿದ್ದು ಜೀವ,

ಪ್ರಕೃತಿಗಳಿಬ್ಬರನ್ನೂ ಮೀರಿ ನಿಂತ ಸರ್ವೋತ್ತಮನಾದ ಪರಮಾತ್ಮನ ಅನುಗ್ರಹದಿಂದಲೇ ಇದರ ಬಿಡುಗಡೆಯಾಗಬಲ್ಲದು.

ಜೀವಾತ್ಮನ ಈ ಅನಾದ್ಯನಂತವಾದ ಜೀವನದಲ್ಲಿ ಪ್ರಕೃತಿ-ಪರಮಾತ್ಮರ ಪಾತ್ರವು ಈ ತೆರನಾಗಿದೆ. ಪ್ರಕೃತಿಯ ಸಂಪರ್ಕವು ತ್ರಿಗುಣ ಪರಿಣಾಮಗಳಾದ ಸುಖದುಃಖಾದಿ ವಿಕೃತಿಗಳನ್ನು ಜೀವನದಲ್ಲಿ ನಿರ್ಮಿಸಿದರೆ ಭಗವಂತನ ಸಂಪರ್ಕವು ಈ ವಿಕಾರಗಳನ್ನು ದಾಟಿಸಿ ಗುಣಾತೀತವಾದ ಸ್ವರೂಪ ಸ್ಥಿತಿಯನ್ನು ಅವನಿಗೆ ತಂದುಕೊಡುತ್ತದೆ. ಪ್ರಕೃತಿ-ಪರಮಾತ್ಮರ ಸ್ವರೂಪವೂ ಅವರಿಬ್ಬರ ಸಂಬಂಧದಿಂದ ನಮ್ಮಲ್ಲಿ ಆಗಬಹುದಾದ ಪ್ರತಿಕ್ರಿಯೆಗಳೂ ಈ ರೀತಿಯಾಗಿವೆ. ಒಂದು ಸಂಸಾರಬಂಧನದ ಮೂಲವಾಗಿದೆ. ಇನ್ನೊಂದು ಇದರ ಬಿಡುಗಡೆಗೆ ಸಾಧನವಾಗಿದೆ. ಹೀಗೆ ಜಡ-ಪರಮಾತ್ಮರಿಂದ ಪ್ರತ್ಯೇಕವಾದ ತನ್ನ ವ್ಯಕ್ತಿತ್ವವನ್ನು ಅರಿತುಕೊಂಡು ಪರಮಾತ್ಮನ ಭಕ್ತಿ ಹಾಗೂ ಅನುಗ್ರಹಬಲದಿಂದ ಜಡದ ಪ್ರಭಾವಲಯದಿಂದ ತಪ್ಪಿಸಿಕೊಂಡು ಭಗವಂತನ ಅಮೃತಮಯ ವರ್ತುಲದಲ್ಲಿ ಸೇರಿ ನಮ್ಮ ಪೂರ್ಣ ವ್ಯಕ್ತಿತ್ವದ ಅಭಿವ್ಯಕ್ತಿಯನ್ನು ಹೊಂದುವವರೆಗೆ ನಮ್ಮ ಜೀವನದ ಸಾಧನ ವ್ಯವಸಾಯಗಳು ಅವಿಶ್ರಾಂತವಾಗಿ ನಡೆಯಬೇಕು.

## ಜೀವನದಲ್ಲಿ ಗುಣತ್ರಯದ ಪ್ರಭಾವ

ಪ್ರಕೃತಿಯು ತನ್ನ ಗುಣತ್ರಯದಿಂದ ಜೀವರ ಮೇಲೆ ಮಾಡುವ ಪರಿಣಾಮವೂ ಒಂದೇ ರೀತಿ ಇರುವುದಿಲ್ಲ. ತಮೋಗುಣರ ಪ್ರಾಬಲ್ಯವು ಆಲಸ್ಯ, ಪ್ರಮಾದ, ವ್ಯಾಮೋಹ ಮೊದಲಾದ ದುರ್ಗುಣಗಳಿಗೆ ದಾರಿಯಾದರೆ, ಬಯಕೆ ಬವಣೆಗಳಿಂದಲೂ ಕೋಪ ತಾಪಗಳಿಂದಲೂ ಉದ್ರಿಕ್ತವಾದ ಜೀವನವೇ ರಜೋಗುಣದ ಕೊಡುಗೆಯಾಗಿದೆ. ಜ್ಞಾನ, ವಿವೇಕ, ಶೀಲಗಳ ಸೆಲೆಯಾದ ಸತ್ತ್ವಗುಣವೇ ನಮ್ಮ ಬಾಳಿನ ಬೆಳಕಾಗಿ ನಮ್ಮನ್ನು ಗುಣಾತೀತವಾದ ನಮ್ಮ ನೈಜಪೂರ್ಣತೆಯ ಕಡೆಗೆ ಒಯ್ಯುವ ಕೈದೀವಿಗೆಯಾಗಿದೆ. ರಜಸ್ಸು, ತಮಸ್ಸುಗಳನ್ನು ಮೆಟ್ಟಿನಿಂತವನೆ ಸತ್ತ್ವದ ಎತ್ತರದ ಮಟ್ಟವನ್ನು ಮುಟ್ಟಬಲ್ಲನು. ತಮೋಗುಣದಿಂದ ಕರ್ತವ್ಯದಲ್ಲಿ ಅನಾಸಕ್ತಿಯುಂಟಾಗುವುದಾದರೆ, ರಜೋಗುಣದಿಂದ ಕ್ಷುದ್ರಾಶೆ ವ್ಯಾಮೋಹಗಳಿಗೊಳಗಾಗಿ ಕಾರ್ಯಗಳನ್ನೆಸಗುವನು.

ಸತ್ತ್ವಗುಣದ ಬಲದಿಂದಲೇ ನಿಷ್ಕಾಮನೆಯಿಂದ ಸ್ವಕರ್ತವ್ಯವನ್ನು ಆಚರಿಸುವ ಸತ್‌ಪ್ರವೃತ್ತಿಯುಂಟಾಗುವುದು. ಜಡತತ್ತ್ವದ ಈ ಪರಿಣಾಮವಿಶೇಷಗಳನ್ನು ಅರಿತುಕೊಂಡು ಅದರಿಂದಲೂ ಒಳ್ಳೆಯದನ್ನು ಸಾಧಿಸಿ ಪರಮಾತ್ಮನನ್ನು ಮುಟ್ಟಲು ಸೇತುವೆಯನ್ನಾಗಿ ಪ್ರಕೃತಿಯನ್ನು ನಾವು ಬಳಸಿಕೊಳ್ಳಬೇಕು. ಪ್ರಕೃತಿಯನ್ನು ಯೋಗ್ಯ ರೀತಿಯಿಂದ ಉಪಯೋಗಿಸಿದರೆ ಪ್ರಕೃತಿಬಂಧ ವಿಮೋಚನೆಯ ಕಾರ್ಯವು ಅತ್ಯಂತ ಸುಗಮವಾಗುವುದು.

ಇಂದು ರಜೋಗುಣ, ತಮೋಗುಣಗಳ ಅತಿರೇಕವನ್ನೇ ನಾವು ಎಲ್ಲೆಡೆಗಳಲ್ಲಿಯೂ ನೋಡುತ್ತಿದ್ದೇವೆ. ಜನತೆಯನ್ನು ಇಂದು ಎರಡು ವಿಧವಾಗಿ ವಿಂಗಡಿಸಬಹುದು. ಒಂದು ರಾವಣವರ್ಗ, ಇನ್ನೊಂದು ಕುಂಭಕರ್ಣ ವರ್ಗ. ಅಧಿಕಾರ ಸಂಪತ್ತಿಗಾಗಿ ಹಾತೊರೆಯುವ ಜನರನ್ನು ನೋಡುವಾಗ ರಾವಣನ ಸ್ಮರಣೆಯೇ ನಮಗೆ ಆಗುತ್ತಿದೆ. ತ್ರೈಲೋಕ್ಯದಲ್ಲಿರುವ ಸುಂದರವಾದ ಅಪೂರ್ವವಾದ ವಸ್ತುಗಳೆಲ್ಲ ತನ್ನವಾಗಬೇಕೆಂಬುದು ರಾವಣನ ಲವಲವಿಕೆ. ಅದಕ್ಕಾಗಿ ಬಲಪ್ರಯೋಗ ಮತ್ತು ತನ್ನ ಪಾಶವೀ ಶಕ್ತಿಯ ಪ್ರದರ್ಶನವನ್ನು ಅವ್ಯಾಹತವಾಗಿ ರಾವಣನು ನಡೆಸಿದ್ದ. ಕೊನೆಯವರೆಗೂ ಅಧಿಕಾರಕ್ಕೆ ಅಂಟಿಕೊಳ್ಳುವ ದುರಾಶೆ ಮತ್ತು ಅಧಿಕಾರ ಸಂಪತ್ತುಗಳನ್ನು ಗಳಿಸುವ ಕುತಂತ್ರ ವಾಮಾಚಾರಗಳನ್ನು ಇಂದಿನ ಜನರಲ್ಲಿ ಧಾರಾಳವಾಗಿ ನಾವು ನೋಡುತ್ತಿದ್ದೇವೆ. ಪ್ರತಿಯೊಬ್ಬರಲ್ಲಿಯೂ ರಾವಣನ ಈ ಕಾರ್ಯಭಾರವು ಸ್ವಚ್ಛಂದವಾಗಿ ನಡೆದಿದೆ. ಪ್ರತಿಯೊಂದು ಕ್ಷೇತ್ರದಲ್ಲಿಯೂ ಇಂದು ನಡೆಯುತ್ತಿರುವ ಅನೈತಿಕ ಸ್ಪರ್ಧೆಗಳು ನಮ್ಮ ಜನರಲ್ಲಿ ಬೀಡು ಮಾಡಿರುವ ರಜೋಗುಣದ ಅತಿರೇಕವನ್ನು ವ್ಯಕ್ತಪಡಿಸುತ್ತವೆ. ಹೀಗೆ ರಾಜಸಪ್ರವೃತ್ತಿಯ ರಾವಣನು ಒಂದು ಕಡೆಯಿದ್ದರೆ ತಮೋಗುಣದ ಪ್ರತೀಕರಾದ ಆಲಸ್ಯದ ಪ್ರತಿಮೂರ್ತಿಗಳೆನಿಸಿದ ಕುಂಭಕರ್ಣರು ಇನ್ನೊಂದೆಡೆ. ನಮ್ಮ ಸನಾತನೀ ಮನೋವೃತ್ತಿಯ ಧಾರ್ಮಿಕ ಜನರನ್ನು ಈ ಗುಂಪಿನಲ್ಲಿ ಸೇರಿಸಬಹುದು. ವೈದಿಕ ಧರ್ಮದ ಮೇಲೆ ಇಡೀ ದೇಶದಲ್ಲಿ ಪ್ರಬಲ ಆಘಾತವಾಗುತ್ತಿದ್ದರೂ ಇದರ ಪರಿಹಾರದ ಬಗ್ಗೆ ತಮ್ಮ ಕರ್ತವ್ಯವಿದೆ ಎಂಬುದನ್ನು ಲಕ್ಷಿಸಿದೆ ತಮ್ಮ ಪಾಡಿಗೆ ತಾವು ಎಂಬ ಭಾವನೆಯಿಂದ, ಉದಾಸೀನ ವೃತ್ತಿಯಿಂದ ಇರುವ ಧಾರ್ಮಿಕ ಮುಖಂಡರನ್ನೂ ಕುಂಭಕರ್ಣರ ಗುಂಪಿಗೆ

ಸೇರಿಸಬೇಕಾಗಿದೆ. ಆಲಸ್ಯವೇ ಸಕಲ ದುರ್ಗುಣಗಳಿಗೆ ಮೂಲವಾಗಿದೆ. ತನ್ನ ಕಾಲನ್ನು ಪೂರ್ತಿಯಾಗಿ ಸರಿಯಾಗಿ ತೊಳೆಯಲು ನಳ ಮಹಾರಾಜನು ಅಜಾಗರೂಕತೆಯನ್ನು ತೋರಿದಾಗಲೇ ಅವನಲ್ಲಿ ಕಲಿಯ ಪ್ರವೇಶವಾಯಿತು. ಅನೇಕ ದಿನಗಳಿಂದ ನಳ ಮಹಾರಾಜನನ್ನು ಆಕ್ರಮಿಸಲು ಕಲಿಯು ಹೊಂಚುಹಾಕುತ್ತಿದ್ದನು. ಧರ್ಮಮೂರ್ತಿಯಾದ ಆ ಮಹಾರಾಜನ ಛಿದ್ರ ರಹಿತವಾದ ಸುಭದ್ರಜೀವನದಲ್ಲಿ ಕಲಿಗೆ ಪ್ರವೇಶ ಪಡೆಯಲು ಸ್ವಲ್ಪವೂ ಅವಕಾಶ ದೊರೆಯಲಿಲ್ಲ. ಕಾಲನ್ನು ತೊಳೆಯುವ ಸಂದರ್ಭದಲ್ಲಿ ನಳನು ತೋರಿದ ಆಲಸ್ಯವೇ ಕಲಿಯ ಪ್ರವೇಶದ್ವಾರವಾಯಿತು. ಮುಂದೆ ಕಲಿಯು ಅವನ ಇಡೀ ಜೀವನವನ್ನು ಆಕ್ರಮಿಸುವಂತಾಯಿತು. ಆಲಸ್ಯಕ್ಕೆ ನಮ್ಮ ಜೀವನದಲ್ಲಿ ಅಣುಮಾತ್ರವಾದರೂ ಪ್ರವೇಶ ದೊರಕಿದರೆ ಸಕಲ ದುರ್ಗುಣಗಳಿಗೂ ಆಹ್ವಾನ ಬಂದಂತೆ. ಹೀಗೆ ಆಲಸ್ಯ ದುರಾಶೆಗಳಿಂದ ತುಂಬಿದ ಈ ರಾವಣ-ಕುಂಭಕರ್ಣರ ರಾಜ್ಯದಲ್ಲಿ ವಿಭೀಷಣನಂತಹ ಸಾತ್ತ್ವಿಕ ಶಕ್ತಿಯು ನಮಗೆ ಎಲ್ಲಿಯೂ ಗೋಚರಿಸುವುದಿಲ್ಲ. ಈ ರಜೋಗುಣ ತಮೋಗುಣಗಳ ದಮನವಾಗಿ ಪ್ರಕೃತಿಯಲ್ಲಿರುವ ಸತ್ತ್ವಗುಣದ ವಿಜೃಂಭಣೆಯು ಈಗ ಲೋಕದಲ್ಲಿ ನಡೆಯಬೇಕಾದ ಮುಖ್ಯ ಕಾರ್ಯವಾಗಿದೆ. ಪ್ರಕೃತಿಯು ಬಂಧಕವಾದರೂ ಅದರಲ್ಲಿ ಅಡಕವಾದ ಸತ್ತ್ವಗುಣದ ಸರಿಯಾದ ಲಾಭವನ್ನು ಪಡೆದು ಈ ಸತ್ತ್ವಗುಣದ ಸೇತುವೆಯಲ್ಲಿ ಪರಮಾತ್ಮನ ಕಡೆಗೆ ಸಾಗುವ ಸಾಹಸಪೂರ್ಣ ಯಾತ್ರೆಯನ್ನು ಜೀವನು ಕೈಗೊಳ್ಳಬೇಕು. ಹದಿನಾಲ್ಕನೆಯ ಅಧ್ಯಾಯವು ಈ ರೀತಿಯಾಗಿ ಜೀವನ ಮೇಲೆ ಆಗುವ ಪ್ರಕೃತಿಯ ಪರಿಣಾಮ ಪ್ರಭಾವಗಳನ್ನು ವಿಶ್ಲೇಷಿಸಿ, ಜೀವ-ಪ್ರಕೃತಿಗಳ ಪರಸ್ಪರ ಸಂಬಂಧವನ್ನು ವಿವರಿಸಿ, ಸತ್ತ್ವಗುಣದ ಸಹಾಯದಿಂದ ಜೀವನು ಪ್ರಕೃತಿಯನ್ನು ಗೆದ್ದು ಗುಣಾತೀತನಾಗಿ ಹೇಗೆ ಪರಮಸಿದ್ಧಿಯನ್ನು ಪಡೆಯಬಹುದೆಂಬುದನ್ನು ಪ್ರತಿಪಾದಿಸಿದೆ.

## ಜಗದ್ ವೃಕ್ಷದ ಸ್ವರೂಪ

ಇಷ್ಟರವರೆಗೆ ವ್ಯಷ್ಟಿರೂಪದಿಂದ ಪ್ರಪಂಚವನ್ನು ನಿರೂಪಿಸಿ ಇನ್ನು ಹದಿನೈದನೆಯ ಅಧ್ಯಾಯದಲ್ಲಿ ಸಮಷ್ಟಿರೂಪದಲ್ಲಿ ಸರ್ವಸಂಗ್ರಾಹಕವಾಗಿ

ಜಗತ್ತಿನ ವರ್ಣನೆಯನ್ನು ಮಾಡಲಾಗಿದೆ. ಜಡ-ಜೀವ-ಪರಮಾತ್ಮರೆಂದು ಮೂರು ವಿಧವಾಗಿ ವಿಂಗಡಿಸಲಾದ ಈ ವಿಶ್ವದಲ್ಲಿ ಪರಮಾತ್ಮನೇ ಸರ್ವೋತ್ತಮವಾದ ವಸ್ತು. ಅದರಂತೆ ಜೀವವರ್ಗದಲ್ಲಿ ಶ್ರೀತತ್ತ್ವವು ಶ್ರೇಷ್ಠವಾಗಿದ್ದರೆ ಜಡವರ್ಗದಲ್ಲಿ ಪ್ರಕೃತಿಯು ಪ್ರಧಾನವಾಗಿ ಪರಿಗಣಿತವಾಗಿದೆ. ಇಡೀ ವಿಶ್ವವು ಈ ಮೂರು ತತ್ತ್ವಗಳಲ್ಲಿ ಪ್ರತಿಷ್ಠಿತವಾಗಿದ್ದು, ಇವುಗಳಿಂದಲೇ ಜಗತ್ತಿನ ನಿರ್ಮಾಣವಾಗಿದೆ. ಮಡಿಕೆಗೆ ಮಣ್ಣಿನಂತೆ ಜಡಪ್ರಕೃತಿಯು ಜಗತ್ತಿಗೆ ಉಪಾದಾನ ವಸ್ತುವಾಗಿದ್ದರೆ, ಚಿತ್‌ಪ್ರಕೃತಿ ಎನಿಸಿದ ಲಕ್ಷ್ಮೀದೇವಿಯು ಅಭಿಮಾನಿ ದೇವತೆಯಾಗಿಯೂ ಪರಮಪುರುಷನಾದ ಶ್ರೀ ನಾರಾಯಣನು ಅಂತರ್ಯಾಮಿಯಾಗಿಯೂ ಈ ಜಗತ್ತಿನ ಕರ್ತಾರರಾಗಿದ್ದಾರೆ. ಗೀತೆಯು ಜಗತ್ತನ್ನು ಒಂದು ಮಹಾವೃಕ್ಷಕ್ಕೆ ಹೋಲಿಸಿ ಪರಮಾತ್ಮ, ಶ್ರೀತತ್ವ ಹಾಗೂ ಪ್ರಕೃತಿ ಈ ಮೂರು ಈ ವೃಕ್ಷದ ಮೂಲಗಳೆಂದು ವರ್ಣಿಸಿದೆ. ಪಂಚಭೂತಗಳೂ ಅವುಗಳ ಅಭಿಮಾನಿಗಳಾದ ದೇವತೆಗಳೂ ಈ ಜಗದ್ವೃಕ್ಷದ ರೆಂಬೆ ಕೊಂಬೆಗಳು. ಪರಮಾತ್ಮನ ಭಕ್ತಿ ಆರಾಧನೆಗಳಿಂದಲೇ ಜಗತ್ತಿಗೆ ತೃಪ್ತಿ ಹಾಗೂ ಬೆಳವಣಿಗೆಯಿದೆ. ಮರದ ಬುಡಕ್ಕೆ ನೀರೆರೆಯದೆ ಕೊಂಬೆಗಳಿಗೆ ಮಾತ್ರ ನೀರು ಹಾಕುವಂತಹ ಹುಚ್ಚು ಪ್ರವೃತ್ತಿಯಲ್ಲಿ ನಾವು ತೊಡಗಿದ್ದೇವೆ. ಜಗತ್ತಿನ ಮೂಲಶಕ್ತಿಯಾದ ಪರಮಾತ್ಮನನ್ನು ಮರೆತು ಪಾಂಚಭೌತಿಕ ಆರಾಧನೆಯಲ್ಲಿಯೂ ಇತರ ದೇವತೆಗಳ ಪೂಜೆಯಲ್ಲಿಯೂ ನಾವು ತತ್ಪರರಾಗಿರುವೆವು. ಮರದ ಬುಡಕ್ಕೆ ನೀರೆರೆಯುವುದರಿಂದ ಅದರ ಶಾಖೋಪಶಾಖೆಗಳು ಫಲಪುಷ್ಪಭರಿತವಾಗಿ ಸಮೃದ್ಧಿಯಿಂದ ಎದ್ದು ನಿಲ್ಲುವಂತೆ ಪರಮಾತ್ಮನಿಗೆ ಗೈಯುವ ಪೂಜೆ ಆರಾಧನೆಗಳಿಂದ ಸಕಲ ದೇವತೆಗಳೂ ಸರ್ವಭೂತಗಳೂ ತೃಪ್ತಿಹೊಂದುವವು.

**ಯಥಾ ಹಿ ಸ್ಕಂಧಶಾಖಾನಾಂ**
**ತರೋರ್ಮೂಲಾವಸೇಚನಮ್ ।**
**ಏವಮಾರಾಧನಂ ವಿಷ್ಣೋಃ**
**ಸರ್ವೇಷಾಮಾತ್ಮನಶ್ಚ ಹಿ ॥** - ಭಾಗವತ

ವಿಷಯ ಪದಾರ್ಥಗಳೇ ಈ ವಿಶ್ವವೃಕ್ಷದ ಚಿಗುರೆಲೆಗಳಾಗಿದ್ದರೆ ವೇದಗಳೇ ಇದರ ಎಲೆಗಳಾಗಿವೆ. ವೈಷಯಿಕ ವಸ್ತುಗಳು ತಮ್ಮ ಆಕರ್ಷಕ ವರ್ಣಗಳಿಂದ

ಚಿಗುರೆಲೆಗಳಂತೆ ನಮ್ಮ ಮನಸ್ಸನ್ನು ಸೆಳೆಯುತ್ತವೆ. ಆದರೆ ಅವುಗಳಲ್ಲಿ ಅಂತಹ ಸತ್ತ್ವರುಚಿಗಳಿಲ್ಲ. ಜಗತ್ತಿನ ಶ್ರೇಷ್ಠ ಫಲಗಳನ್ನು ಸವಿಯಬಯಸುವವರು ಈ ವಿಷಯಕಿಸಲಯಗಳನ್ನು ಕಿತ್ತು ಹರಿದು ದುರುಪಯೋಗಪಡಿಸಿದಲ್ಲಿ ಮುಂದೆ ದೊರೆಯಬಹುದಾದ ಮಧುರಫಲಗಳಿಗೆ ಎರವಾಗುತ್ತಾರೆ. ಬೆಳೆದ ಎಲೆಗಳಂತಿರುವ ವೈದಿಕತತ್ತ್ವಜ್ಞಾನವೇ ಜೀವನದ ಮಹಾಫಲವನ್ನು ನಮಗೆ ಒದಗಿಸುವುದು.

**ಛಂದಾಂಸಿ ಯಸ್ಯ ಪರ್ಣಾನಿ ।**

ಎಲೆಗಳಿಲ್ಲದ ಒಣಗಿದ ಮರದಿಂದ ಹಣ್ಣುಗಳನ್ನು ನಾವು ನಿರೀಕ್ಷಿಸಲಾರೆವು. ವೈದಿಕತತ್ತ್ವಜ್ಞಾನಕ್ಕೆ ಎರವಾದ ಶುಷ್ಕಜೀವನದಲ್ಲಿ ಮೋಕ್ಷದ ಅಮೃತಫಲವನ್ನು ಅದೆಂತು ಕಾಣಬಲ್ಲೆವು? ಹೀಗೆ ಭೋಗಸಾಧನಗಳಿಂದಲೂ ಯೋಗಸಾಮಗ್ರಿಗಳಿಂದಲೂ ತುಂಬಿದ ವೈವಿಧ್ಯಪೂರ್ಣವಾದ ಈ ವಿಶಾಲ ವಿಶ್ವವೃಕ್ಷವನ್ನು ನಾವು ನಿರೀಕ್ಷಿಸಬೇಕು. ಕಾರ್ಯಕಾರಣಗಳನ್ನು ವ್ಯಾಪಿಸಿ ನಿಂತ ಈ ಪಾರಲೌಕಿಕ ಪ್ರಪಂಚದ ವಿಸ್ತಾರವಾದ ಬೆಳವಣಿಗೆಯು ನಮ್ಮನ್ನು ಅಚ್ಚರಿಗೊಳಿಸುವುದು. ಅದರ ಆದಿ ಮಧ್ಯ ಅಂತ್ಯಗಳನ್ನು ತಿಳಿಯಲೂ ಅದರ ವಿಸ್ತಾರವನ್ನು ಅಳೆಯಲೂ ನಮ್ಮಿಂದ ಆಗುತ್ತಿಲ್ಲ. ಈ ಜಗತ್ತನ್ನು ವಿಶ್ಲೇಷಿಸಿ ನೋಡಿ ಇದರಲ್ಲಿ ಅಡಕವಾಗಿರುವ ಪ್ರಕೃತಿ, ಜೀವ ಪರಮಾತ್ಮರನ್ನು ವಿಭಜಿಸಿ ನೋಡಿದಾಗಲೇ ನಾವು ಸರಿಯಾದ ತತ್ತ್ವಜ್ಞಾನವನ್ನು ಪಡೆಯುವೆವು. ಜ್ಞಾನದ ಹರಿತವಾದ ಚೂರಿಯಿಂದ ಈ ಜಗತ್ತನ್ನು ಬಿಡಿಸಿ ಬಿಡಿಸಿ ನಿರೀಕ್ಷಿಸಿದಾಗಲೇ ಜಗತ್ತನ್ನು ಎಲ್ಲೆಡೆಗಳಲ್ಲಿಯೂ ವ್ಯಾಪಿಸಿರುವ ಸೂಕ್ಷ್ಮನಾದ ಜಗನ್ಮೂಲನಾದ ಪರಮಾತ್ಮನನ್ನು ಅರಿಯುವೆವು. ವಿಷಯಪದಾರ್ಥಗಳ ಸಂಪರ್ಕದಿಂದ ಮೊಂಡಾದ ಬುದ್ಧಿಯು ಜಗತ್ತನ್ನು ಪೃಥಕ್ಕರಿಸಿ ನೋಡುವ ವಿವೇಕ ಶಕ್ತಿಯನ್ನು ಕಳೆದುಕೊಂಡಿರುತ್ತದೆ. ವಿಷಯಾಸಕ್ತಿಯಿಂದ ರಹಿತವಾದ ಸುದೃಢವಾದ ಜ್ಞಾನದಿಂದ ಪ್ರಪಂಚದ ವಸ್ತುಗಳನ್ನೆಲ್ಲ ಬಿಡಿಬಿಡಿಯಾಗಿ ಬೇರ್ಪಡಿಸಿ ಅರಿತು ಇವುಗಳಲ್ಲಿ ಹುದುಗಿರುವ ಪ್ರಧಾನವಾದ ಭಗವತ್ತತ್ತ್ವವನ್ನು ತಿಳಿಯಬೇಕು. ಹಾಲಲ್ಲಿ ಬೆಣ್ಣೆಯು ಹುದುಗಿರುವಂತೆ ಕಲ್ಲು ಮಣ್ಣುಗಳಲ್ಲಿ ಚಿನ್ನವು ಅಡಗಿರುವಂತೆ ಈ ದೃಶ್ಯಪ್ರಪಂಚವನ್ನೆಲ್ಲ ಭಗವಂತನು ಅವ್ಯಕ್ತರೂಪದಿಂದ ವ್ಯಾಪಿಸಿರುವನು. ಎಲ್ಲ ಕಡೆಗಳಲ್ಲಿಯೂ ಅಡಗಿರುವ ಪರಮಾತ್ಮನನ್ನು ಹುಡುಕುವುದರಿಂದಲೇ ನಮ್ಮ

ಜ್ಞಾನವು ಪರಿಪೂರ್ಣತೆಯನ್ನು ಪಡೆಯುವುದು. ವಿಶ್ವವೃಕ್ಷದ ಆಧಾರಭೂಮಿಯೂ ವಿಶ್ವವೃಕ್ಷದ ಶಾಖೋಪಶಾಖೆಗಳಲ್ಲೆಲ್ಲ ಹರಡಿ ಅದರ ಪೋಷಕಶಕ್ತಿಯೂ ಆಗಿರುವ ಪರಮಾತ್ಮನನ್ನೇ ಅರಿಯದ ಜ್ಞಾನದಲ್ಲಿ ಸಮಗ್ರತೆಯೆಲ್ಲಿ? ಮಣ್ಣಲ್ಲಿ ಬೆರೆತಿರುವ ಚಿನ್ನವನ್ನು ಕಂಡುಹಿಡಿಯುವ ಕೌಶಲ ಸೂಕ್ಷ್ಮದೃಷ್ಟಿಗಳಿಂದಲೇ ಜಗತ್ತಿನಲ್ಲಿರುವ ಬ್ರಹ್ಮವನ್ನು ನಾವು ಅನ್ವೇಷಿಸಬಲ್ಲೆವು. ಅನಂತಶಕ್ತಿಶಾಲಿಯೂ ಪರಿಪೂರ್ಣ ಗುಣಾಕರನೂ ಆದ ಪರಮಾತ್ಮನ ದರ್ಶನದಿಂದಲೇ ನಮ್ಮ ಜೀವನದ ಅನಾದಿಯಾದ ಈ ಹೋರಾಟ, ಕ್ಲೇಶ, ವಿಕಾರಗಳಿಗೆ ಚಿರವಿಶ್ರಾಂತಿಯು ದೊರೆಯುವುದು. ಅವನನ್ನು ಹೊಂದುವುದರಿಂದಲೇ ನಾವು ಈ ಪ್ರಪಂಚಯಾತ್ರೆಯ ಗುರಿಯನ್ನು ತಲುಪಿದಂತಾಗುವುದು.

## ಮಮೈವಾಂಶೋ ಜೀವಲೋಕೇ

ಈ ಜಗದ್ವೃಕ್ಷದ ಸಾರಸರ್ವಸ್ವವೇ ಪರಮಾತ್ಮನಾಗಿದ್ದು ಅವನಿಲ್ಲದೆ ಈ ಜಗತ್ತಿಗೆ ಅಸ್ತಿತ್ವ ಪ್ರವೃತ್ತಿಗಳೇ ಇಲ್ಲ. ಅವನ ಶಕ್ತಿಗುಣಗಳು ಅಪಾರ ಅಪರಿಮಿತ. ಈ ವಿಶ್ವವೆಲ್ಲ ಅವನ ಶಕ್ತಿಯ ಅನಂತ ಸೂರ್ಯ ಮಂಡಲದ ಮುಂದೆ ಒಂದು ಚಿಕ್ಕ ಕಿಡಿ.

ಪಾದೋಽಸ್ಯ ವಿಶ್ವಾ ಭೂತಾನಿ - ಪುರುಷಸೂಕ್ತ

ಅವನು ಜ್ಞಾನಗುಣಗಳ ಅನಂತಸಾಗರನಾಗಿದ್ದರೆ ಜೀವನು ಬರೇ ಒಂದು ಬಿಂದು.

**ಮಮೈವಾಂಶೋ ಜೀವಲೋಕೇ**
**ಜೀವಭೂತಃ ಸನಾತನಃ ।**

ಬ್ರಹ್ಮ ಮತ್ತು ಜಗತ್ತಿಗೂ ಜೀವ ಮತ್ತು ಈಶ್ವರನಿಗೂ ಇಂತಹ ಮಹದಂತರವಿದೆ. ಪರಮಾತ್ಮನ ಅನಂತಗುಣಗಳ ದೃಷ್ಟಿಯಲ್ಲಿ ಜೀವನು ಬರೇ ಅಂಶ ಮಾತ್ರ. ಅವನ ಪೂರ್ಣತೆಯ ಮುಂದೆ ಜೀವ ಮತ್ತು ಜಗತ್ತಿನ ಅಲ್ಪತೆಯ ದರ್ಶನವಾಗುವುದು. ಜೀವರು ಬ್ರಹ್ಮನ ಒಂದು ಭಾಗವೆಂದೂ ಕೆಲವರ ಕಲ್ಪನೆ ಇದೆ. ಪ್ರಕೃತಿಯ ಹಿಡಿತಕ್ಕೆ ಸಿಲುಕಿ ದುಃಖ, ಅಜ್ಞಾನ, ಮೋಹಗಳಿಗೆ ಒಳಗಾಗಿ ಸಂಕಟಗ್ರಸ್ತನಾದ ಜೀವನು ಪ್ರಕೃತಿಗೆ ಅತೀತನಾದ ಪರಮಾತ್ಮನ ಒಂದು

ಭಾಗವಾಗಿರುವುದು ಹೇಗೆ ಸಾಧ್ಯ? ಅಪೂರ್ಣರೂ ವಿಕಾರವಶರೂ ಆದ ಜೀವರೆಲ್ಲರೂ ಬ್ರಹ್ಮನ ತುಣುಕುಗಳಾಗಿದ್ದಲ್ಲಿ ಅವನ ಪೂರ್ಣತೆ, ನಿರ್ವಿಕಾರತೆಗಳಿಗೆ ತಿಲಾಂಜಲಿಯನ್ನೇ ಇತ್ತಂತಾಗುವುದು. ಅಖಂಡ ಬ್ರಹ್ಮನಿಗೆ ಅನೇಕ ಅಂಶಗಳನ್ನು ಒಪ್ಪಿ ಅವುಗಳನ್ನೆಲ್ಲ ಪ್ರಕೃತಿಯ ಬವಣೆಗೆ ಒಳಪಡಿಸುವುದೆಂದರೆ ಪರಬ್ರಹ್ಮತತ್ತ್ವವನ್ನೇ ನಿರಾಕರಿಸಿದಂತಾಗುವುದು. ಆದುದರಿಂದ ಜೀವನು ಬ್ರಹ್ಮನ ಅನಂತಗುಣರಾಶಿಗಳ ಎದುರಿಗೆ ಒಂದು ಕಣಮಾತ್ರವೆಂಬ ಅಭಿಪ್ರಾಯ ದಿಂದಲೇ ಜೀವನನ್ನು ಬ್ರಹ್ಮನ ಅಂಶನೆಂದು ಇಲ್ಲಿ ಉಲ್ಲೇಖಿಸಲಾಗಿದೆ. ತನ್ನಲ್ಲಿರುವ ಹಣವು ಲಕ್ಷಾಧೀಶರಾದ ಶ್ರೀಮಂತರ ಸಂಪತ್ತಿನ ಒಂದಂಶ ಮಾತ್ರವೆಂದರೆ ಅವರ ತಿಜೋರಿಯಲ್ಲಿರುವ ಹಣದ ಒಂದು ಭಾಗವು ಈತನಲ್ಲಿದೆ ಎಂದು ಯಾರೂ ಭಾವಿಸುವುದಿಲ್ಲ. ತನ್ನ ಮತ್ತು ಆ ಶ್ರೀಮಂತರ ಸಂಪತ್ತುಗಳಲ್ಲಿರುವ ಅಂತರವನ್ನು ಸ್ಪಷ್ಟಪಡಿಸಲು 'ಅಂಶ' ಪದವನ್ನು ಇಲ್ಲಿ ಬಳಸಲಾಗಿದೆ. ಜೀವನು ಭಗವಂತನ ಅಂಶನೆಂಬುದನ್ನು ಈ ದೃಷ್ಟಿಯಿಂದಲೇ ನಾವು ಅರ್ಥಮಾಡಿಕೊಳ್ಳಬೇಕು. ಇರಲಿ, ಈ ಅಲ್ಪಶಕ್ತಿಯ ಜೀವನು ತನ್ನ ಕೈ ಮೀರಿದ ಪ್ರಕೃತಿಯ ಬಂಧನದಿಂದ ಬಿಡುಗಡೆ ಹೊಂದಲು ಶಕ್ತಿಯ ಮಹಾಮೇರುವಾದ ಅನಂತಗುಣಸಾಗರನಾದ ಪರಮಾತ್ಮನ ಆಸರೆಯನ್ನು ಪಡೆಯಲೇಬೇಕು. ಜಗತ್ತಿನ ಭೌತಿಕಸುಖಸಾಮಗ್ರಿಯನ್ನೇ ಹುಡುಕುವ ಬದಲು ಭಗವಂತನನ್ನೇ ಅರಸಬೇಕು. ನಮ್ಮ ಸಕಲ ಕ್ರಿಯೆಗಳಲ್ಲಿಯೂ ನಮ್ಮ ಜೊತೆಗಾರನಾಗಿ, ನಮ್ಮ ಸಾರಥಿಯಾಗಿ, ಪರಮಾತ್ಮನು ನಮ್ಮೊಡನಿದ್ದರೂ ನಮ್ಮ ಅಪರಿಪಕ್ವ ಮನಸ್ಸಿಗೆ ಅವನ ಜ್ಞಾನವು ಉದಯಿಸುವುದಿಲ್ಲ.

**ಯತಂತೋಽಪ್ಯಕೃತಾತ್ಮಾನೋ**
**ನೈನಂ ಪಶ್ಯಂತ್ಯಚೇತಸಃ ।**

ಕರ್ಮಯೋಗ, ಭಕ್ತಿಯೋಗಗಳಿಂದ ಹೃದಯಸಂಸ್ಕಾರವನ್ನು ಪಡೆದವನೇ ಪರಮಾತ್ಮನನ್ನು ಕಾಣುವ ಭಾಗ್ಯಶಾಲಿಯೆನಿಸುವನು. ಒಂದು ಕೊಡ ನೀರಿನಲ್ಲಿದ್ದ ಸಕ್ಕರೆಯನ್ನು ವಿಜ್ಞಾನಿ ಪೃಥಕ್ಕರಿಸಿ ತೆಗೆಯಬಲ್ಲನು. ಸಾಮಾನ್ಯಜನರು ಅದರಲ್ಲಿಯ ಸಕ್ಕರೆಯನ್ನು ಹೇಗೆ ತೋರಿಸಬಲ್ಲರು? ಭಗವಂತನು ನಮ್ಮ

ಸಹಚಾರಿಯಾಗಿದ್ದರೂ ನಮ್ಮ ದೃಷ್ಟಿಯು ಆ ಕಡೆ ಹರಿಯುವುದೇ ಇಲ್ಲ.

**ಪರಾಂಚಿ ಖಾನಿ ವ್ಯತೃಣತ್ ಸ್ವಯಂಭೂಃ**
**ತಸ್ಮಾತ್ ಪರಾಕ್ ಪಶ್ಯತಿ ನಾಂತರಾತ್ಮನ್ ।**

-ಕಠೋಪನಿಷತ್

ನಮ್ಮ ಇಂದ್ರಿಯಗಳೆಲ್ಲವೂ ಬಹಿರ್ಮುಖಗಳಾಗಿದ್ದು ನಮ್ಮಲ್ಲಿ ಬಾಹ್ಯ ದೃಷ್ಟಿಯೇ ಅತಿಯಾಗಿದೆ. ಅಂತರ್ದೃಷ್ಟಿಯನ್ನು ಬೆಳೆಸಿಕೊಳ್ಳುವ ಪ್ರಯತ್ನದಲ್ಲಿ ಜನರು ಬಹಳ ಹಿಂದುಳಿದಿದ್ದಾರೆ. ಇಂದ್ರಿಯಗಳ ಸಹಜವಾದ ಪ್ರವಾಹದ ಸೆಳೆತಕ್ಕೆ ವಿರುದ್ಧವಾಗಿ ಈಸಬಲ್ಲ ಧೀರನೇ ಈ ಅಂತರ್ದೃಷ್ಟಿಯನ್ನು ಪಡೆಯು ವಲ್ಲಿ ಯಶಸ್ವಿಯಾದಾನು. ಅಂತೂ ಈ ಜಗದ್ವೃಕ್ಷದಲ್ಲಿ ಬೀಡುಬಿಟ್ಟಿರುವ ನಾವು ಅದರ ಆಂತರ, ಬಾಹ್ಯಗಳನ್ನೆಲ್ಲ ಅರಿತು ಅದರ ಆಧಾರಶಕ್ತಿಯನ್ನು ಅರಿಯಲು ಪೂರ್ಣಪ್ರಯತ್ನವನ್ನು ಕೈಗೊಂಡು ಜೀವನದ ಸಾರ್ಥಕತೆಯನ್ನು ಪಡೆಯಬೇಕು.

## ಪುರುಷೋತ್ತಮಯೋಗ

ಸಮಗ್ರ ಪ್ರಪಂಚವನ್ನು ಜೀವ, ಜಡ, ಪರಮಾತ್ಮರೆಂದು ವಿಭಜಿಸಿದಂತೆ ಜೀವ-ಪರಮಾತ್ಮರ ಅನ್ಯೋನ್ಯ ಸಂಬಂಧದ ಸ್ಪಷ್ಟವಾದ ತಿಳುವಳಿಕೆಯು ಮೂಡುವ ಉದ್ದೇಶದಿಂದ ಚೇತನವರ್ಗದ ವಿಭಾಗವನ್ನು ಹದಿನೈದನೆಯ ಅಧ್ಯಾಯದ ಕೊನೆಯಲ್ಲಿ ಮಾಡಲಾಗಿದೆ.

ಕ್ಷರಪುರುಷ, ಅಕ್ಷರಪುರುಷ ಮತ್ತು ಪುರುಷೋತ್ತಮರೆಂದು ಚೇತನರು ಮೂರು ವಿಧ. ಈ ಪ್ರಾಕೃತವಾದ ಭೌತಿಕಶರೀರವನ್ನು ಹೊಂದಿ ಸಂಸಾರದ ಜನನ ಮರಣ ಚಕ್ರದಲ್ಲಿ ತಿರುಗುವ ಸಕಲ ಜೀವರೂ ಕ್ಷರಪುರುಷರು. ಅನಾದಿಯಾದ ಜಡಪ್ರಕೃತಿಯ ಅಭಿಮಾನಿನಿಯಾಗಿ ಪರಮಾತ್ಮನ ಜಗದ್ವ್ಯಾಪಾರದಲ್ಲಿ ಪ್ರಧಾನ ಸಹಕಾರಿಣಿಯಾದ ಅಪ್ರಾಕೃತ ಚೈತನ್ಯಾತ್ಮಕ ಶರೀರವುಳ್ಳ ಆಕಾಶದಂತೆ ನಿರ್ವಿಕಾರಳಾದ ಜಗನ್ಮಾತೆಯೇ ಅಕ್ಷರಪುರುಷ. ಇವರೆಲ್ಲರಿಗೂ ಅಧಿಪತಿಯಾದ ಪರಮಾತ್ಮನೇ ಪುರುಷೋತ್ತಮನು. ಚೇತನರ ವಿಭಾಗವನ್ನು ನಾವು ಈ ರೀತಿ ತಿಳಿದುಕೊಳ್ಳಬೇಕು.

**ದ್ವಾವಿಮೌ ಪುರುಷೌ ಲೋಕೇ ಕ್ಷರಶ್ಚಾಕ್ಷರ ಏವ ಚ।**
**ಕ್ಷರಃ ಸರ್ವಾಣಿ ಭೂತಾನಿ ಕೂಟಸ್ಥೋಽಕ್ಷರ ಉಚ್ಯತೇ ॥**
**ಉತ್ತಮಃ ಪುರುಷಸ್ತ್ವನ್ಯಃ ಪರಮಾತ್ಮೇತ್ಯುದಾಹೃತಃ ॥**

ಪರಮಾತ್ಮ, ಚಿತ್‌ಪ್ರಕೃತಿ ಇವರಿಬ್ಬರು ಜೀವವರ್ಗದ ತಂದೆ-ತಾಯಿಗಳಾಗಿದ್ದು ಜೀವವರ್ಗವೆಲ್ಲ ಅವರ ಪುತ್ರಪರಿವಾರವೇ ಆಗಿದೆ.

**ಸ ತ್ರೈಲೋಕ್ಯ ಕುಟುಂಬಪಾಲನಪರಃ।** - ಮಂಗಲಾಷ್ಟಕ

ಇಡೀ ಜಗತ್ತು ಪುರುಷೋತ್ತಮನ ಭವ್ಯಕುಟುಂಬವಾಗಿದೆ. ನಾವೆಲ್ಲರೂ ಈ ಕುಟುಂಬದ ಘಟಕರು. ಇದರ ಪೋಷಣೆ-ಪಾಲನೆಗಳನ್ನು ಮಾಡುವ ಪುರುಷೋತ್ತಮನು ವಿಶ್ವದ ಅಧಿದೇವತೆಯು. ಅವನ ಈ ಪ್ರಭುತ್ವವನ್ನು ಒಪ್ಪುವವರೆಲ್ಲರೂ ಪರಸ್ಪರ ಸಹೋದರರೆಂಬ ಭಾವನೆಯಿಂದ ನಾವು ವರ್ತಿಸಬೇಕು.

ಕ್ಷರ-ಅಕ್ಷರರೆಂದರೆ ಜಡ ಜೀವರೆಂದು ಕೆಲವರ ಅಭಿಪ್ರಾಯವಿದೆ. ಈ ಶ್ಲೋಕದಲ್ಲಿರುವ ಪುರುಷಶಬ್ದವನ್ನು ಗಮನಿಸಿದಾಗ ಇದು ಚೇತನ ವರ್ಗದ ವಿಭಾಗವೆಂದೇ ನಮಗೆ ಅನಿಸುತ್ತದೆ. ಏನೇ ಇರಲಿ, ಸಕಲ ಚೇತನರಿಂದಾಗಲಿ, ಜೀವ ಜಡಗಳಿಂದಾಗಲಿ ಭಿನ್ನನೂ ಉತ್ತಮನೂ ಆದ ಮಹಾನ್ ಆತ್ಮನೇ ಭಗವಂತನೆಂಬುದೂ ಅವನೇ ಶ್ರೀಕೃಷ್ಣನೆಂಬುದೂ ಇಲ್ಲಿ ಸ್ಪಷ್ಟವಿದೆ.

**ಉತ್ತಮಃ ಪುರುಷಸ್ತ್ವನ್ಯಃ।**
**ಅತೋಽಸ್ಮಿ ಲೋಕೇ ವೇದೇ ಚ**
**ಪ್ರಥಿತಃ ಪುರುಷೋತ್ತಮಃ।**

ಈ ಶ್ಲೋಕಗಳು, ಸಕಲ ಚೇತನರಿಗಿಂತಲೂ ಭಗವಂತನಿಗೆ ಪ್ರತ್ಯೇಕವಾದ ಅಸ್ತಿತ್ವವನ್ನು ಪ್ರತಿಪಾದಿಸುತ್ತಿವೆಯಲ್ಲದೆ, ಸರ್ವಲೋಕಧಾರಕನೂ ಸರ್ವೋತ್ತಮನೂ ಆದ ಆತನೇ ಶ್ರೀಕೃಷ್ಣನೆಂದೂ ಸ್ಪಷ್ಟಪಡಿಸುತ್ತಿವೆ. ಶ್ರೀಕೃಷ್ಣನು ಜಡ ಜೀವರಿಂದ ಅತೀತನಾದ ಪರಬ್ರಹ್ಮನಲ್ಲವೆಂದೂ ಕೆಲವರ ವಾದವಿದೆ. ಪರಬ್ರಹ್ಮನು ನಿರ್ಗುಣನಾಗಿರುವುದರಿಂದ ಗುಣಶಾಲಿಯಾದ ಕೃಷ್ಣನು ಪರಬ್ರಹ್ಮನಾಗಲಾರನು. ಪರಬ್ರಹ್ಮನ ಮಾಯೆಯ ಶಿಶುವೇ ಕೃಷ್ಣನೆಂದು ಇವರ ಆಶಯವಾಗಿದೆ. ಈ ಜಡ-ಜೀವರನ್ನು ಮೀರಿ ನಿಂತಿರುವ ಪುರುಷೋತ್ತಮನೇ

ಶ್ರೀಕೃಷ್ಣನೆಂದು ಸಾರುವ ಈ ಭಾಗವು ಮೇಲಿನ ಭ್ರಮೆಯನ್ನು ಪೂರ್ಣವಾಗಿ ನಿರಸನ ಮಾಡಿದೆ. ಪುರುಷೋತ್ತಮ ತತ್ತ್ವವನ್ನು ಸಾರಿಹೇಳುವ ಈ ಭಾಗವು ಗೀತೆಯ ಸಾರಸಂದೇಶವಾಗಿದೆ. ಶ್ರೀಮಧ್ವಾಚಾರ್ಯರಿಗೆ ಬಹಳ ಪ್ರಿಯವಾದ ಭಾಗವಿದು. ಇದನ್ನು ಆಧರಿಸಿಯೇ ಭಗವಂತನ ಸರ್ವೋತ್ತಮತ್ತ್ವದ ಸಂದೇಶವನ್ನು ಅವರು ಘೋಷಿಸಿದ್ದಾರೆ. ಜೀವ-ಪರಮಾತ್ಮರ ಸಂಬಂಧವನ್ನೂ ಜೀವ-ಜಗತ್ತುಗಳನ್ನು ನಿಯಂತ್ರಿಸುವ ಪರಮಾತ್ಮನ ಮಹಾಶಕ್ತಿಯನ್ನೂ ನಿಃಸಂದಿಗ್ಧಭಾಷೆಯಲ್ಲಿ ಇದು ಬೋಧಿಸಿದೆ. ಶ್ರೀಶಂಕರಾಚಾರ್ಯರೂ ಈ ಭಾಗವನ್ನು ಸಕಲ ಶಾಸ್ತ್ರದ ಸಾರವೆಂದು ಘೋಷಿಸಿರುವರು.

> ಸರ್ವೋ ಹಿ ಗೀತಾಶಾಸ್ತ್ರಾರ್ಥೋಽಸ್ಮಿನ್ನಧ್ಯಾಯೇ ।
> ಸಮಾಸೇನೋಕ್ತಃ । ನ ಕೇವಲಂ ಗೀತಾಶಾಸ್ತ್ರಾರ್ಥ ಏವ,
> ಕಿಂ ತು ಸರ್ವಶ್ಚ ವೇದಾರ್ಥ ಇಹ ಪರಿಸಮಾಪ್ತಃ ॥

ಆದುದರಿಂದ ಗೀತೆಯ ಹೃದಯವೆನಿಸಿದ ಪುರುಷೋತ್ತಮಯೋಗದ ಸಂದೇಶದಂತೆ ಈ ಜಗತ್ತನ್ನು ಶ್ರೀಹರಿಯ ಅಧಿರಾಜ್ಯವೆಂದು ಭಾವಿಸಿ, ಆ ಸಾರ್ವಭೌಮ ದೇವತೆಯನ್ನು ಮರೆಯದೇ ಅವನ ನಿಷ್ಠ ಪ್ರಜೆಗಳಾಗಿ ನಮ್ಮ ಜೀವನವನ್ನು ರೂಪಿಸಲು ಯತ್ನಿಸುವುದು ಸಂಶಯಾತೀತವಾದ ನಿರಾಬಾಧವಾದ ಮಾರ್ಗವಾಗಿದೆ.

## ದೈವ ಮತ್ತು ಆಸುರ ಸಂಪತ್ತುಗಳು

ಹದಿನಾರನೆಯ ಅಧ್ಯಾಯದಲ್ಲಿ ದೈವೀ ಸಂಪತ್ತಿ ಮತ್ತು ಅಸುರೀ ಸಂಪತ್ತಿಗಳ ವರ್ಣನೆಯಿದೆ. ಮಾನವನ ಉನ್ನತಿಗೆ ಸಹಾಯಕಗಳಾದ ಸತ್ಯ, ಅಹಿಂಸೆ, ತ್ಯಾಗ, ತಪಸ್ಸು, ದಾನ, ದಯೆ ಮೊದಲಾದ ಸದ್ಗುಣಗಳೇ ದೈವೀ ಸಂಪತ್ತಿಗಳಾಗಿವೆ. ಇವುಗಳಿಗೆ ತೀರ ವಿರೋಧಿಗಳಾಗಿ ಮಾನವನ ಅಧಃಪತನಕ್ಕೆ ಕಾರಣಗಳಾದ ದಂಭ, ದರ್ಪ, ಅಹಂಕಾರ, ಅಜ್ಞಾನ ಮೊದಲಾದ ದುರ್ಗುಣಗಳು ಆಸುರೀ ಸಂಪತ್ತಿಗಳೆನಿಸಿವೆ. ಆಸುರೀ ಸಂಪತ್ತು ಮತ್ತು ಅದರ ದುಷ್ಪರಿಣಾಮಗಳ ಸವಿಸ್ತರ ವರ್ಣನೆಯನ್ನು ಹದಿನಾರನೆಯ ಅಧ್ಯಾಯದಲ್ಲಿ ಮಾಡಿರುವರು. ಆಸುರ ಭಾವದಿಂದ ಸಮಾಜದಲ್ಲಿ ಉಂಟಾಗುವ ಅನರ್ಥ ಅನಾಹುತಗಳ ದುರಂತ

ಚಿತ್ರದ ಕಲ್ಪನೆಯಾದಾಗಲೇ ಸದ್ಗುಣ ಸತ್‌ಪ್ರವೃತ್ತಿಗಳ ಬಗ್ಗೆ ಸಹಜವಾಗಿ ನಮ್ಮ ಒಲವು ಬೆಳೆಯುವುದು. ಕತ್ತಲನ್ನು ಅನುಭವಿಸದೆ ಬೆಳಕಿನ ಮಹತ್ತ್ವವನ್ನು ಹೇಗೆ ಅರಿಯಬಲ್ಲೆವು? ಆದಕ್ಕಾಗಿಯೇ ಆಸುರೀಸಂಪತ್ತಿಯ ಭಯಾನಕ ದೃಶ್ಯವನ್ನು ಗೀತೆಯು ನಮ್ಮ ಮುಂದೆ ಚಿತ್ರಿಸಿದೆ. ಇಲ್ಲಿ ಮಾಡಿರುವ ಆಸುರೀಸಂಪತ್ತಿನ ವರ್ಣನೆಯು ಇಂದಿನ ಸಮಾಜದ ಚಿತ್ರವನ್ನೇ ನಮ್ಮ ಕಣ್ಣ ಮುಂದೆ ಇಡುತ್ತಿದೆ. ಪ್ರಪಂಚದ ಅಸ್ತಿತ್ವವನ್ನು ನಿರಾಕರಿಸಿ, ಜಗತ್ತಿನಲ್ಲಿ ತಾವು ನಿರ್ವಹಿಸಬೇಕಾದ ಕರ್ತವ್ಯಗಳಿಂದ ವಿಮುಖರಾಗುವ ಅಕರ್ಮಣ್ಯತೆಯೂ ಒಂದು ವಿಧದ ಆಸುರೀ ಪ್ರವೃತ್ತಿಯಾಗಿದ್ದರೆ, ಪ್ರಪಂಚದ ನಿಯಾಮಕ ಶಕ್ತಿಯಾಗಿರುವ ಪರಮಾತ್ಮನನ್ನೇ ಅಲ್ಲಗಳೆದು ನೀತಿ, ನಿಯಮಗಳನ್ನು ಉಲ್ಲಂಘಿಸಿ ಸ್ವಚ್ಛಂದವೃತ್ತಿಯಿಂದ ಭೋಗಪರಾಯಣರಾಗಿ ನಡೆಯುವುದು ಇನ್ನೊಂದು ಬಗೆಯ ಆಸುರೀ ವೃತ್ತಿಯಾಗಿದೆ.

ಅಸತ್ಯಮಪ್ರತಿಷ್ಠಂ ತೇ ಜಗದಾಹುರನೀಶ್ವರಮ್ ।

ಜಗತ್ತು ಅಸತ್ಯವೆನ್ನುವುದು ಅಕರ್ಮಣ್ಯತೆಗೆ ಪ್ರಚೋದಕವಾಗಿದ್ದರೆ ಈಶ್ವರನೇ ಇಲ್ಲವೆನ್ನುವುದು ಸ್ವಚ್ಛಂದ ವೃತ್ತಿ ಹಾಗೂ ಅತ್ಯಾಚಾರಗಳಿಗೆ ಮುಕ್ತದ್ವಾರವನ್ನು ನೀಡುವುದು. ನಮ್ಮ ಕಣ್ಣೆದುರಿಗಿರುವ ಈ ದೃಶ್ಯ ಪ್ರಪಂಚವನ್ನೂ ಇದರ ಒಡೆಯನಾದ ಪರಮಾತ್ಮನನ್ನೂ ನಿರಾಕರಿಸುವ ವಾದಗಳ ಗೊಂದಲಗಳಿಂದಾಗಿಯೇ ಕರ್ತವ್ಯಪರಾಙ್ಮುಖತೆ ಹಾಗೂ ಸ್ವೇಚ್ಛಾಚಾರಗಳು ಲೋಕದಲ್ಲಿ ಬೆಳೆಯಲು ಅವಕಾಶವಾಗಿದೆ. ಜನತೆಗೆ ಎಂತಹ ಕಷ್ಟ, ವಿಪತ್ತುಗಳು ಒದಗಿದರೂ ತೀವ್ರವೇದನೆಯಿಂದ ಒಬ್ಬನು ನರಳುತ್ತಿದ್ದರೂ ಆದರ ಪರಿಹಾರಕ್ಕಾಗಿ ಧುಮುಕಿ ಧಾವಿಸುವ ಉತ್ಸಾಹದ ಪ್ರವೃತ್ತಿಯನ್ನೇ - ಜಗತ್ತು ಅಸತ್ಯವೆನ್ನುವವನು ಕಳೆದು ಕೊಳ್ಳುತ್ತಾನೆ. ಅವನ ದೃಷ್ಟಿಯಲ್ಲಿ ಇದೆಲ್ಲವೂ ಸ್ವಪ್ನಪ್ರಪಂಚ. ಸ್ವಪ್ನದ ಘಟನೆಗಳಿಗೆ ಇರುವ ಮಹತ್ತ್ವವನ್ನೇ ವಾಸ್ತವ ಪ್ರಪಂಚಕ್ಕೂ ನೀಡುವ ಇಂತಹ ಮನೋವೃತ್ತಿಯಿಂದ ನಮ್ಮ ವೈಯಕ್ತಿಕ ಹಾಗೂ ಸಾಮಾಜಿಕ ಕರ್ತವ್ಯಗಳೆಲ್ಲವೂ ಮೂಲೆಪಾಲಾಗುವವು. ಇದಕ್ಕಿಂತಲೂ ಗಂಡಾಂತರಕಾರಿಯಾದ ಸಂಗತಿಯೆಂದರೆ ಜಗತ್ತಿನ ಒಡೆಯನೂ ಸರ್ವಜ್ಞನೂ ಸರ್ವಶಕ್ತಿಶಾಲಿಯೂ ವಿಶ್ವವ್ಯಾಪಕನೂ ಆದ ಪರಮಾತ್ಮನನ್ನು ಅಂಗೀಕರಿಸ

ದಿರುವುದು. ಕೆಲವರು ಜಗತ್ತನ್ನೊಪ್ಪಿ ದೇವರನ್ನು ಮಾತ್ರ ಒಪ್ಪದವರಿದ್ದರೆ ಕೆಲವರು ಜಗತ್ತು ಕಾಲ್ಪನಿಕವೆಂದೂ ಜಗದೀಶ್ವರನು ಮಾಯೆಯ ಶಿಶುವೆಂದೂ ಎರಡನ್ನೂ ಅಲ್ಲಗಳೆಯುತ್ತಾರೆ.

## ನಾಸ್ತಿಕ್ಯವಾದದ ದುಷ್ಪರಿಣಾಮಗಳು

ಈ ನಿರೀಶ್ವರ ಭಾವನೆಯು ಜಗತ್ತಿನ ಪ್ರಗತಿಗೆ ಪೂರ್ತಿ ಕುಠಾರ ಪ್ರಾಯವಾಗಿದೆ. ಸೂರ್ಯನ ಸುತ್ತಲೂ ಸಕಲ ಗ್ರಹಗಳೂ ತಿರುಗುತ್ತಿರುವಂತೆ ಈಶ್ವರಭಾವನೆಯೇ ಸಕಲ ಸದ್ಗುಣಗಳ ಆಧಾರಕೇಂದ್ರವಾಗಿದೆ. ಈಶ್ವರನನ್ನೂ ಅತೀಂದ್ರಿಯ ವಸ್ತುಗಳಾದ ಧರ್ಮ ಅಧರ್ಮಗಳನ್ನೂ ಒಪ್ಪದಿರುವವರ ದೃಷ್ಟಿಯಲ್ಲಿ ಸತ್ಯ, ದಯೆ, ಅಹಿಂಸೆ ಮುಂತಾದ ವಿಶ್ವಧಾರಕ ಗುಣಗಳಿಗೆ ಏನೂ ಮಹತ್ತ್ವವಿರಲಾರದು. ನಾವು ಸತ್ಯವನ್ನೇ ಏಕೆ ನುಡಿಯಬೇಕು? ನಮಗೆ ಸುಖ ಸಂಪತ್ತುಗಳು ದೊರೆಯುವ ಸಂದರ್ಭದಲ್ಲಿ ನಾವು ದ್ರೋಹ ವಂಚನೆಗಳನ್ನು ಏಕೆ ಎಸಗಬಾರದು? ನಮ್ಮ ಸುಖ ಸೌಕರ್ಯಗಳನ್ನು ತೊರೆದು ಅನ್ಯರ ಉಪಕಾರಕ್ಕಾಗಿ ಧುಮುಕುವ ತ್ಯಾಗಪ್ರವೃತ್ತಿಯು ಹುಚ್ಚುತನವಲ್ಲವೆ? ಕೇವಲ ಜಡವಾದಿಯು ಈ ಪ್ರಶ್ನೆಗಳನ್ನು ಹೇಗೆ ಉತ್ತರಿಸಬಲ್ಲನು? ಅವನ ದೃಷ್ಟಿಯಲ್ಲಿ ಮಾನವರೆಲ್ಲರೂ ರೇಡಿಯೋ ಮುಂತಾದವುಗಳಂತೆ ಬರೇ ಯಂತ್ರಗಳು. ಅನ್ಯರ ದುಃಖ, ಹಿಂಸೆ, ಯಾತನೆಗಳಿಗೆ ಜಡವಾದಿಯ ದೃಷ್ಟಿಯಲ್ಲಿ ಏನೂ ಬೆಲೆಯಿಲ್ಲ. ತಾನು ಮಾಡುವ ಯಾವ ಅಕೃತ್ಯಗಳಿಂದಲೂ ಪಾರಲೌಕಿಕ ಅನರ್ಥದ ಭೀತಿ ಸಂಕೋಚಗಳು ಅವನಿಗೆ ಇರುವುದಿಲ್ಲ. ಮತ್ತೊಬ್ಬರಿಗೆ ಅನ್ಯಾಯವನ್ನು ಬಗೆಯುವುದರಿಂದ ಐಹಿಕ ಪ್ರಯೋಜನವು ದೊರೆಯುವುದಿದ್ದರೆ ತಾನು ಅದನ್ನು ಏಕೆ ಮಾಡಬಾರದು? ಎಂಬ ಭಾವನೆಯು ಭೌತಿಕವಾದಿಯಲ್ಲಿ ಸಹಜವಾಗಿ ಮೂಡಲು ಅವಕಾಶವಿದೆ. ಹೀಗಾಗಿ ತನ್ನ ಸ್ವಾರ್ಥಸಾಧನೆಗಾಗಿ ಯಾವುದೇ ಹೇಯ ಕೃತಿಗಿಳಿಯಲೂ ಮಾನವನು ಸಿದ್ಧನಾದಾನು. ಧರ್ಮ ಮತ್ತು ಈಶ್ವರಭಾವನೆಯೇ ದುಷ್ಕೃತಿಗಳಿಂದ ಜನರಿಗೆ ಒದಗುವ ದೂರಭಾವಿ ದುಷ್ಪರಿಣಾಮಗಳ ಬಗ್ಗೆ ಎಚ್ಚರಿಕೆಯನ್ನು ನೀಡಿ ಅವರಲ್ಲಿ ಸತ್‌ಪ್ರವೃತ್ತಿಗಳ ಉದಯಕ್ಕೆ ಕಾರಣವಾಗಿದೆ. ಮಾನವನ ಅತಿರೇಕದ ಸ್ಥಿತಿಯನ್ನು ನಿಯಂತ್ರಿಸಿ

ಅವನು ವಿನಾಶದ ಪ್ರಪಾತದಲ್ಲಿ ಬೀಳದಂತೆ ಅವನ ಗತಿಯನ್ನು ಹಿಡಿತದಲ್ಲಿರಿಸಿಕೊಳ್ಳಲು ಇದೇ ಕಾರಣವಾಗಿದೆ. ಬ್ರೇಕ್ ಇಲ್ಲದ ವಾಹನದಂತೆ, ಲಗಾಮಿಲ್ಲದ ಕುದುರೆಯಂತೆ ಈಶ್ವರಭಾವನೆಯನ್ನು ತೊರೆದು ಕೇವಲ ಭೌತಿಕ ವಿಜ್ಞಾನದ ಸಹಾಯವನ್ನು ಪಡೆದ ಮಾನವನ ಸ್ಥಿತಿಯೂ ಆಗುವುದು. ಅಕೃತ್ಯ, ಭ್ರಷ್ಟಾಚಾರಗಳಿಂದ ತಮಗೆ ಈ ಜೀವನದಲ್ಲಿ ಸ್ವಚ್ಛಂದವಾದ ಸುಖಭೋಗಗಳನ್ನು ಸವಿಯಲು ಸಾಧ್ಯವಿದ್ದರೆ ತಮ್ಮ ಈ ಅಲ್ಪಜೀವನವನ್ನು ಆ ರೀತಿಯಲ್ಲಿಯೇ ಸುಖವಾಗಿ ಏಕೆ ಕಳೆಯಬಾರದು? ತ್ಯಾಗ, ಪರೋಪಕಾರ, ಅಹಿಂಸೆಗಳೆಂಬ ಪೂರ್ವಗ್ರಹಗಳಿಗೆ ಬಲಿಬಿದ್ದು ನಮ್ಮ ಜೀವನದಲ್ಲಿ ಒದಗಬಹುದಾದ ಸುಖಸನ್ನಿವೇಶಗಳಿಗೆ ವೃಥಾ ನಾವೇಕೆ ಎರವಾಗಬೇಕು? ಎನ್ನುವಂತಹ ವಿಚಾರಲಹರಿಯಲ್ಲಿ ಸಿಲುಕಿ ಪೂರ್ಣವಾಗಿ ಅನೀತಿಯ ದಾರಿಯನ್ನು ತುಳಿಯುವ ಸಂದರ್ಭವೇ ನಾಸ್ತಿಕ್ಯವಾದದಿಂದ ಸಮಾಜಕ್ಕೆ ಒದಗುವುದು. ದೈವೀಭಾವನೆಯ ಆಧಾರದಲ್ಲಿ ಮಾನವನ ಮನಸ್ಸಿನಲ್ಲಿ ಈ ಸದ್ಗುಣಗಳ ಸಂಸ್ಕಾರಗಳು ಬಲವಾಗಿ ಬೇರೂರಿರುವುದರಿಂದಲೇ ಈ ಅನೀತಿ ಅವ್ಯವಹಾರಗಳ ಗಾಂಢಾಂಧಕಾರದಲ್ಲಿಯೂ ನೀತಿ, ಪ್ರಾಮಾಣಿಕತೆಗಳ ಮಿಣುಕು ಬೆಳಕನ್ನು ನಾವು ನೋಡುತ್ತಿರುತ್ತೇವೆ. ದೇವರನ್ನು ಒಪ್ಪಲಿ, ಒಪ್ಪದಿರಲಿ; ನೀತಿ, ಶೀಲ, ಚಾರಿತ್ರ್ಯಗಳ ಮಹತ್ತ್ವವನ್ನು ಪ್ರತಿಯೊಬ್ಬರೂ ಅಂಗೀಕರಿಸುವರು. ಅವುಗಳನ್ನು ತಮ್ಮ ಜೀವನದಲ್ಲಿ ಅಳವಡಿಸಿಕೊಳ್ಳುವುದು ಅವಶ್ಯವೆಂಬುದನ್ನು ಪ್ರತಿಯೊಬ್ಬರೂ ಅರಿತಿರುವರು. ಎಂತಹ ಹೀನ ಅಕೃತ್ಯಗಳನ್ನು ಮಾಡುತ್ತಿರುವಾಗಲೂ ತಾನು ಹೇಯವಾದ ಕಾರ್ಯವನ್ನು ಮಾಡುತ್ತಿರುವೆನೆಂಬ ಸಂಕೋಚ, ಜಿಗುಪ್ಸೆಗಳು ಹೆಚ್ಚಾಗಿ ಪ್ರತಿಯೊಬ್ಬ ನಲ್ಲಿಯೂ ಇರುತ್ತವೆ. ಅನುಚಿತ ವರ್ತನೆಗೆ ಇಳಿದಾಗಲೆಲ್ಲ ತಾನಿದನ್ನು ಮಾಡುವುದು ಸರಿಯಲ್ಲವೆಂಬ ಒಳದನಿಯ ಆದೇಶವನ್ನು ಕೇಳದವರು ವಿರಳ. ಒಳದನಿಯ ಎಚ್ಚರಿಕೆಯನ್ನು ಮೀರಿ ರಾಗಾವೇಶದಿಂದ ಅನುಚಿತ ಕಾರ್ಯವನ್ನೆಸಗಿದರೂ ತಾನು ಮಾಡಿದ್ದು ತಪ್ಪು ಎಂಬ ಭಾವನೆಯು ಜೊತೆಯಾಗಿಯೇ ಇರುತ್ತದೆ. ಈಶ್ವರಭಾವನೆಯಿಂದ ಸದ್ಗುಣಗಳ ಸಂಸ್ಕಾರಗಳು ಬಲವಾದ ರೀತಿಯಲ್ಲಿ ಸಮಾಜದಲ್ಲಿ ಹೇಗೆ

ರೂಢಮೂಲವಾಗಿವೆ ಎಂಬುದನ್ನು ಇದರಿಂದ ನಾವು ಅರಿತುಕೊಳ್ಳಬಹುದು. ಈಶ್ವರನನ್ನು ಅಂಗೀಕರಿಸದ ಸ್ವತಂತ್ರ ಭೌತಿಕವಾದಿಯು ಈ ಶ್ರದ್ಧೆ ಸಂಸ್ಕಾರಗಳನ್ನೆಲ್ಲ ಮೆಟ್ಟಿ ನಿಲ್ಲಬಲ್ಲನು. ತನ್ನ ಲೌಕಿಕ ಜೀವನದ ಸುಖ, ಭೋಗಗಳಿಗೆ ಆತಂಕವಾಗುವ ನೈತಿಕ ಆದರ್ಶಗಳನ್ನು ಕುರುಡು ಭಾವನೆಗಳೆಂದು ಹರಿದು ಕಿತ್ತೆಸೆಯಲು ಅವನಿಗೆ ಏನೂ ಸಂಕೋಚವಾಗದು. ಅವನ ಭೌತಿಕ ದೃಷ್ಟಿಯಲ್ಲಿ ನೈತಿಕ ನಿಷ್ಠೆಗೆ ಏನೂ ಆಧಾರವು ಕಾಣಿಸದು. ಶ್ರದ್ಧೆಯ ಭರದಲ್ಲಿ ರೂಪಿತವಾದ ಪೂರ್ವಗ್ರಹವೆಂದು ಮಾತ್ರ ಇವುಗಳನ್ನು ಆತನು ಪರಿಗಣಿಸಿ, ತನ್ನ ಸ್ವತಂತ್ರ ವಿಚಾರದಿಂದ ಹಳೆಯ ನೈತಿಕ ಸಂಸ್ಕಾರಗಳನ್ನು ಕಿತ್ತೊಗೆಯಲು ಪ್ರವರ್ತಿಸಬಹುದು. ಇದರ ಪರಿಣಾಮವೇನೆಂಬುದು ಸ್ಪಷ್ಟ. ದೈವೀ ಭಾವನೆಯೂ ಅದರ ಆಧಾರದಲ್ಲಿಯೇ ರೂಪುಗೊಂಡಿರುವ, ನೈತಿಕ ಆದರ್ಶಗಳೂ ಪೂರ್ತಿಯಾಗಿ ಮರೆಯಾದ ಪ್ರಪಂಚದ ಚಿತ್ರವನ್ನು ಊಹಿಸುವುದೇ ನಮಗೆ ಕಠಿಣವೆನಿಸುವುದು. ಶ್ರೀಮಧ್ವಾಚಾರ್ಯರು ವಿಷ್ಣುತತ್ತ್ವ ನಿರ್ಣಯದಲ್ಲಿ ಹೇಳಿದಂತೆ ಅಶಾಂತಿ, ಅಭದ್ರತೆ, ಅವ್ಯವಸ್ಥೆಗಳ ನೆಲೆಯಾಗಿ ಜಗತ್ತೊಂದು ಘೋರವಾದ ರುದ್ರಭೂಮಿಯೇ ಆಗಬಹುದು:

**ಏತಾಂ ದೃಷ್ಟಿಮವಷ್ಟಭ್ಯ**
**ನಷ್ಟಾತ್ಮಾನೋಽಲ್ಪಬುದ್ಧಯಃ ।**
**ಪ್ರಭವಂತ್ಯುಗ್ರಕರ್ಮಾಣೋ**
**ಕ್ಷಯಾಯ ಜಗತೋಽಹಿತಾಃ ॥**

ನಿರೀಶ್ವರನಿಷ್ಠವಾದ ಸ್ವಾರ್ಥದೃಷ್ಟಿಯ ಜನರು ತಮ್ಮ ವರ್ತನೆಯಿಂದ ಜಗತ್ತಿನ ವಿನಾಶಕ್ಕೆ ಕಾರಣರಾಗುವರು.

**ಕಾಮೋಪಭೋಗಪರಮಾ**
**ಏತಾವದಿತಿ ನಿಶ್ಚಿತಾಃ ।**

ವೈಷಯಿಕ ಭೋಗದಲ್ಲಿ ಆಸಕ್ತರಾದ ಆಸುರೀಪ್ರವೃತ್ತಿಯ ಈ ಜನರು ಸಾಂಸಾರಿಕ ಸುಖಾನುಭವವೇ ಜೀವನದ ಪರಮ ಪುರುಷಾರ್ಥವೆಂದು ಭಾವಿಸುತ್ತಾರೆ. ಈಗಿನ ಕಾಲದಲ್ಲಿ ನಮ್ಮ ದೇಶದಲ್ಲಿ ಎಲ್ಲರ ವೈಯಕ್ತಿಕ ಹಾಗೂ

ರಾಷ್ಟ್ರೀಯ ಧ್ಯೇಯವೇ ಇದಾಗಿದೆ. ಸಂಪತ್ತನ್ನು ಗಳಿಸುವುದು, ಭೋಗಸಾಮಗ್ರಿಗಳನ್ನು ಪಡೆಯುವುದು ಇವುಗಳಲ್ಲಿಯೇ ಬಿರುಸಿನ ಸ್ಪರ್ಧೆ, ಕೋಲಾಹಲಗಳು ನಡೆದಿವೆ. ಎಷ್ಟು ಸಂಪತ್ತುಗಳನ್ನು ಗಳಿಸಿದ್ದೇವೆ, ಎಂತಹ ಸೌಧಗಳನ್ನು ಕಟ್ಟಿಸಿದ್ದೇವೆ, ಎಂತಹ ವಿಲಾಸಸಾಮಗ್ರಿಗಳನ್ನು ಬಳಸುತ್ತಿದ್ದೇವೆ ಎಂಬುವರಿಂದಲೇ ನಮ್ಮ ಜೀವನದ ಸಾರ್ಥಕ್ಯ ಹಾಗೂ ಯಶಸ್ವಿತೆಗಳನ್ನು ನಿರ್ಧರಿಸಲಾಗುತ್ತಿದೆ. ಭೋಗ ವಿಲಾಸ ಸಾಮಗ್ರಿಗಳನ್ನು ಬಳಸಿಕೊಳ್ಳುವಿಕೆಯೇ ಇಂದು ಜನಾಂಗದ ಸಭ್ಯತೆ, ನಾಗರಿಕತೆಗಳನ್ನು ಅಳೆಯುವ ಮಾನದಂಡವಾಗಿದೆಯಲ್ಲದೇ ಸಂಸ್ಕೃತಿ ಸದಾಚಾರಗಳಲ್ಲ. ವೈಲಾಸಿಕ ವಸ್ತುಗಳ ಪ್ರದರ್ಶನ, ಫ್ಯಾಷನ್ ಪರೇಡುಗಳ ಸಂಭ್ರಮಗಳಿಲ್ಲದ ಸಮಾಜವನ್ನು ಹಿಂದುಳಿದ ಜನಾಂಗವೆಂದು ಹೀಯಾಳಿಸುವೆವು. ಹೀಗೆ ಕಾಮಪ್ರಧಾನವಾದ ಜೀವನರೀತಿಯು ಇಂದು ಏರ್ಪಟ್ಟಿದೆ. ಈ ನಿರೀಶ್ವರಭಾವನೆ ಹಾಗೂ ಭೌತಿಕ ಸುಖಲಾಲಸೆಯ ಪರಿಣಾಮವೇನು?

ಈಹಂತೇ ಕಾಮಭೋಗಾರ್ಥಂ
ಅನ್ಯಾಯೇನಾರ್ಥಸಂಚಯಾನ್ ।

ತಮ್ಮ ವಿಷಯಲಾಲಸೆಯನ್ನು ತೃಪ್ತಿಪಡಿಸುವುದಕ್ಕಾಗಿ ಅನ್ಯಾಯ ಮಾರ್ಗದಿಂದ ಹಣವನ್ನು ಗಳಿಸುವ ಪ್ರವೃತ್ತಿಯುಂಟಾಗುವುದು. ಇದರ ವಿಶ್ವರೂಪವನ್ನೇ ಲಂಚಗುಳಿತನ, ಕಳ್ಳಪೇಟೆ, ಕಾಳಸಂತೆ, ಆದಾಯಕರವನ್ನು ತಪ್ಪಿಸುವಿಕೆ, ಸರಕಾರ ಹಾಗೂ ಸಾರ್ವಜನಿಕ ಸಂಪತ್ತಿನ ದುರುಪಯೋಗ ಮುಂತಾದ ವಿವಿಧ ರೀತಿಗಳಲ್ಲಿ ಜಗತ್ತಿನಲ್ಲಿ ನೋಡುತ್ತಿರುವೆವು. ನಮ್ಮ ದೇಶದ ಈಗಿನ ಸ್ಥಿತಿಯ ಚಿತ್ರಣವನ್ನೇ ಗೀತೆಯ ಈ ಭಾಗವು ಮಾಡಿದೆಯೇನೋ ಎಂದು ನಮಗನಿಸುತ್ತದೆ.

ಇದಮಸ್ತೀದಮಪಿ ಮೇ ಭವಿಷ್ಯತಿ ಪುನರ್ಧನಮ್ ।
ಆಢ್ಯೋಽಭಿಜನವಾನಸ್ಮಿ ಕೋಽನ್ಯೋಽಸ್ತಿ ಸದೃಶೋ ಮಯಾ ।

''ಇಷ್ಟು ಹಣ ಪಡೆದಿರುವೆನು, ನಾಳೆಗೆ ಇನ್ನಷ್ಟು ದೊರಕಿಸಿಕೊಳ್ಳುವೆನು'' ''ನನಗೆ ಅಧಿಕಾರಬಲವಿದೆ, ನಾನು ಏನು ಬೇಕಾದರೂ ಮಾಡಬಲ್ಲೆ'' ಇಂತಹ

ಲೋಭ, ದರ್ಪಗಳ ಸಾಮ್ರಾಜ್ಯವನ್ನೇ ನಾವು ಎಲ್ಲೆಲ್ಲಿಯೂ ನೋಡುತ್ತಿರುವೆವು.

ಆಸುರೀಭಾವನೆಯಿಂದ ಲೋಕದಲ್ಲಿ ಆಗಬಹುದಾದ ಈ ಅನರ್ಥ ಹಾವಳಿಗಳನ್ನು ತಪ್ಪಿಸಲು ಈಶ್ವರಭಾವನೆಯನ್ನು ಜಾಗೃತಗೊಳಿಸುವುದೇ ಏಕ ಮಾತ್ರ ಉಪಾಯವಾಗಿದೆ. ಈಶ್ವರಭಾವನೆಯು ಸಮಾಜದಲ್ಲಿ ರೂಢಮೂಲವಾದಲ್ಲಿ ಪರಮಾತ್ಮನು ಜಗತ್ತಿನ ಸುವ್ಯವಸ್ಥೆಗಾಗಿ ಆತ್ಮನ ಕಲ್ಯಾಣಕ್ಕಾಗಿ ಏರ್ಪಡಿಸಿದ ನೀತಿನಿಯಮಗಳನ್ನು ಅನುಸರಿಸಬೇಕೆನ್ನುವ ಪ್ರೇರಣೆಯು ಲೋಕದಲ್ಲಿ ಒಡಮೂಡುವುದರಿಂದ ಸ್ವಾರ್ಥಮೂಲಕ ದುಷ್ಪವೃತ್ತಿಗಳು ಕಡಿಮೆಯಾಗಲು ಅವಕಾಶವಾಗುವುದು. ಪರಮಾತ್ಮನ ಮೇಲಿರುವ ಭಕ್ತಿ, ದುಷ್ಟರನ್ನು ನಿಗ್ರಹಿಸಿ ಶಿಷ್ಟರನ್ನು ರಕ್ಷಿಸುವ ಅವನ ನ್ಯಾಯದಾನದ ಮೇಲಿರುವ ನಂಬಿಕೆ- ಇವು ದುಷ್ಟವರ್ತನೆಗೆ ನಾವು ಇಳಿಯದಂತೆ ನಮ್ಮನ್ನು ಎಚ್ಚರಿಸುವವು. ವಿಶ್ವರಕ್ಷಕನಾದ ಪರಮಾತ್ಮನು ನಾವು ಮಾಡುವ ಅಕೃತ್ಯ, ಅಪರಾಧಗಳಿಗೆ ತಕ್ಕ ದಂಡವನ್ನು ನೀಡುವನು. ನಮ್ಮ ಕಾರ್ಯಗಳನ್ನು ನಿರೀಕ್ಷಣ ಮಾಡುವ ಪರಾತ್ಪರ ಶಕ್ತಿ ಇದೆ ಎಂಬ ತಿಳುವಳಿಕೆಯು ಪಾಪ ಅನ್ಯಾಯಗಳಿಂದ ನಮ್ಮನ್ನು ರಕ್ಷಿಸುವುದು.

## ಈಶ್ವರನಿಷ್ಠೆಯ ಆವಶ್ಯಕತೆ

ಇಂತಹ ಆಸ್ತಿಕಭಾವನೆಯೇ ಇಲ್ಲದ ರಾಷ್ಟ್ರಗಳಲ್ಲಿಯೂ ತಕ್ಕಮಟ್ಟಿಗೆ ನೀತಿ ಶಿಸ್ತುಗಳ ಪರಿಪಾಲನೆಯಾಗುತ್ತಿಲ್ಲವೆ? ದೇವರನ್ನು ಒಪ್ಪುವ ರಾಷ್ಟ್ರಗಳಿಗಿಂತ ನಿರೀಶ್ವರವಾದಿ ದೇಶಗಳು ಲೌಕಿಕ ಸುವ್ಯವಸ್ಥೆಯಲ್ಲಿ ಏನೂ ಹಿಂದೆ ಬಿದ್ದಿಲ್ಲ. ಆದುದರಿಂದ ಸಮಾಜದಲ್ಲಿ ನೀತಿ-ನಿಯಮಗಳನ್ನು ಕಾಪಾಡಲು ಧಾರ್ಮಿಕಭಾವನೆಯು ಅನಿವಾರ್ಯವೇನೂ ಅಲ್ಲವೆನ್ನುವ ಆಕ್ಷೇಪವನ್ನು ಕೆಲವರು ಮುಂದೆ ಮಾಡಬಹುದು. ನಿಜ, ಇಂದು ಕಾಯಿದೆ, ಸುವ್ಯವಸ್ಥೆಗಳ ವಿಷಯದಲ್ಲಿ ಆಸ್ತಿಕ, ನಾಸ್ತಿಕ ರಾಷ್ಟ್ರಗಳಲ್ಲಿ ಅಂತಹ ಅಂತರವೇನೂ ಕಾಣಸಿಗುವುದಿಲ್ಲ. ಶೀಲ ನೀತಿ, ಸದ್ಗುಣಗಳನ್ನು ಜೀವನದಲ್ಲಿ ಅಳವಡಿಸಿಕೊಳ್ಳುವುದು ನಮ್ಮ ಕರ್ತವ್ಯವೆಂಬ ಹಳೆಯ ಸಂಸ್ಕಾರ ಪ್ರಭಾವಕ್ಕೆ ಎಲ್ಲ ಮಾನವರೂ ಒಳಗಾದವರೇ. ಈ ಸಂಸ್ಕಾರದ ಮೂಲವೇನು? ಈ ನೀತಿ, ಸದ್ಗುಣಗಳನ್ನು ಏಕೆ

ಅನುಸರಿಸಬೇಕು? ಎನ್ನುವ ಸ್ವತಂತ್ರ ಜಿಜ್ಞಾಸೆಯನ್ನು ಯಾರೂ ಮಾಡಿದಂತಿಲ್ಲ. ಭೌತಿಕ ದೃಷ್ಟಿಯಿಂದ, ಕೇವಲ ತರ್ಕದ ಬಲದಿಂದ ವಿಚಾರಮಾಡಿದಲ್ಲಿ ಈ ರೂಢಿ ಸಂಸ್ಕಾರಗಳೆಲ್ಲ ಛಿನ್ನಭಿನ್ನಗಳಾಗುವವು. ಈಗ ಈ ಮಾನವೀಯವಾದ ಸುಸಂಸ್ಕಾರದ ಬಲದಿಂದ ಒಂದು ರೀತಿಯ ನೀತಿ, ವ್ಯವಸ್ಥೆಗಳನ್ನು ತಕ್ಕಮಟ್ಟಿಗೆ ಕಾಪಾಡಲು ಎಲ್ಲ ದೇಶಗಳೂ ಶಕ್ತಗಳಾಗಿದ್ದರೂ ಈಶ್ವರೀಯ ಭಾವನೆಯಿಲ್ಲದೆ ಇದು ಭದ್ರವಾಗಿ ನೆಲೆನಿಲ್ಲಲಾರದು. ಕುತರ್ಕದ ಕೋಲಾಹದಿಂದ ಈ ಸಂಸ್ಕಾರಭಾವನೆಗಳು ಅಸ್ತವ್ಯಸ್ತಗೊಂಡರೆ ಸಮಾಜದ ಸುವ್ಯವಸ್ಥೆ ಎಲ್ಲಿ ಬುಡಮೇಲಾಗಬಹುದು. ಈಶ್ವರನಿಷ್ಠೆಯ ತಳಹದಿ ಇಲ್ಲದೆಯೂ ಕಂಡು ಬರುತ್ತಿರುವ ಲೋಕ ವ್ಯವಸ್ಥೆಯು ಬರೇ ತಾತ್ಕಾಲಿಕವಾಗಿದ್ದು, ಅದನ್ನು ದೃಢಮೂಲವೆಂದು ನಾವು ಭಾವಿಸಲಾಗದು. ಉಸುಕಿನ ಮನೆಗಳಂತೆ ಅದು ಯಾವಾಗಲಾದರೂ ಕುಸಿದು ಬೀಳಬಹುದು. ಅದಕ್ಕಾಗಿಯೇ ಈಶ್ವರನಿಷ್ಠೆಯು ನಮ್ಮ ಜೀವನದ ಸುದೃಢ ತಳಹದಿಯಾಗಬೇಕೆಂದು ಗೀತೆಯು ಕರೆಯಿತ್ತಿದೆ.

ಇಲ್ಲಿ ಇನ್ನೂ ಒಂದು ಪ್ರಶ್ನೆ ಉದ್ಭವಿಸುತ್ತದೆ. ಪರಮಾತ್ಮನಲ್ಲಿ ಭಕ್ತಿ ಭಾವನೆಯು ಇದ್ದಲ್ಲಿ ಎಲ್ಲವೂ ಸರಿಹೋಗುವುದೆಂದು ನಂಬಲು ಸಾಧ್ಯವಿಲ್ಲ. ಧಾರ್ಮಿಕರಾದವರೂ ಬೇಕಾದಷ್ಟು ಅಕೃತ್ಯ ಮಾಡುವುದನ್ನು ನಾವು ನೋಡುತ್ತಲಿರುವೆವು. ಬಾಯಿಯಲ್ಲಿ ರಾಮಮಂತ್ರವಿದ್ದರೂ ಕೃತಿಯಲ್ಲಿ ಕುತಂತ್ರವೇ ವ್ಯಾಪಿಸಿರುವ ಜನರನ್ನು ಸಾಕಷ್ಟು ಸಂಖ್ಯೆಯಲ್ಲಿ ನಾವು ಕಾಣಬಹುದು. ಪೂಜಾ, ಜಪ, ಪಾರಾಯಣಗಳಲ್ಲಿಯೇ ಹೆಚ್ಚು ವೇಳೆಯನ್ನು ಕಳೆಯುವವರೂ ದ್ರೋಹ, ವಂಚನೆಗಳಿಂದ ಪರರ ಸೊತ್ತನ್ನು ಎತ್ತಿಹಾಕುವ ನಿದರ್ಶನಗಳು ಕಡಿಮೆ ಇಲ್ಲ. ಹೀಗಿರುವಾಗ ದೈವೀಭಾವನೆಯಿಂದ ಸಮಾಜದ ನೈತಿಕ ಸುಧಾರಣೆಯಾಗುವುದೆಂಬುದನ್ನು ಹೇಗೆ ಒಪ್ಪುವುದು ?

ಈ ಆಕ್ಷೇಪವು ವಾಸ್ತವವಿದೆ. ಆದರೆ ಕೆಲವು ಧಾರ್ಮಿಕಮನ್ಯರ ಕೃತಿಗಳಿಂದಲೇ ಧರ್ಮದ ಆವಶ್ಯಕತೆಯನ್ನು ಪ್ರಶ್ನಿಸುವುದು ಉಚಿತವಾಗದು. ನಿಜವಾದ ಧರ್ಮನಿಷ್ಠೆಯ ಅಭಾವದಿಂದಲೇ ಈ ಆಭಾಸಗಳು ನಡೆದಿವೆ. ನಿಜವಾದ ಭಗವದ್ಭಕ್ತನು ಎಂದಿಗೂ ಹೇಯ ಕೃತಿಗಿಳಿಯಲಾರ. ಭಕ್ತಿ ಮತ್ತು ಧರ್ಮ ನಿಷ್ಠೆಯನ್ನು ಕೇವಲ ಬಾಹ್ಯ ಪ್ರದರ್ಶನಗಳಿಂದ ನಿರ್ಧರಿಸಲಾಗದು.

ಪೂಜಾ-ಪಾರಾಯಣಗಳಿಂದಲೇ ಒಬ್ಬನ ಆಂತರಂಗಿಕ ಭಕ್ತಿಯನ್ನು ಅಳೆಯಲು ಸಾಧ್ಯವಿಲ್ಲ. ಧರ್ಮದ ಸೋಗಿನಲ್ಲಿ ತಮ್ಮ ಅವ್ಯವಹಾರಗಳನ್ನು ಮುಚ್ಚಲು ಪ್ರಯತ್ನಿಸುವ ಡಾಂಭಿಕರಿಂದ ಕೂಡಿದ ಪ್ರಪಂಚದಲ್ಲಿ ನಿಜವಾದ ಧಾರ್ಮಿಕರನ್ನು ಗುರುತಿಸುವುದು ಕಠಿಣವೇ ಆಗಿದೆ. ಮನೆಯಲ್ಲಿ ಯಾರಾದರೂ ಮೃತರಾದರೆ ಅಳುವುದು ಕೆಲವು ಸಮಾಜಗಳಲ್ಲಿ ರೂಢಿ ಇದೆ. ಅದಕ್ಕಾಗಿ ಕೆಲವು ಜನರಿಗೆ ಹೊಟ್ಟೆ ತುಂಬ ಊಟ ಹಾಕಿ, ಕೂಲಿ ಕೊಟ್ಟು ಅಳಿಸುತ್ತಾರೆ. ಅದು ಹೃದಯದಿಂದ ಉಕ್ಕಿ ಬರುವ ನಿಜವಾದ ಅಳುವಲ್ಲ. ಕೆಲವರ ಧರ್ಮಾಚರಣೆಯೂ ಇದೇ ಬಗೆಯದು. ಕೂಲಿಯ ಅಳುವಿನಂತೆ, ದೇಶಾವರಿ ನಗುವಿನಂತೆ ಇವರದು ಧರ್ಮದ ವಿಡಂಬನೆ ಮಾತ್ರ. ಇದನ್ನೇ ನಿಜವಾದ ಧರ್ಮನಿಷ್ಠೆ ಎಂದು ನಾವು ಭಾವಿಸಬಾರದು. ಯಾರ ಹೃದಯಾಂತರಾಳದಲ್ಲಿ ಪರಮಾತ್ಮಭಕ್ತಿಯು ನಿರೂಢವಾಗಿದೆಯೋ ಯಾರ ಜೀವನವ್ಯವಹಾರವು ಧಾರ್ಮಿಕ ಭಾವನೆಯಿಂದ ಓತಪ್ರೋತವಾಗಿದೆಯೋ ಅಂತಹ ನಿಜವಾದ ಧರ್ಮಶೀಲರ ಜೀವನವು ಪರಿಶುದ್ಧವೂ ಸದ್ಗುಣಸಂಪನ್ನವೂ ಆಗಿರುತ್ತದೆ. ಈಶ್ವರನನ್ನು ನಾವು ಒಪ್ಪಿಕೊಂಡಿದ್ದರೂ ಆ ನಿಷ್ಠೆಯು ದೃಢವಾಗಿ ನಮ್ಮ ಅಂತರಂಗದಲ್ಲಿ ಬೇರೂರದಿರುವುದರಿಂದ, ನಾಸ್ತಿಕ್ಯ ವಿಚಾರದ ಸ್ವಚ್ಛಂದ ವೃತ್ತಿಯು ನಮ್ಮ ಜೀವನದಲ್ಲಿ ಕಂಡುಬರುತ್ತಿದೆ. ನಿಜವಾದ ಭಗವದ್ಭಕ್ತಿಯು ದೇಶದಲ್ಲಿ ಹಬ್ಬಿದರೆ ಜನಜೀವನದ ರೀತಿ-ನೀತಿಗಳಲ್ಲಿಯೇ ಕ್ರಾಂತಿಕಾರಕ ಪರಿವರ್ತನೆಯಾಗುವುದರಲ್ಲಿ ಸಂದೇಹವಿಲ್ಲ. ಈಗ ಸಾಧಾರಣ ಸ್ಥಿತಿಯಲ್ಲಿರುವ ಭಕ್ತಿಭಾವನೆಯೂ ಜನರ ಹೃದಯದಲ್ಲಿ ನೈತಿಕ ಮೂಲ್ಯಾಂಕನ ಮಾಡಿ ಆಸುರೀ ವೃತ್ತಿಯ ವೇಗವನ್ನು ಕುಂಠಿತಗೊಳಿಸಲು ಎಷ್ಟೋ ಸಹಾಯಕವಾಗಿದೆ.

ಈ ಭಕ್ತಿಭಾವನೆಯನ್ನೇ ಬೆಳೆಸಿ ಅದರಲ್ಲಿ ನೈಜತೆಯನ್ನೂ ದೃಢತೆಯನ್ನೂ ನಿರ್ಮಿಸಿದಲ್ಲಿ ಅದರ ಸತ್ಪರಿಣಾಮವೇ ಅನ್ಯಾದೃಶವಾಗುವುದು.

ಪರಮಾತ್ಮನನ್ನು ತಿರಸ್ಕರಿಸಿ, ಲೋಕವ್ಯವಸ್ಥೆಯ ಭಂಜಕರಾಗಿ ನಡೆಯುವ ಆಸುರೀವೃತ್ತಿಯ ಜನರಿಗೆ ಒದಗುವ ದುರ್ಗತಿಯನ್ನು ಪರಮಾತ್ಮನು ವಿವರಿಸುತ್ತಾನೆ.

ಆಸುರೀಂ ಯೋನಿಮಾಪನ್ನಾ
ಮೂಢಾ ಜನ್ಮನಿ ಜನ್ಮನಿ ।
ಮಾಮಪ್ರಾಪ್ಯೈವ ಕೌಂತೇಯ
ತತೋ ಯಾಂತ್ಯಧಮಾಂ ಗತಿಮ್ ॥

ತಮ್ಮ ದುಷ್ಕೃತಿಗಳಿಂದ ಪರಮಾತ್ಮನಿಂದ ಹೆಚ್ಚೆಚ್ಚು ದೂರ ಸರಿಯುವ ಈ ಅಧಮಾತ್ಮರು ಅವನತಿಯ ದಾರಿಯಲ್ಲಿಯೇ ನಡೆದು, ಕೊನೆಗೆ ಪರಮಾತ್ಮನನ್ನು ಹೊಂದುವ ಸಂಭವವನ್ನೇ ಪೂರ್ಣವಾಗಿ ಕಳೆದುಕೊಳ್ಳುತ್ತಾರೆ. ತಮ್ಮ ಆತ್ಮವನ್ನೇ ಗಹನ ಅಂಧಕಾರದಲ್ಲಿ ಕೆಡಹುತ್ತಾರೆ. ಆಸುರೀ ಪ್ರವೃತ್ತಿಯ ಜನರು ಈ ರೀತಿಯಾಗಿ ಪರಮಾತ್ಮನ ಅವಕೃಪೆಗೆ ಗುರಿಯಾಗಿ ಅಧಃಪಾತದ ಚರಮಸೀಮೆಯನ್ನು ಪಡೆಯುವಂತೆ, ದೈವೀ ಸಂಪತ್ತನ್ನು ಗಳಿಸಿದ ಸಾತ್ತ್ವಿಕವೃತ್ತಿಯ ಸಜ್ಜನಸಮಾಜವು ಆಧ್ಯಾತ್ಮಿಕ ಸೋಪಾನಪಥದಲ್ಲಿ ಕ್ರಮಕ್ರಮವಾಗಿ ಮುಂದುವರಿದು, ಪರಮಾತ್ಮನ ಪ್ರಸಾದದ ಮಹೋನ್ನತ ಪ್ರಾಸಾದದಲ್ಲಿ ಮುಕ್ತಿಯ ಮಹಾನಂದವನ್ನು ಅನುಭವಿಸುವುದು. ಸಜ್ಜನ ದುರ್ಜನರಿಗೆ ಒದಗುವ ಈ ಗತಿವೈವಿಧ್ಯ, ಪರಮಾತ್ಮನ ಈ ಅಬಾಧಿತ ಶಾಸನದಲ್ಲಿ ದುಷ್ಕೃತಿಗಳಿಗೆ ದೊರೆಯುವ ನಿಗ್ರಹದ ನಿಯಮ ಮತ್ತು ಶಿಷ್ಟಕೃತಿಗಳಿಗೆ ನಿಶ್ಚಯವಾಗಿ ದೊರೆಯುವ ಅನುಗ್ರಹದ ಆಶ್ವಾಸನೆ ಇವುಗಳು ಮಾನವನ ಭೌತಿಕ ಪ್ರವೃತ್ತಿ ಮತ್ತು ಕಾಮನೆಗಳಿಗೆ ಒಂದು ಮೇರೆಯನ್ನು ಹಾಕಿ, ಲೋಕದ ಪ್ರಗತಿ, ಪ್ರವರ್ತನೆಗಳಿಗೆ ಅನುಕೂಲವಾಗುವಂತೆ ಅವುಗಳ ಗತಿವಿಧಿಯನ್ನು ಏರ್ಪಡಿಸಿ ಸುವ್ಯವಸ್ಥಿತವೂ ಸುನಿಯಂತ್ರವೂ ಆದ ಜೀವನಯೋಜನೆಯನ್ನು ರೂಪಿಸಿವೆ.

## ತಸ್ಮಾಚ್ಛಾಸ್ತ್ರಂ ಪ್ರಮಾಣಂ ತೇ

ಹೀಗೆ ನಮ್ಮ ಜೀವನದ ಗತಿಯನ್ನೇ ಬದಲಾಯಿಸಿ, ಸರಿಯಾದ ದಿಶೆಗೆ ನಮ್ಮನ್ನು ಒಯ್ಯುವ ಈ ಆಧ್ಯಾತ್ಮಿಕ ದೃಷ್ಟಿಯನ್ನು ನಾವು ಹೇಗೆ ಪಡೆಯಬೇಕು? ಪ್ರತ್ಯಕ್ಷಕ್ಕೆ ಗೋಚರವಾಗದ ಈಶ್ವರ, ಧರ್ಮ, ಅಧರ್ಮ, ಪುಣ್ಯ, ಪಾಪಗಳನ್ನೆಲ್ಲ ನಾವು ಹೇಗೆ ತಿಳಿದುಕೊಳ್ಳುವುದು? ಯುಕ್ತಿಯಿಂದ ಸಾಧಾರಣವಾಗಿ ಈಶ್ವರನ

ಅಸ್ತಿತ್ವವನ್ನು ಮನಗಾಣಬಹುದಾದರೂ ಅವನ ಬಗ್ಗೆ ಹೆಚ್ಚಿನ ವಿವರಗಳನ್ನು ಪ್ರತ್ಯಕ್ಷದಿಂದ ತಿಳಿಯಲಾರೆವು. ಅವನ ಆಕಾರ, ಗುಣ, ಶಕ್ತಿಗಳನ್ನಾಗಲಿ ಅವನ ಸೃಷ್ಟಿಕ್ರಮ, ನೀತಿಧೋರಣೆಗಳನ್ನಾಗಲಿ ಬರಿ ಯುಕ್ತಿಯ ಬಲದಿಂದ ಅರಿಯಲಾರೆವು. ಯಾವ ಕೃತಿಗಳು ದುಷ್ಟ ಹಾಗೂ ಆತ್ಮನ ಅಧಃಪತನಕ್ಕೆ ಕಾರಣವಾಗಿವೆ? ಯಾವವು ಉತ್ತಮ ಕೃತಿಗಳು? ಅವುಗಳ ತಾರತಮ್ಯ, ವೈಚಿತ್ರ್ಯಗಳೇನು? ಇಂತಹ ಇಂದ್ರಿಯಾಗೋಚರ ಸೂಕ್ಷ್ಮವಿಚಾರಗಳನ್ನೆಲ್ಲ ತರ್ಕದ ಬಲದಿಂದ ನಿರ್ಧರಿಸಲು ಸಾಧ್ಯವೇ ಇಲ್ಲ. ಈ ತರ್ಕದ ಮಹಾರಣ್ಯವನ್ನು ಪ್ರವೇಶಿಸಿದರೆ ಯುಕ್ತಿ ಪ್ರತಿಯುಕ್ತಿಗಳ ಗೊಂದಲದಲ್ಲಿ ಸಂಪೂರ್ಣವಾಗಿ ಮಾರ್ಗ ಭ್ರಷ್ಟರಾಗುವ ಸಂಭವವೇ ಇದೆ. ವಾದದ ಪ್ರಸಂಗದಲ್ಲಿ ತನ್ನ ತಾರ್ಕಿಕ ಶಕ್ತಿಯಿಂದ ಪ್ರತಿಯೊಂದು ವಿಷಯವನ್ನೂ ವಿಪರ್ಯಾಸವಾಗಿ ಪ್ರತಿಪಾದನೆ ಮಾಡುವುದು ಕಠಿಣವಾಗಲಾರದು. ಕೇವಲ ತರ್ಕದ ದಾರಿಯಲ್ಲಿಯೇ ನಡೆಯುವ ಜಿಜ್ಞಾಸುವು ಹೆಚ್ಚಿನ ಮಾನಸಿಕ ವಿಕ್ಷಿಪ್ತತೆಗೆ ಗುರಿಯಾಗುವನು. ಹೀಗಾಗಿ ಈ ಆಧ್ಯಾತ್ಮಿಕ ತತ್ತ್ವಗಳನ್ನು ತಿಳಿಯುವುದೆಂತು? ಕರ್ತವ್ಯ ಮತ್ತು ಅಕರ್ತವ್ಯಗಳ ಜಿಜ್ಞಾಸೆಯನ್ನು ಪರಿಹರಿಸಿಕೊಳ್ಳುವ ಬಗೆ ಹೇಗೆ? ಎನ್ನುವ ಪ್ರಶ್ನೆಯು ಉಳಿಯುತ್ತದೆ. ಶ್ರೀಕೃಷ್ಣನು ಇದರ ಪರಿಹಾರ ಮಾರ್ಗವನ್ನು ತೋರಿದ್ದಾನೆ.

**ತಸ್ಮಾತ್ ಶಾಸ್ತ್ರಂ ಪ್ರಮಾಣಂ ತೇ**
**ಕಾರ್ಯಾಕಾರ್ಯವ್ಯವಸ್ಥಿತೌ।**

ಶಾಸ್ತ್ರವೇ ಅತೀಂದ್ರಿಯ ವಸ್ತುವನ್ನು ತಿಳಿಯಲು ನಮಗೆ ಇರುವ ಸಾಧನವಾಗಿದೆ. ಎಲ್ಲವನ್ನೂ ನಮ್ಮ ಇಂದ್ರಿಯಗಳಿಂದಲೇ ತಿಳಿಯಲು ಸಾಧ್ಯವಿಲ್ಲ. ಇಂದ್ರಿಯಗಳ ಶಕ್ತಿಯು ಪರಿಮಿತವಾಗಿದೆ. ಕೆಲವೊಂದು ರೂಪಗುಣ ವಿಶೇಷವುಳ್ಳ ವಸ್ತುಗಳನ್ನು ಮಾತ್ರ ಅವು ಗ್ರಹಿಸಬಲ್ಲವು. ಕಣ್ಣಿಗೆ ಕಾಣದ ಶಬ್ದವನ್ನು ಕಿವಿಯು ಗ್ರಹಿಸುತ್ತದೆ. ಹೀಗೆ ಎಲ್ಲ ಇಂದ್ರಿಯಗಳು ಕೆಲವೊಂದು ನಿಯಮಗಳಿಗನುಸಾರವಾಗಿ ನಿರ್ದಿಷ್ಟ ವಸ್ತುವನ್ನು ಮಾತ್ರ ತೋರಿಸುತ್ತವೆ. ಆದುದರಿಂದ ಇಂದ್ರಿಯಗಳಿಗೆ ಗೋಚರವಾಗದ ವಸ್ತುಗಳೇ ಇಲ್ಲವೆನ್ನುವುದು ಈ ವಿಶಾಲ ವಿಶ್ವದ ಅಪಹಾಸವೆನಿಸುವುದು. ಪ್ರಕೃತಿಯ ಗರ್ಭದಲ್ಲಿ ಅಡಗಿದ ಹೊಸ ಹೊಸ ಸಂಗತಿಗಳು ಪ್ರತಿದಿನವೂ ಎಂಬಂತೆ ಬೆಳಕಿಗೆ ಬರುತ್ತಿರುವ ಇಂದಿನ

ವಿಜ್ಞಾನಯುಗದಲ್ಲಿಯಂತೂ ಪ್ರತ್ಯಕ್ಷಕ್ಕೆ ಗೋಚರವಾಗದ ವಸ್ತುಗಳೇ ಇಲ್ಲವೆನ್ನುವ ವಾದದಲ್ಲಿ ಹುರುಳಿಲ್ಲವೆನ್ನುವುದು ಹೆಚ್ಚು ಸ್ಪಷ್ಟವಾಗುತ್ತಿದೆ. ನಮ್ಮ ಇಂದ್ರಿಯಗಳಿಗೆ ಗೋಚರವಾದುದಷ್ಟೇ ಸತ್ಯವೆಂದು ಭಾವಿಸದೆ ಈ ವಿಶಾಲ ವಿಶ್ವದಲ್ಲಿ ನಾವು ನಮ್ಮ ಇಂದ್ರಿಯಗಳಿಂದ ಕಂಡುಹಿಡಿದಿರುವ ವಸ್ತುಗಳು ಅತ್ಯಲ್ಪವೆಂಬುದನ್ನು ನಾವು ಅರಿತುಕೊಳ್ಳಬೇಕು. ಧ್ಯಾನ, ಯೋಗಾಭ್ಯಾಸ, ತಪಸ್ಸುಗಳಿಂದ ವಿಶ್ವದ ನಿಗೂಢವನ್ನು ಸಾಕ್ಷಾತ್ಕರಿಸಬಲ್ಲ ದಿವ್ಯದೃಷ್ಟಿಯನ್ನು ಪಡೆದಿರುವ ಅನುಭಾವಿಗಳ ವಚನಗಳಿಂದಲೇ ಇಂದ್ರಿಯಾತೀತವಾದ ಈ ಪ್ರಪಂಚವನ್ನು ನಾವು ತಿಳಿದುಕೊಳ್ಳಬೇಕಾಗಿದೆ. ಪ್ರತ್ಯಕ್ಷವಾಗಿ ನೋಡದಿರುವ ಪ್ರಕೃತಿಯ ಅನೇಕ ಅದ್ಭುತ ಸಂಗತಿಗಳನ್ನು ವಿಜ್ಞಾನಿಗಳ ಮಾತಿನಿಂದ ನಾವು ನಂಬುವೆವು. ಅವರು ವೈಜ್ಞಾನಿಕ ಸಲಕರಣೆಗಳನ್ನು ಬಳಸಿ ನಮಗೆ ಅಗೋಚರಗಳಾದ ವಸ್ತುಗಳನ್ನೂ ಗ್ರಹಿಸಬಲ್ಲರು. ಅದರಂತೆಯೆ ಋಷಿಗಳೂ ವಿಶಿಷ್ಟವಾದ ಸಾಧನಸಾಮಗ್ರಿಯಿಂದ ಅಪೂರ್ವ ಶಕ್ತಿಯನ್ನು ಪಡೆದು ನಮಗೆ ಕಾಣದ ಅಲೌಕಿಕ ವಸ್ತುಗಳನ್ನು ನೋಡಬಲ್ಲರು. ವಿಜ್ಞಾನಿಗಳು ತಮ್ಮ ಯಂತ್ರೋಪಕರಣಗಳ ಮೂಲಕವಾಗಿ ತೀವ್ರ ಸಂಶೋಧನೆಯಿಂದ ಕಂಡುಹಿಡಿದ ವಸ್ತುಗಳು ನಮ್ಮ ಸ್ಥೂಲದೃಷ್ಟಿಗೆ ಕಾಣುವುದಿಲ್ಲವೆಂದು ನಾವವನ್ನು ಅಲ್ಲಗಳೆಯುವೆವೆ? ಅಂತಹ ಸೂಕ್ಷ್ಮ ಉಪಕರಣಗಳ ಸಹಾಯದಿಂದ ಆ ವಿಜ್ಞಾನಿಯ ಸಿದ್ಧಾಂತದಲ್ಲಿ ಹುಳುಕುಗಳನ್ನು ತೋರಿಸಲು ಪ್ರಯತ್ನಿಸಿದಲ್ಲಿ ಮಾತ್ರ ಅವನ ಮಾತುಗಳಿಗೆ ಮಹತ್ತ್ವ ಬರಬಹುದಲ್ಲದೆ ಸಂಶೋಧನದ ಯಾವ ಸಾಹಸವನ್ನೂ ಮಾಡದೆ ತೆಪ್ಪಗೆ ಕುಳಿತು ವಿಜ್ಞಾನಿಯು ಹೇಳಿದ್ದು ಕಣ್ಣಿಗೆ ಕಾಣದಿರುವುದರಿಂದ ಅದು ಅಸತ್ಯವೆಂದಿಷ್ಟೇ ಖಂಡಿಸಿದರೆ ಅದಕ್ಕೆ ಯಾವ ಬೆಲೆಯೂ ಬರಲಾರದು. ನಮ್ಮ ಪ್ರಾಚೀನ ಋಷಿ-ಮುನಿಗಳು ತೀವ್ರ ಅಭ್ಯಾಸ, ಯೋಗಸಾಧನೆ ಮುಂತಾದ ಕ್ಲಿಷ್ಟ ಮಾರ್ಗಗಳಿಂದ ಅತೀಂದ್ರಿಯ ಪದಾರ್ಥಗಳನ್ನು ತಾವು ಕಂಡುಹಿಡಿದಿರುವುದಾಗಿ ಸಾರಿರುವಾಗ ಅವರ ಸಾಧನೆಯ ಪಥದಲ್ಲಿ ನಡೆಯದೆ, ತಮ್ಮ ಅನುಭವದ ಪ್ರಧಾನ ಸಾಮಗ್ರಿಯೆಂದು ಅವರು ಹೆಸರಿಸುವ ಯೋಗ, ತಪಸ್ಸುಗಳನ್ನು ಏನೂ ಆಚರಿಸದೆ, ನಮ್ಮ ಸ್ಥೂಲದೃಷ್ಟಿಯ ಆಧಾರದಿಂದಲೇ ಅವರ ವಿಚಾರ ದರ್ಶನಗಳನ್ನು ನಾವು

ಅಲ್ಲಗಳೆಯುವುದರಲ್ಲಿ ಅರ್ಥವೇನಿದೆ? ನಮ್ಮ ಶರೀರಕ್ಕೆ ಸಂಬಂಧಿಸಿದ ಆಹಾರ ಔಷಧಗಳ ಬಗ್ಗೆ ತಜ್ಞನಾದ ವೈದ್ಯನ ಮಾತನ್ನೇ ಅವಲಂಬಿಸಿ ಪ್ರವೃತ್ತಿಸುವೆವು. ಅಲ್ಲಿ ನಮ್ಮ ಪ್ರತ್ಯಕ್ಷ ಹಾಗೂ ತರ್ಕಗಳ ಆಟವೇನೂ ನಡೆಯದು. ವೈದ್ಯನ ಮಾತನ್ನು ಮೀರಿ ಮನಬಂದಂತೆ ಔಷಧಗಳನ್ನು ಸೇವಿಸಿದರೆ ಅನಾಹುತವೇ ಆಗಬಹುದು. ಅದರಂತೆ ಜಗತ್ತಿನ ಸೂಕ್ಷ್ಮ ತತ್ತ್ವಗಳ ಪ್ರತ್ಯಕ್ಷದರ್ಶಿಗಳೆನಿಸಿದ ಅನುಭಾವಿಗಳ ಮಾತಿನಿಂದಲೇ ಜೀವನದ ಕರ್ತವ್ಯ ಅಕರ್ತವ್ಯಗಳನ್ನು ನಿರ್ಧರಿಸಬೇಕು. ಕೇವಲ ತಾರ್ಕಿಕ ಬುದ್ಧಿಯನ್ನೇ ಅವಲಂಬಿಸುವುದರಿಂದ ಅನಿರ್ಧಾರ, ಕಾಲಹರಣ ಮತ್ತು ಗಲಿಬಿಲಿಗಳ ಹೊರತು ಮತ್ತೇನೂ ಸಿದ್ಧಿಸದು. ತರ್ಕದಿಂದ ಅತೀಂದ್ರಿಯ ವಸ್ತುವಿನ ಸಾಮಾನ್ಯ ಕಲ್ಪನೆಯಾಗಬಹುದಾದರೂ ಅದರ ವಿಶೇಷಾಂಶಗಳ ನಿರ್ಧಾರವು ಪ್ರತ್ಯಕ್ಷ ಮತ್ತು ತರ್ಕಗಳಿಗೆ ಅತೀತವೇ ಆಗಿದೆ. ಜಗತ್ತಿನ ಗೂಢ ತತ್ತ್ವಗಳ ವಿಶೇಷಾಂಶಗಳನ್ನು ಅರಿಯದೆ ಅಪೂರ್ಣವಾದ ಜ್ಞಾನದ ಕಳಹದಿಯಲ್ಲಿ ನಮ್ಮ ಜೀವನದ ರೀತಿ-ನೀತಿಗಳನ್ನು ನಾವು ಹೇಗೆ ನಿರ್ಧರಿಸುವುದು? ಅದಕ್ಕಾಗಿ ನಾವು ಶಾಸ್ತ್ರಕ್ಕೆ ಶರಣೆನ್ನಲೇಬೇಕಾಗುವುದು.

ಶಾಸ್ತ್ರವೊಂದರಿಂದಲೇ ತತ್ತ್ವಜ್ಞಾನವನ್ನು ಪಡೆದು ಕರ್ತವ್ಯ ಅಕರ್ತವ್ಯಗಳನ್ನು ನಿರ್ಧರಿಸಬೇಕೆನ್ನುವುದರಿಂದ ತರ್ಕವನ್ನು ಪೂರ್ತಿಯಾಗಿ ಕೈಬಿಡಬೇಕೆಂದು ಅರ್ಥವಲ್ಲ. ತಾತ್ತ್ವಿಕ ವಿಚಾರದಲ್ಲಿ ತರ್ಕಕ್ಕೆ ಅಪೂರ್ವವಾದ ಸ್ಥಾನವಿದೆ. ಬ್ರಹ್ಮ ಮೀಮಾಂಸಾಶಾಸ್ತ್ರವೆಲ್ಲ ಯುಕ್ತಿಗಳ ನಿರೂಪಣೆಯೇ ಆಗಿದೆ.

**ಯಸ್ತರ್ಕೇಣಾನುಸಂಧತ್ತೇ ಸ ಧರ್ಮಂ ವೇದ ನೇತರಃ।**

ತಾರ್ಕಿಕ ಬುದ್ಧಿಯನ್ನು ಉಪಯೋಗಿಸದವನಿಗೆ ಧರ್ಮದ ಪರಿಜ್ಞಾನವೇ ಆಗಲಾರದೆಂದು ಶಾಸ್ತ್ರಕಾರರು ಹೇಳಿರುವರು. ಆದರೆ ತರ್ಕವೊಂದನ್ನೇ ಆಶ್ರಯಿಸಿ ವಸ್ತು ನಿರ್ಧಾರಣೆಗೆ ಹೊರಟಲ್ಲಿ ಜಿಜ್ಞಾಸುವಿಗೆ ತತ್ತ್ವನಿಶ್ಚಯಕ್ಕಿಂತ ಮಾನಸಿಕ ಗೊಂದಲವೇ ಸಂಭವಿಸುವುದು. ತರ್ಕವು ನಮ್ಮ ತತ್ತ್ವಜ್ಞಾನ ಯಾತ್ರೆಯ ವಾಹನವೆನಿಸಲಾರದು; ಅದು ವಾಹನವನ್ನು ಚೆನ್ನಾಗಿ ಬಳಸಲು ಅವಶ್ಯಕವೆನಿಸಿದ ಒಂದು ಉಪಕರಣ ಮಾತ್ರವಾಗಿದೆ. ಶಾಸ್ತ್ರವೇ ಈ ಜ್ಞಾನಯಾತ್ರೆಯ ವಾಹನವಾಗಿದ್ದು, ಶಾಸ್ತ್ರದಿಂದ ಈ ತತ್ತ್ವಜ್ಞಾನವನ್ನು ಪಡೆಯಲು ತರ್ಕವು ಸಹಕಾರಿಯ ಪಾತ್ರವನ್ನು ಮಾತ್ರ ನಿರ್ವಹಿಸುವುದು. ನಮ್ಮ

ಜೀವನದ ಪ್ರತಿಯೊಂದು ನಿರ್ಧಾರಪ್ರವೃತ್ತಿಯಲ್ಲಿಯೂ ತಾರ್ಕಿಕ ಬುದ್ಧಿಯ ಪಾತ್ರವು ಮಹತ್ತ್ವದ್ದಾಗಿದ್ದರೂ ಅದರ ಗತಿ-ವಿಧಿಗಳಿಗೆ ಒಂದು ಪರಿಮಿತಿಯನ್ನು ಕಲ್ಪಿಸಲಾಗಿದೆ. ಮಗುವನ್ನು ಮನೆಯೊಳಗೆ ಹಾಗೂ ಅಂಗಳದಲ್ಲಿ ಆಟವಾಡಲು ಬಿಡುವೆವು. ಆದರೆ ಮನೆಯ ಕಾಂಪೌಂಡಿನ ಹೊರಗೆ ಬಹುದೂರದವರೆಗೆ ಅದನ್ನು ನಾವು ಕಳಿಸಲಾರೆವು. ಅದು ಅಪಾಯಕ್ಕೆ ಒಳಗಾಗಬಾರದೆಂಬುದೇ ನಮ್ಮ ಉದ್ದೇಶ. ಪ್ರತ್ಯಕ್ಷ ಮತ್ತು ಆಗಮಗಳ ವಲಯದಲ್ಲಿ ನಮ್ಮ ತಾರ್ಕಿಕ ಬುದ್ಧಿಯನ್ನು ಸ್ವಚ್ಛಂದವಾಗಿ ಸಂಚಾರ ಮಾಡಿಸಬಹುದು. ಆದರೆ ಆ ಮೇರೆಯನ್ನು ದಾಟಿ ಸಂಚರಿಸಲು ತರ್ಕಕ್ಕೆ ಅನುಮತಿಯನ್ನು ನೀಡಿದರೆ ತತ್ತ್ವಜ್ಞಾನದ ಬದಲು ಅಪಾಯದ ಸಂಭವವೇ ಹೆಚ್ಚು. ಆದುದರಿಂದ ಅತೀಂದ್ರಿಯ ಪ್ರಪಂಚದ ಬಗ್ಗೆ ತರ್ಕವನ್ನು ಅತಿಯಾಗಿ ಉಪಯೋಗಿಸಬಾರದು. ಪ್ರತ್ಯಕ್ಷ ಮತ್ತು ಶಾಸ್ತ್ರದ ಚೌಕಟ್ಟಿನಲ್ಲಿಯೇ ನಮ್ಮ ತಾರ್ಕಿಕ ಶಕ್ತಿಯನ್ನು ಉಪಯೋಗಿಸಬೇಕೆನ್ನುವ ಪರಿಮಿತಿಯನ್ನು ಏರ್ಪಡಿಸಲಾಗಿದೆ. ಉಗಿಬಂಡಿಯು ಎರಡು ಹಳಿಗಳ ಪರಿಧಿಯಲ್ಲಿ ಸಾಗಿದರೆ ಮಾತ್ರ ಗುರಿಯನ್ನು ಮುಟ್ಟಬಹುದು. ಆ ಹಳಿಗಳಲ್ಲಿ ಸ್ವಲ್ಪ ಅತಿಕ್ರಮವಾದರೆ ಅಪಘಾತವೇ ನಡೆಯುವುದು. ತರ್ಕದ ಉಗಿಬಂಡಿಗೂ ಪ್ರತ್ಯಕ್ಷ ಮತ್ತು ಶಾಸ್ತ್ರವೇ ಎರಡು ರೈಲ್ವೇ ಹಳಿಗಳು. ಅವುಗಳನ್ನು ಅತಿಕ್ರಮಿಸದೆ, ಆ ಆಧಾರದಲ್ಲಿಯೇ ತರ್ಕದ ದೀರ್ಘಯಾತ್ರೆಯು ನಡೆಯಬೇಕು. ಪಂಚವಟಿಯಲ್ಲಿ ಸೀತೆಯನ್ನು ಬಿಟ್ಟು ತೆರಳುವ ಲಕ್ಷ್ಮಣನು ಒಂದು ಗೆರೆಯನ್ನು ಹಾಕಿ ಅದನ್ನು ದಾಟದಂತೆ ಎಚ್ಚರಿಸಿದ್ದನಂತೆ. ಸಂನ್ಯಾಸಿ ವೇಷದ ರಾವಣನಿಗೆ ಭಿಕ್ಷೆಯನ್ನು ನೀಡುವ ಭರದಲ್ಲಿ ಸೀತೆಯು ಆ ಗೆರೆಯನ್ನು ದಾಟಿ ರಾವಣನ ಅಪಹರಣಕ್ಕೆ ಒಳಗಾದಳೆಂದು ಒಂದು ಕತೆ ಇದೆ. ನಮ್ಮ ತಾರ್ಕಿಕ ಬುದ್ಧಿಯು ಈ ಲಕ್ಷ್ಮಣ ರೇಖೆಯನ್ನು ದಾಟದೆ ಸಂಚರಿಸಿದರೆ ಅಪಾಯವಿಲ್ಲ. ಶಾಸ್ತ್ರ ಮತ್ತು ಪ್ರತ್ಯಕ್ಷಗಳೇ ಈ ರೇಖೆಯಾಗಿದ್ದು ಈ ವರ್ತುಲದಲ್ಲಿಯೇ ತರ್ಕದ ಸಂಚಾರವನ್ನು ಮಾಡಿಸುವುದರಿಂದ ಹಿತಕರವಾದ ರೀತಿಯಲ್ಲಿ ತತ್ತ್ವಜ್ಞಾನದ ಬೆಳವಣಿಗೆಯಾಗಲು ಅವಕಾಶವಾಗುವುದು. ಆದುದರಿಂದಲೇ

**ತರ್ಕೋಽಪ್ರತಿಷ್ಠಃ।** -ಭಾರತ

**ಕಾಮಾಚ್ಚ ನಾನುಮಾನಾಪೇಕ್ಷಾ।** -ಬ್ರಹ್ಮಸೂತ್ರ

ಎಂದು ಮುಂತಾಗಿ ಕೇವಲ ತರ್ಕಬಲದಿಂದ ಯಾವುದೇ ವಿಷಯವನ್ನು ನಿರ್ಧರಿಸಲು ಬರುವುದಿಲ್ಲವೆಂದು ಅನುಭವವೇದ್ಯವಾಗುವಂತೆ ನಿರೂಪಿಸಿದ್ದಾರೆ. ಅಂತೂ ಪ್ರತ್ಯಕ್ಷ ಮತ್ತು ತರ್ಕಗಳಿಗೆ ಅತೀತವಾದ ಈಶ್ವರ, ಧರ್ಮಾಧರ್ಮಗಳು - ಮುಂತಾದ ಅತೀಂದ್ರಿಯ ಪ್ರಪಂಚದ ವಿಶೇಷ ಸಂಗತಿಗಳನ್ನು ಶಾಸ್ತ್ರದ ಆಧಾರದಿಂದ ನಿರ್ಧರಿಸಿ ಕಾರ್ಯಾಕಾರ್ಯ ವ್ಯವಸ್ಥಿತಿಯನ್ನು ಪಡೆಯಬೇಕು. ಇದರ ಹೊರತು ಬೇರೆ ಸ್ವತಂತ್ರ ವಿಚಾರಗಳು ಅಪಾಯದ ದಾರಿಗೇ ನಮ್ಮನ್ನು ಎಳೆಯಬಲ್ಲವು. ಶಾಸ್ತ್ರನಿಯಂತ್ರಿತವಾದ ಜೀವನ ರೀತಿಯು ಉಚ್ಛೃಂಖಲವೃತ್ತಿಯಿಂದ ನಮ್ಮನ್ನು ಪಾರುಮಾಡುವುದು. ದೈವೀಸಂಪತ್ತಿಯ ಸಂದೇಶವನ್ನು ಈ ಶಾಸ್ತ್ರದಿಂದಲೇ ನಾವು ಪಡೆಯಬಲ್ಲೆವು ಎನ್ನುವುದೇ ಈ ಭಾಗದ ಮತಿತಾರ್ಥವಾಗಿದೆ.

ಶಾಸ್ತ್ರವೆಂದರೆ ವೇದ ಉಪನಿಷತ್ತುಗಳು ಮತ್ತು ಅವನ್ನು ಆಧರಿಸಿದ ಗ್ರಂಥಗಳು. ಈ ವೇದವಂತೂ ಅಪೌರುಷೇಯವಾಗಿದೆ. ಅದು ವ್ಯಕ್ತಿಯ ನಿರ್ಮಿತಿಯಲ್ಲ. ವ್ಯಕ್ತಿಯ ರಚನೆಯಾಗಿದ್ದರೆ ಅವನ ಬುದ್ಧಿ, ದೋಷಗಳ ಪ್ರತಿಫಲವನ್ನು ಅದರಲ್ಲಿ ಶಂಕಿಸುವ ಸಂಭವವಿತ್ತು. ಪುರುಷಬುದ್ಧಿಗೆ ಅತೀತವಾದ ಈ ಅನಾದಿಯಾದ ವೇದದಲ್ಲಿ ಮಾನವೀಯ ಬುದ್ಧಿಯ ದೋಷ, ದೌರ್ಬಲ್ಯಗಳ ಸೋಂಕೂ ಇಲ್ಲದಿರುವುದರಿಂದ ಈ ಸನಾತನ ಸಂದೇಶವನ್ನೇ ಆಧರಿಸಿ ನಮ್ಮ ಜೀವನವನ್ನು ರೂಪಿಸಬೇಕು. ಇದೇ ಪರಮಾತ್ಮ ಹಾಗೂ ಜಗತ್ತಿನ ಅತೀಂದ್ರಿಯ ವಸ್ತುಗಳ ಬಗ್ಗೆ ಯಥಾರ್ಥವಾದ ತಿಳುವಳಿಕೆಯನ್ನು ನೀಡಬಲ್ಲದು. ವೇದಾಪೌರುಷೇಯತ್ವವೇ ಒಂದು ಬಹುದೊಡ್ಡ ವಿಚಾರವಾಗಿರುವುದರಿಂದ ಅದನ್ನು ನಾವು ಇಲ್ಲಿ ವಿಸ್ತರಿಸುವುದಿಲ್ಲ. ಅಂತೂ ಅಪೌರುಷೇಯಗಳಾದ ವೇದ, ಉಪನಿಷತ್ತುಗಳೇ ಶಾಸ್ತ್ರವಾಗಿದ್ದು, ಅವುಗಳಲ್ಲಿ ಪ್ರತಿಪಾದಿಸಿದ ವಿಚಾರಗಳಿಗೆ ಸಂಗತವೂ ಅನುಕೂಲವೂ ಆದ ಗ್ರಂಥಗಳೆಲ್ಲವೂ ಶಾಸ್ತ್ರವೆನಿಸುತ್ತವೆ. ಅಗೋಚರ ವಸ್ತುಗಳನ್ನು ನಿರ್ಧರಿಸಿ ಜೀವನದ ನಿಜ ಉದ್ದೇಶವನ್ನು ಅರಿತು ಅದರಂತೆ ಸಾಗಬೇಕಾದ ನಮ್ಮ ಜೀವನದ ದಿವ್ಯಯಾತ್ರೆಗೆ ಇವೇ ದಿಗ್ದರ್ಶಕಗಳಾಗಿವೆ.

# ಧರ್ಮ ಮತ್ತು ನಿತ್ಯವ್ಯವಹಾರ

ಸತ್ತ್ವ, ರಜಸ್ಸು, ತಮಸ್ಸುಗಳು ನಮ್ಮ ಜೀವನ, ವ್ಯವಹಾರಗಳಲ್ಲಿ ಬೀರುವ ಪ್ರಭಾವದ ವಿವರಣೆಯನ್ನು ಹದಿನೇಳನೆಯ ಅಧ್ಯಾಯದಲ್ಲಿ ಮಾಡಿದೆ. ಆತ್ಮನ ಮೂಲಭೂತ ಸ್ವಭಾವಕ್ಕನುಸರಿಸಿ ನಮ್ಮ ಪ್ರವೃತ್ತಿಗಳಲ್ಲಿಯೂ ವೈವಿಧ್ಯ ಉಂಟಾಗುತ್ತದೆ.

**ಸತ್ತ್ವಾನುರೂಪಾ ಸರ್ವಸ್ಯ**
**ಶ್ರದ್ಧಾ ಭವತಿ ಭಾರತ।**

ನಮ್ಮ ಈ ಬಾಹ್ಯ ವಿಚಾರ, ವರ್ತನೆ, ನಂಬಿಕೆಗಳಿಗೆ ಆತ್ಮನ ವ್ಯಕ್ತಿತ್ವವೇ ಮೂಲಕಾರಣವಾಗಿದೆ. ರಾಜಸ, ತಾಮಸ ವೃತ್ತಿಗಳಿಂದ ನಮ್ಮ ವ್ಯವಹಾರಗಳೆಲ್ಲವೂ ದೂಷಿತವಾಗುವವು. ನಮ್ಮ ಲೌಕಿಕ ಹಾಗೂ ಧಾರ್ಮಿಕ ವ್ಯವಹಾರಗಳೆರಡರಲ್ಲಿಯೂ ಸತ್ತ್ವ, ರಜಸ್ಸು, ತಮಸ್ಸುಗಳು ತಮ್ಮ ಮುದ್ರೆಯನ್ನು ಒತ್ತಬಲ್ಲವು. ಲೌಕಿಕ ವ್ಯವಹಾರಗಳಲ್ಲಿಯೂ ತಾತ್ತ್ವಿಕ ವೃತ್ತಿಯು ಅನುಸ್ಯೂತವಾದಾಗ ಅವು ಧರ್ಮಗಳೇ ಎನಿಸುವವು. ಧರ್ಮಾಚಾರಗಳೂ ರಾಜಸ, ತಾಮಸ ಭಾವನೆಗಳಿಂದ ಕಲುಷಿತಗೊಂಡರೆ ಅವೇ ಅಧರ್ಮಗಳಾಗಬಲ್ಲವು. ತುಲಾಧಾರ, ಧರ್ಮವ್ಯಾಧರು ನಡೆಸಿದ ವ್ಯಾಪಾರ ವ್ಯವಹಾರಗಳು ಧರ್ಮವೆನಿಸಿದ್ದರೆ, ರಾವಣ, ಜರಾಸಂಧರಂತಹವರು ಮಾಡಿದ ತಪಸ್ಸು ಅಧರ್ಮವಾಗಿದೆ.

**ಧರ್ಮೋ ಭವತ್ಯಧರ್ಮೋಽಪಿ**
**ಕೃತೋ ಭಕ್ತೈಸ್ತವಾಚ್ಯುತ।**
**ಪಾಪಂ ಭವತಿ ಧರ್ಮೋಽಪಿ**
**ಯೋ ನ ಭಕ್ತೈಃ ಕೃತೋ ಹರೇ॥**

-ಸದಾಚಾರಸ್ಮೃತಿ

''ಭಗವದ್ಭಕ್ತರಾದ ಸಜ್ಜನರು ಮಾಡಿದ ಧರ್ಮಭಿನ್ನವಾದ ವ್ಯವಹಾರವೂ ಧರ್ಮವಾಗಬಲ್ಲದು. ಅಭಕ್ತರಾದ ದುಷ್ಟ ಜನರು ಆಚರಿಸಿದ ಧರ್ಮವೂ ಪಾತಕವಾಗುವುದು'' ತುಲಾಧಾರರಂತಹವರು ಮಾಡಿದ ವ್ಯಾಪಾರವೂ

ಧರ್ಮವಾಗಿದ್ದರೆ, ಇಂದು ಜನರು ಲೋಭವೃತ್ತಿಯಿಂದ ಮಾಡುವ ವ್ಯಾಪಾರವೇ ಅಧರ್ಮವಾಗುತ್ತಿದೆ. ನಮ್ಮ ಭೋಜನಾದಿ ವ್ಯವಹಾರಗಳೂ ದಾನ, ತಪಸ್ಸು, ಯಜ್ಞಗಳೂ ಸತ್ತ್ವ, ರಜ, ತಮಗಳಿಂದ ವೈವಿಧ್ಯವನ್ನು ಪಡೆಯುವವು. ಆಹಾರ, ನಿದ್ರೆ, ಕಾಮ ವ್ಯವಹಾರಗಳು ಪಶುಗಳಿಗಿರುವಂತೆ ಮಾನವನಿಗೂ ಇವೆ. ಅವನ್ನು ಮಾನವನು ಬಿಡಲೂ ಸಾಧ್ಯವಿಲ್ಲ. ಧಾರ್ಮಿಕನಾಗಲು ಈ ವ್ಯವಹಾರಗಳನ್ನು ಬಿಡಬೇಕೆಂದು ಇಲ್ಲ. ಪಶುಗಳು ಯಾವುದೇ ನೀತಿ, ನಿರ್ಬಂಧಗಳಿಲ್ಲದೆ ಸ್ವಚ್ಛಂದವಾಗಿ ಆಹಾರ-ನಿದ್ರಾದಿಗಳನ್ನು ಸೇವಿಸುವವು. ಅವೇ ವ್ಯವಹಾರಗಳಲ್ಲಿ ಒಂದು ಶಿಸ್ತನ್ನು, ಒಂದು ನಿಯಮವನ್ನು ಜೋಡಿಸಿದಾಗಲೇ ನಾವು ಧಾರ್ಮಿಕರಾಗುವೆವು. ಧರ್ಮವೆಂದರೆ ಲೌಕಿಕ ವ್ಯವಹಾರಗಳ ಪರಿವರ್ಜನೆಯಲ್ಲ. ಪಶುಗಳೂ ನಡೆಸುವಂತಹ ಈ ವ್ಯವಹಾರಗಳಲ್ಲಿ ಧರ್ಮನೀತಿಗಳನ್ನು ಜೋಡಿಸಿದಾಗಲೇ ನಾವು ಮಾನವರಾಗಬಲ್ಲೆವು. ಡಾರ್ವಿನ್ ವಾದದಂತೆ ಪಶುಗಳೇ ವಿಕಾಸವನ್ನು ಹೊಂದಿ ಮಾನವರಾಗಿ ಪರಿವರ್ತಿತರಾಗಿರುವರೆಂದು ವಿಜ್ಞಾನಿಗಳು ಹೇಳುತ್ತಿದ್ದರೆ, ಮಾನವರೇ ಪಶುಗಳಾಗಿ ಪರಿವರ್ತನೆಗೊಂಡು ಆ ವಾದದ ತಿರುವು ಮುರುವು ನಡೆದಿದೆಯೇನೋ ಎನ್ನುವ ರೀತಿಯ ಕಪಿಚೇಷ್ಟೆ, ಪಶುವರ್ತನೆಗಳನ್ನು ಜಗತ್ತಿನಲ್ಲಿ ನಾವು ಎಲ್ಲೆಡೆಗಳಲ್ಲಿಯೂ ನೋಡುತ್ತಿರುವೆವು.

## ಆಹಾರ

ಮದ್ಯ-ಮಾಂಸಗಳಂತಹ ದುಷ್ಟ ಖಾದ್ಯ-ಪೇಯಗಳನ್ನು ಪರಿತ್ಯಜಿಸಿ, ಶರೀರ, ಮನಸ್ಸುಗಳಿಗೆ ಹಿತಕರವಾದ ಶುಚಿ ಆಹಾರವನ್ನು ಸೇವಿಸುವುದು ಭೋಜನ ವ್ಯವಹಾರದಲ್ಲಿ ನಾವು ಅಳವಡಿಸಿಕೊಳ್ಳಬೇಕಾದ ಶಿಸ್ತು, ನಿಯಮಗಳಾಗಿವೆ. ಅದನ್ನು ನಿಯತವೇಳೆಯಲ್ಲಿ ಸ್ವೀಕರಿಸುವುದು, ಭಗವಂತನಿಗೆ ಸಮರ್ಪಿಸಿ, ಅವನ ಪ್ರಸಾದವೆಂದು ಪರಿಗ್ರಹಿಸುವುದು ಮೊದಲಾದ ನೀತಿ, ನಿಯಮಗಳನ್ನು ಜೋಡಿಸಿದಾಗಲೇ ನಮ್ಮದು ಸಾತ್ತ್ವಿಕ ಭೋಜನವಾಗುವುದು. ನಿದ್ರೆ, ಕಾಮವ್ಯವಹಾರಗಳಲ್ಲಿಯೂ ಇಂತಹ ನೀತಿ, ನಿರ್ಬಂಧಗಳನ್ನು ಸಮಾವೇಶಗೊಳಿಸಿದಲ್ಲಿ ಅವುಗಳಲ್ಲಿಯೂ ಸಾತ್ತ್ವಿಕತೆಯು ತುಂಬುವುದು.

ನಾವು ಸ್ವೀಕರಿಸಿದ ಆಹಾರವೇ ನಮ್ಮ ಮನೋಬುದ್ಧಿಗಳಾಗಿ ಪರಿಣಾಮಗೊಳ್ಳುವುದು.

**ಅನ್ನಮಶಿತಂ ತ್ರೇಧಾ ಭವತಿ।**

ನಾವು ಸೇವಿಸಿದ ಆಹಾರವು ಮೂರು ರೀತಿಯಲ್ಲಿ ವಿಭಕ್ತವಾಗುವುದು. ಅದರ ಒಂದು ಸೂಕ್ಷ್ಮ ಭಾಗವೇ ನಮ್ಮ ಮನಸ್ಸಾಗಿ ಪರಿಣತಗೊಳ್ಳುವುದು ಎಂದು ಛಾಂದೋಗ್ಯೋಪನಿಷತ್ತಿನಲ್ಲಿ ಉಲ್ಲೇಖವಿದೆ. ನಾವು ಸ್ವೀಕರಿಸುವ ಆಹಾರದ ಗುಣಧರ್ಮಗಳನ್ನನುಸರಿಸಿಯೇ ನಮ್ಮ ಮನಸ್ಸಿನಲ್ಲಿ ವಿಕೃತಿ, ಸಂಸ್ಕೃತಿಗಳಿವೆ. ಶರೀರಕ್ಕೆ ಪೋಷಕವಾಗಿರುವ ಮಾಂಸಾಹಾರವನ್ನು ಏಕೆ ಸ್ವೀಕರಿಸಬಾರದೆಂದು ಕೆಲವರು ಕೇಳುವುದುಂಟು. ಅದರಿಂದ ನಮ್ಮ ಶರೀರವೇನೋ ಉಬ್ಬಬಹುದು. ಆದರೆ ನಮ್ಮ ಆತ್ಮ, ಅಂತಃಕರಣಗಳು ಪೂರ್ತಿಯಾಗಿ ಕುಗ್ಗುವವು. ಇಂತಹ ಆಹಾರಗಳಿಂದ ಶರೀರವು ಪರಿಪುಷ್ಟವಾಗಿ ಬೆಳೆದರೂ ಸ್ವೇಚ್ಛಾಚಾರ, ವಿಲಾಸಪ್ರವೃತ್ತಿ, ದೌಷ್ಟ್ಯಗಳು ಅಂತಃಕರಣದಲ್ಲಿ ಅದೇ ಪ್ರಮಾಣದಲ್ಲಿ ವೃದ್ಧಿಹೊಂದುವವು. ಸಾತ್ತ್ವಿಕ ಆಹಾರದಿಂದಲೇ ಮನಸ್ಸು ಸಾತ್ತ್ವಿಕವಾಗಿ ಪರಿಣಮಿಸುವುದು. ನ್ಯಾಯವಾದ ಪದ್ಧತಿಯಿಂದ ಯೋಗ್ಯ ಆಹಾರವನ್ನು ಗಳಿಸಿ ಭಗವಂತನಿಗೆ ನಿವೇದಿಸಿ ಸ್ವೀಕರಿಸುವುದೇ ವಿಹಿತವಾದ ಸಾತ್ತ್ವಿಕ ಭೋಜನದ ರೀತಿಯಾಗಿದೆ. ಇದರಿಂದಲೇ ನಮ್ಮ ಶರೀರವೂ ಮನಸ್ಸೂ ಪುನೀತವಾಗುವವು.

ಆಹಾರದಿಂದ ನಮ್ಮ ಮನಸ್ಸಿನ ಮೇಲೆ ಆಗುವ ಪರಿಣಾಮದ ಬಗ್ಗೆ ಒಂದು ಮನೋರಂಜಕವಾದ ಕಥೆಯು ಪ್ರಚಲಿತವಿದೆ. ಮಹಾಭಾರತದ ಯುದ್ಧವು ಮುಗಿದ ಮೇಲೆ ಧರ್ಮರಾಜನ ಮನಃಶಾಂತಿಗಾಗಿ ಭೀಷ್ಮರು ವಿವಿಧ ಧರ್ಮಗಳನ್ನು ವಿಸ್ತಾರವಾಗಿ ಬೋಧಿಸುವರು. ಇದನ್ನು ಕೇಳಿದ ದ್ರೌಪದಿಯು ಪ್ರಶ್ನಿಸುವಳು: ''ಧರ್ಮದ ಬಗ್ಗೆ ಧಾರಾಳವಾಗಿ ಉಪದೇಶ ಮಾಡುವ ತಾವು ನನ್ನ ಮಾನಹರಣವನ್ನು ದುರ್ಯೋಧನ, ದುಃಶಾಸನರು ನಡೆಸಿದಾಗ ಅನ್ಯಾಯವನ್ನು ಪ್ರತಿಭಟಿಸದೆ ಏಕೆ ತಟಸ್ಥರಾದಿರಿ? ಆಗ ಧರ್ಮಪ್ರಜ್ಞೆಯು ಏಕೆ ಜಾಗೃತವಾಗಲಿಲ್ಲ?'' ಇದಕ್ಕೆ ಭೀಷ್ಮರು ನೀಡಿದ ಉತ್ತರವಿದು: ''ದ್ರೌಪದಿ,

ಅಂದು ನಾನು ದುರ್ಯೋಧನನು ನೀಡಿದ ಅನ್ನವನ್ನು ಸ್ವೀಕರಿಸುತ್ತಿದ್ದೆ. ಆ ಪಾಪದ ಅನ್ನವನ್ನು ಉಂಡು ಕೊಬ್ಬಿದ ಈ ದೇಹದಲ್ಲಿ ಧರ್ಮಪ್ರಜ್ಞೆಯ ಸುಳಿವೇ ಇರಲಿಲ್ಲ. ದುಷ್ಟ ಆಹಾರದ ಪರಿಣಾಮವಾದ ತಾಮಸವೃತ್ತಿಯ ಅಬ್ಬರದಲ್ಲಿ ಧರ್ಮದ ದನಿಯೇ ಆಗ ಕೇಳಿಸದಂತಿತ್ತು. ಆದರೆ ಮಹಾಯುದ್ಧದಲ್ಲಿ ಅರ್ಜುನನ ಬಾಣವರ್ಷಗಳಿಂದ ನನ್ನ ಶರೀರದಿಂದ ರಕ್ತಧಾರೆಯೆಲ್ಲ ಹೊರಗೆ ಹರಿದಿದೆ. ದುರ್ಯೋಧನನು ನೀಡಿದ ಆಹಾರವನ್ನು ಸೇವಿಸಿ ಸಿದ್ಧವಾದ ರಕ್ತಧಾರೆ ಹರಿದುಹೋಗಿ ಅಸ್ಥಿಮಾತ್ರವಾದ ನನ್ನ ಶರೀರವು ಈಗ ಪರಿಶುದ್ಧವಿದೆ. ಆ ದುಷ್ಟ ಆಹಾರದ ಪರಿಣಾಮ ವಿಕೃತಿಗಳಾವವೂ ಈಗ ನನ್ನಲ್ಲಿ ಕಂಡು ಬರುವುದಿಲ್ಲ. ಈಗ ಸ್ವಾಭಾವಿಕವಾಗಿ ಧರ್ಮಪ್ರಜ್ಞೆಯು ಜಾಗೃತವಾದುದರಿಂದಲೇ ಈ ವಿಸ್ತಾರವಾದ ಉಪದೇಶವನ್ನು ನಾನು ನೀಡುವಂತಾಗಿದೆ.''

ಆದುದರಿಂದಲೇ ನಮ್ಮ ಭಾರತೀಯ ಸಂಸ್ಕೃತಿಯಲ್ಲಿ ಆಹಾರಸೇವನೆಯ ಬಗ್ಗೆ ವಿಶಿಷ್ಟ ಹಾಗೂ ಹಿತಕರ ನಿರ್ಬಂಧಗಳಿಗೆ ಪ್ರಾಶಸ್ತ್ಯವನ್ನು ನೀಡಲಾಗಿದೆ. ಮಾಂಸಾಹಾರವನ್ನು ಪೂರ್ತಿಯಾಗಿ ಪರಿತ್ಯಜಿಸಿ ಶಾಕಾಹಾರವನ್ನೇ ಸ್ವೀಕರಿಸುವ ನಮ್ಮ ಭಾರತೀಯ ಪರಂಪರೆಯನ್ನು ಕಂಡು ವಿದೇಶೀಯರು ಅಚ್ಚರಿಪಟ್ಟಿದ್ದಾರೆ. ಶತಮಾನ ಶತಮಾನಗಳಿಂದ ಆಹಾರದ ಈ ಸಾತ್ತ್ವಿಕನಿಯಮಗಳು ಸಹಜವಾಗಿ ನಮ್ಮ ಜೀವನದಲ್ಲಿ ಹಾಸುಹೊಕ್ಕಾಗಿ, ನಮ್ಮ ಭಾರತೀಯ ಸಂಸ್ಕೃತಿಯು ದೊಡ್ಡ ಪವಾಡವನ್ನೇ ಮಾಡಿದೆ.

ಯಜ್ಞ, ದಾನ, ತಪಸ್ಸುಗಳನ್ನು ದುರಭಿಸಂಧಿಯಿಂದ, ಪ್ರತಿಫಲಾಪೇಕ್ಷೆಯಿಂದ, ಪ್ರದರ್ಶನ ಮನೋಭಾವದಿಂದ, ಅಸಡ್ಡೆ, ಅಹಂಕಾರಗಳಿಂದ ನಡೆಸಿದರೆ ಲೋಕಕ್ಕೆ ಹಾನಿ, ಉಪಪ್ಲವಗಳೇ ಆಗುವವು. ರಾಜಸ, ತಾಮಸಗಳಾದ ಈ ಧಾರ್ಮಿಕ ವ್ಯವಹಾರಗಳೆಲ್ಲವೂ ಅಧರ್ಮವೆಂದೇ ಪರಿಗಣಿಸಲ್ಪಟ್ಟಿವೆ. ಧರ್ಮದ ಈ ವಿಕೃತರೂಪವನ್ನು ಇಂದು ನಾವು ಲೋಕದಲ್ಲಿ ಹೆಚ್ಚಾಗಿ ಕಾಣುತ್ತಿದ್ದೇವೆ.

## ದಾನ

ದಾನವು ಭಗವಂತನು ಮಾನವರಿಗೆ ನೀಡಿದ ಶ್ರೇಷ್ಠ ಕೊಡುಗೆ. ದೇವ, ಅಸುರ,

ಮಾನವರಿಗೆ ಸೃಷ್ಟಿಕರ್ತನಿಂದ 'ದ' ಎಂಬ ಉಪದೇಶವನ್ನು ಕೊಡಲಾಯಿತು. ಅಹಂಕಾರಕ್ಕೆ ವಶರಾದ ದೇವತೆಗಳಿಗೆ ದಮ ಅರ್ಥಾತ್ ಆತ್ಮನಿಗ್ರಹದ ಸಂದೇಶವು ಇದರಿಂದ ದೊರಕಿದರೆ ಹಿಂಸಾ ವೃತ್ತಿಯ ಕ್ರೂರ ಅಸುರರು ದಯೆಯ ಪಾಠವನ್ನು ಈ ಉಪದೇಶದಿಂದ ಪಡೆದರು; ಲೋಭವೃತ್ತಿಯ ಮಾನವರು ಈ 'ದ' ದಿಂದ ದಾನದ ಸ್ಫೂರ್ತಿಯನ್ನು ಪಡೆದರು ಎಂದು ಉಪನಿಷತ್ತಿನಲ್ಲಿ ಕಥೆ ಇದೆ. ಮಾನವರು ತಮ್ಮಲ್ಲಿದ್ದುದನ್ನೆಲ್ಲ ಭಗವಂತನ ಸೇವಾವೃತ್ತಿಯಿಂದ ಸಮಾಜಕ್ಕೆ ನೀಡುವ ಉದಾರತೆಯನ್ನು ಪಡೆದು ಆದರ್ಶ ಮಾನವರಾಗಲು ಪ್ರಯತ್ನಿಸಬೇಕು. ಈ ದಾನದಲ್ಲಿಯೂ ರಾಜಸ, ತಾಮಸ ಭಾವದ ಪ್ರವೇಶಕ್ಕೆ ಅವಕಾಶವಿದೆ. ಪ್ರತ್ಯುಪಕಾರದ ಅಪೇಕ್ಷೆಯಿಂದ, ಕುಹಕ ದೃಷ್ಟಿಯಿಂದ ಮಾಡಿದ ದಾನವು ತನ್ನ ಪವಿತ್ರತೆಯನ್ನು ಕಳೆದುಕೊಳ್ಳುವುದು. ದಾಕ್ಷಿಣ್ಯಕ್ಕೆ ಒಳಗಾಗಿ ಸಂಕ್ಲೇಶದಿಂದ ನೀಡುವ ದಾನವೂ ಇಂತಹದೇ. ತಮ್ಮ ಅಧಿಕಾರ, ಹಂಗುಗಳನ್ನು ಸ್ಥಾಪಿಸುವ ಕುತಂತ್ರದಿಂದ ಪ್ರಬಲ ರಾಷ್ಟ್ರಗಳು ಹಿಂದುಳಿದ ರಾಷ್ಟ್ರಗಳಿಗೆ ನೀಡುವ ದುರುದ್ದೇಶಪೂರ್ಣವಾದ ದಾನವೈಖರಿಯು ಅಂತಾರಾಷ್ಟ್ರೀಯ ರಂಗದಲ್ಲಿ ಸಾಕಷ್ಟು ಪ್ರಸಿದ್ಧಿಯನ್ನು ಪಡೆದಿದೆ. ಅಧಿಕಾರದ ಬಲವನ್ನು ಉಪಯೋಗಿಸಿ ಶ್ರೀಮಂತರಿಂದ ದಾನವನ್ನು ಪಡೆಯುವುದಂತೂ ವಾಡಿಕೆಯ ಸಂಗತಿಯೇ ಆಗಿದೆ. ಹೀಗೆ ನಾನಾರೀತಿಯ ದಾನದ ಆಭಾಸಗಳು ಈಗ ಜಗತ್ತಿನಲ್ಲಿ ಪ್ರಚಲಿತವಾಗಿವೆ. ಎಲ್ಲೆಲ್ಲಿಯೂ ಇಂತಹ ದಾನದ ಅಸಾತ್ತ್ವಿಕ ದೃಶ್ಯಗಳೇ ಕಂಡುಬರುತ್ತವೆ. ಮಾನವೀಯ ಅನುಕಂಪದಿಂದ ಪ್ರೇರಿತವಾದ ಸ್ವಾರ್ಥನಿರಪೇಕ್ಷವಾದ ಪುಣ್ಯತಮ ಸಾತ್ತ್ವಿಕ ದಾನವು ಇಂದು ಅಪೂರ್ವವೇ ಆಗಿದೆ. ಪ್ರತಿಯೊಂದು ದಾನದ ಹಿನ್ನೆಲೆಯಲ್ಲಿಯೂ ಏನಾದರು ಕುಹಕ, ಕುತಂತ್ರಗಳೇ ಅಡಕವಾಗಿರುತ್ತವೆ.

ದಾನದ ಪವಿತ್ರತೆಯ ಬಗ್ಗೆ ಶಿಬಿರಾಜನ ಕತೆಯನ್ನು ಭಾರತದಲ್ಲಿ ಉದಾಹರಿಸಲಾಗಿದೆ. ಒಮ್ಮೆ ನಾರದರು ಕ್ಷತ್ರಿಯರಾದ ಶಿಬಿ, ವಸುಮಂತ ಪ್ರತರ್ದನ, ಅಷ್ಟಕರೊಡನೆ ಧರ್ಮಚರ್ಚೆಯನ್ನು ನಡೆಸುತ್ತಿದ್ದಾಗ ಒಂದು ಪ್ರಶ್ನೆಯು ಉದ್ಭವಿಸಿತು. ಈ ಐದು ಜನರು ಸ್ವರ್ಗವನ್ನು ಏರುವ ಸಂದರ್ಭದಲ್ಲಿ ಮೊದಲು ಕೆಳಗೆ ಇಳಿಯುವ ಪ್ರಸಂಗವು ಇವರಲ್ಲಿ ಯಾರಿಗೆ ಬರುವುದು ಎಂದು.

ಅಷ್ಟಕನೇ ಮೊದಲು ಕೆಳಗಿಳಿಯುತ್ತಾನೆಂದು ನಾರದರೆಂದರು. ''ಅಷ್ಟಕನು ಸಾಕಷ್ಟು ದಾನನೀಡಿ ಕೀರ್ತಿಗಳಿಸಿದ್ದಾನೆ. ಆದರೆ ಒಮ್ಮೆ ನಾನು ಆತನೊಡನೆ ಸಂಚರಿಸುತ್ತಿದ್ದಾಗ ಒಂದೆಡೆ ನೂರಾರು ಗೋವುಗಳನ್ನು ನೋಡಿ 'ಇವು ಯಾರವು?' ಎಂದು ನಾನು ಕೇಳಿದನೆ, ತಾನು ಬ್ರಾಹ್ಮಣರಿಗೆ ದಾನ ಮಾಡಿದ ಗೋವುಗಳಿವು ಎಂದು ಹೆಮ್ಮೆಯಿಂದ ಅವನು ನುಡಿದನು. ದಾನದ ಜೊತೆಗೆ ಈ ಅಹಂಭಾವ. ಹೆಗ್ಗಳಿಕೆಗಳು ಜೊತೆಗಿರುವುದರಿಂದ ಅವನೇ ಮೊದಲು ಕೆಳಗಿಳಿಯುತ್ತಾನೆ'' ಅವನ ನಂತರ ಪ್ರತರ್ದನನೇ ಕೆಳಗಿಳಿಯುವನೆಂದು ನಾರದರು ನುಡಿದರು. ''ಪ್ರತರ್ದನನು ರಥದಲ್ಲಿ ಸಂಚರಿಸುತ್ತಿದ್ದಾಗ ಬ್ರಾಹ್ಮಣನೊಬ್ಬನು ಅವನಲ್ಲಿ ದಾನವನ್ನು ಬೇಡಿದನು. ಮತ್ತೆ ಕೊಡುವೆನೆಂದರೂ ಈಗಲೇ ಕೊಡಬೇಕೆಂದು ಬ್ರಾಹ್ಮಣನು ಅವಸರಪಡಿಸಿದಾಗ ತನ್ನ ರಥದ ಒಂದು ಕುದುರೆಯನ್ನು ಅಲ್ಲಿಯೇ ನೀಡಿದನು. ಹೀಗೆಯೇ ಒತ್ತಾಯಪಡಿಸಿ ಬೇಡಿದ ಸಾಧು-ಸಂತರಿಗೆ ತನ್ನ ರಥದ ಒಂದೊಂದು ಭಾಗವನ್ನು ನೀಡುತ್ತ ರಥದ ಎಲ್ಲ ಭಾಗಗಳನ್ನು ಕೊಟ್ಟು ಮುಗಿಸಿದನು. ಇನ್ನು ತನ್ನಲ್ಲಿ ಬೇಡಲು ಸಾಧುಗಳಿಗೆ ಏನೂ ಇಲ್ಲವೆಂದು ಅವರನ್ನು ಆಣಕಿಸಿ ಆ ಸಂದರ್ಭದಲ್ಲಿ ಪ್ರತರ್ದನನು ಮಾತಾಡಿದ್ದಾನೆ. ಇಷ್ಟು ಉದಾರವಾಗಿ ನಿರ್ಲೋಭದಿಂದ ದಾನಮಾಡಿದರೂ ಅದರ ಜೊತೆಗೆ ಈ ಕೊಂಕು ನುಡಿಯನ್ನು ಆಡಿದುದರಿಂದ ಪ್ರತರ್ದನನು ಕೆಳಗಿಳಿಯುವನು.'' ಎಂದು ನಾರದರು ಸಮರ್ಥಿಸಿದರು. ''ಆಮೇಲೆ ಕೆಳಗಿಳಿಯುವ ಸರದಿ ವಸುಮಂತನದು. ಒಂದು ಸುಂದರವಾದ ಪುಷ್ಪರಥದ ಸ್ವಸ್ತಿವಾಚನದ ಸಂದರ್ಭದಲ್ಲಿ ಆ ರಥವನ್ನು ಪ್ರಶಂಸೆ ಮಾಡಿದ ಬ್ರಾಹ್ಮಣನಿಗೆ ಆ ರಥವನ್ನೇ ಉದಾರತೆಯಿಂದ ವಸುಮಂತನು ದಾನ ಮಾಡಿದನು. ಇನ್ನೊಂದು ಸಂದರ್ಭದಲ್ಲಿಯೂ ರಥವನ್ನು ಪ್ರಶಂಸಿಸಿದ ಆ ವ್ಯಕ್ತಿಗೇ ಪುನಃ ರಥವನ್ನು ದಾನಮಾಡಿದನು. ಮೂರನೆಯ ಪ್ರಸಂಗದಲ್ಲಿಯೂ ಆ ವ್ಯಕ್ತಿಯು ಇಂತಹ ಸಂದರ್ಭದಲ್ಲಿಯೇ ರಥದ ಪ್ರಶಂಸೆಯನ್ನು ಮಾಡಿದಾಗ ಈ ರಾಜನು ಆತನನ್ನು ಸ್ವಲ್ಪ ಮೂದಲಿಸಿ ವಿನೋದವಾಗಿ ಮಾತಾಡಿದನು. ದಾನದ ಜೊತೆಗಿರುವ ಈ ಅಪಸ್ವರದಿಂದಾಗಿ ವಸುಮಂತನು ಕೆಳಗಿಳಿಯುತ್ತಾನೆ'' ಮುಂದಿನ ಇಬ್ಬರಲ್ಲಿ ಮೊದಲು ಕೆಳಗಿಳಿಯುವರಾರು ಎಂದು ಪ್ರಶ್ನಿಸಿದಾಗ

ತಾವೇ ಕೆಳಗಿಳಿಯುವುದಾಗಿಯೂ ಶಿಬಿರಾಜನೇ ಮುಂದೆ ಸಾಗುವುದಾಗಿಯೂ ನಾರದರು ಹೇಳಿದರು. ''ಶಿಬಿರಾಜನ ಶುದ್ಧಮನೋಭಾವದ ತ್ಯಾಗದ ಮುಂದೆ ಎಲ್ಲರೂ ಅಲ್ಪರೆನಿಸುತ್ತಾರೆ. ಶರಣಾಗತವಾದ ಪಾರಿವಾಳವನ್ನು ಉಳಿಸುವುದಕ್ಕಾಗಿ ತನ್ನ ಸಮಗ್ರ ಜೀವನವನ್ನೇ ಸಮರ್ಪಿಸಿದ, ಆಸಕ್ತಿ-ಮಮತೆಗಳ ಲೇಶವೂ ಇಲ್ಲದೆ ವಿನಯ-ತ್ಯಾಗಗಳ ಪ್ರತಿಮೂರ್ತಿಯಾಗಿ ನಿರಪೇಕ್ಷ ಬುದ್ಧಿಯ ದಾನಶೀಲನಾದ ಶಿಬಿರಾಜನ ಮುಂದೆ ನಾನೇ ನನ್ನ ಸೋಲನ್ನೊಪ್ಪ ಬೇಕಾಗುವುದು. ಅವನ ನಿರ್ಮಲ ಕೃತಿಯಲ್ಲಿ ಕಲೆ, ಕಲಂಕಗಳು ಎಲ್ಲಿಯೂ ಕಾಣಸಿಗವು'' ಎಂದು ನಾರದರು ಶಿಬಿರಾಜನ ತ್ಯಾಗವನ್ನು ಮುಕ್ತಕಂಠದಿಂದ ಪ್ರಶಂಸಿಸಿದರು. ಜಗತ್ತಿನಲ್ಲಿ ದಾತೃಗಳು ವಿಪುಲ ಸಂಖ್ಯೆಯಲ್ಲಿ ಇರಬಹುದು. ಆದರೆ ಆ ಔದಾರ್ಯದ ಹಿನ್ನೆಲೆಯಲ್ಲಿ ಹೆಮ್ಮೆ, ಪರಿಹಾಸ, ಕುಹಕಗಳು ಏನೂ ಇಲ್ಲದೆ ನಮ್ರತೆ ಹಾಗೂ ಪವಿತ್ರ ಭಾವವನ್ನು ಕಾಣುವುದು ಬಹಳ ವಿರಳ. ಇಂತಹ ದಾನವನ್ನು ಸಾತ್ತ್ವಿಕವೆಂದು ಗೀತೆಯು ಕರೆದಿದೆ.

## ತಪಸ್ಸು

ತಪಸ್ಸಿಗೂ ಸಾಧಕರು ಪ್ರಾಮುಖ್ಯದ ಸ್ಥಾನವನ್ನು ನೀಡುವರು. ಜೀವನದ ಪರಮ ಸುಖವನ್ನು ನಾವು ಶರೀರದ ಆರಾಧನೆಯಿಂದಲೇ ಪಡೆಯಲಾರೆವು. ಕಬ್ಬನ್ನು ಅಭಿಷೇಕ, ಆರತಿಗಳಿಂದ ಪೂಜಿಸಿದರೆ ಅದರ ರಸವು ದೊರಕದು. ಹಿಂಡಿದಾಗಲೇ ಅದರ ಮಧುರ ರಸವನ್ನು ಆಸ್ವಾದಿಸಲು ಸಾಧ್ಯವಾಗುವುದು. ಜೀವನದ ಅಮೂಲ್ಯ ರಸವೂ ಶರೀರಕ್ಕೆ ನಾವು ಮಾಡುವ ಷೋಡಶೋಪಚಚಾರಗಳಿಂದ ದೊರೆಯದು. ನಮ್ಮ ಶರೀರ, ಮನಸ್ಸುಗಳಿಗೆ ತಪಸ್ಸಿನ ಸಂಸ್ಕಾರವನ್ನು ನೀಡಿದರೆ ಜ್ಞಾನ, ಸುಖಗಳ ಅಮೃತಧಾರೆಯು ಜೀವನದಲ್ಲಿ ಹರಿಯುವುದನ್ನು ನಾವು ಕಾಣಬಲ್ಲೆವು. ನಮ್ಮ ವಾಕ್, ಕಾಯ, ಮನಸ್ಸುಗಳನ್ನು ತಪಸ್ಸಿನಿಂದ ಪವಿತ್ರಗೊಳಿಸಬೇಕು. ಯಾರಿಗೂ ಉದ್ವೇಗಕರವಾಗದ, ಸತ್ಯವೂ ಮಧುರವೂ ಆದ ಮಾತೇ ನಮ್ಮ ನಾಲಿಗೆಯಲ್ಲಿರಬೇಕು.

ಸ್ಮಿತಪೂರ್ವಾಭಿಭಾಷೀ ಚ

ಎಂದು ರಾಮಾಯಣದಲ್ಲಿ ಶ್ರೀರಾಮನನ್ನು ವರ್ಣಿಸಲಾಗಿದೆ. ಯಾವಾಗಲೂ ನಗುಮೊಗದ ಮಾತುಗಳಿಂದ ಶ್ರೀರಾಮನು ಜನರ ಹೃದಯವನ್ನು ಸೂರೆಗೊಳ್ಳುತ್ತಿದ್ದನಂತೆ. ಮಾತಿನಲ್ಲಿ ಸೌಂದರ್ಯ ಸೌಜನ್ಯಗಳು ತುಂಬಿರಬೇಕು. ಒರಟು, ಕಠೋರ ಭಾಷೆಯನ್ನು ಬಳಸಬಾರದು. ಇದು ವಾಙ್ಮಯ ತಪಸ್ಸು. ಶಾಸ್ತ್ರದ ಅಭ್ಯಾಸ ಹಾಗೂ ಪ್ರವಚನವನ್ನು ವಾಙ್ಮಯ ತಪಸ್ಸು ಎಂದು ಕರೆಯಲಾಗುವುದು. ಉತ್ತಮ ನಡತೆ, ಇಂದ್ರಿಯನಿಗ್ರಹ, ಅಹಿಂಸೆ, ಪರಮಾತ್ಮನ ಮತ್ತು ಹಿರಿಯರ ಸೇವೆಯನ್ನು ಮಾಡುವುದು ಇವು ಶಾರೀರಿಕ ತಪಸ್ಸು ಎಂದೆನಿಸಿದರೆ ಆತ್ಮನಿಗ್ರಹ, ಮನೋನೈರ್ಮಲ್ಯಗಳೇ ಮಾನಸ ತಪಸ್ಸೆಂದು ಪರಿಗಣಿತವಾಗಿವೆ. ಇಲ್ಲಿಯೂ ದಂಭ, ದರ್ಪ, ದುರಭಿಸಂಧಿಗಳಿಗೆ ಪ್ರವೇಶ ದೊರೆತರೆ ಅದರ ಪಾವಿತ್ರ್ಯ ಹಾಗೂ ಸಾತ್ತ್ವಿಕತೆಯು ಭ್ರಷ್ಟವಾಗುವುದು.

## ಜ್ಞಾನ

ಹೀಗೆಯೇ ನಮ್ಮ ಜ್ಞಾನ, ಕೃತಿ, ಸುಖ ಮುಂತಾದ ಎಲ್ಲ ದೈಹಿಕ, ಮಾನಸಿಕ ವ್ಯಾಪಾರಗಳನ್ನು ನಮ್ಮ ಮಾನಸಿಕ ಗುಣ-ದೋಷಗಳ ಹಿನ್ನೆಲೆಯಿಂದ ಸಾತ್ತ್ವಿಕ, ರಾಜಸ, ತಾಮಸಗಳೆಂದು ವರ್ಗೀಕರಿಸಬೇಕು. ಈ ವಿಭಾಗದಿಂದಾಗಿ ಪ್ರತಿಯೊಂದು ಕೃತಿಯನ್ನೂ ಅದರ ಬಾಹ್ಯ ಪರಿಮಾಣಗಳಿಂದ ಅಳೆಯದೆ, ಆಂತರಿಕ ಭಾವಶುದ್ಧಿಯ ಆಧಾರದಿಂದ ಸತ್, ಅಸತ್ ಕೃತಿಗಳನ್ನು ತೂಗಿನೋಡುವ ವಿವೇಕಶಕ್ತಿಯು ನಮ್ಮಲ್ಲಿ ಬೆಳೆಯುವುದು. ನಾವು ಎಷ್ಟೋ ಧರ್ಮಕೃತಿಗಳನ್ನು ಮಾಡುತ್ತಿದ್ದರೂ ಅವು ಹೇಗೆ ನಮ್ಮ ಮನೋದೋಷಗಳಿಂದ ಕಲುಷಿತವಾಗಿರುತ್ತವೆ ಎಂಬುದನ್ನು ಅರ್ಥಮಾಡಿಕೊಳ್ಳಲು ಗೀತೆಯು ಮಾಡಿದ ಈ ವಿವೇಚನೆಯು ನಮಗೆ ಸಹಾಯಕವಾಗಿದೆ.

ನಮ್ಮ ಜ್ಞಾನವು ಪ್ರಪಂಚದ ತತ್ತ್ವಗಳನ್ನು ಅವುಗಳ ಯಥಾರ್ಥ ರೂಪದಲ್ಲಿ ಗ್ರಹಿಸಲು ಶಕ್ತವಾದಾಗಲೇ ಅದು ಸಾತ್ತ್ವಿಕವಾಗುವುದು. ಸರ್ವ ವಸ್ತುಗಳಲ್ಲಿಯೂ ಅನುಸ್ಯೂತನಾಗಿರುವ ಸರ್ವೋತ್ತಮನಾದ ಪರಬ್ರಹ್ಮನ ತಿಳುವಳಿಕೆಯೇ ಸಾತ್ತ್ವಿಕ ಜ್ಞಾನವು.

ಸರ್ವಭೂತೇಷು ಯೇನೈಕಂ
ಭಾವಮವ್ಯಯಮೀಕ್ಷತೇ।
ಅವಿಭಕ್ತಂ ವಿಭಕ್ತೇಷು
ತಜ್ಜ್ಞಾನಂ ವಿದ್ಧಿ ಸಾತ್ತ್ವಿಕಮ್ ॥

ಕೆಲವರು ಅದ್ವೈತ ಜ್ಞಾನವೇ ಸಾತ್ತ್ವಿಕ ಜ್ಞಾನವೆಂದೂ ದ್ವೈತಜ್ಞಾನವು ರಾಜಸ ತಾಮಸ ವರ್ಗದಲ್ಲಿ ಅಂತರ್ಗತವಾಗಿದೆಯೆಂದೂ ಇಲ್ಲಿ ವ್ಯಾಖ್ಯಾನವನ್ನು ಬರೆದಿರುವರು. ಇಲ್ಲಿರುವ,

''ಅವಿಭಕ್ತಂ ವಿಭಕ್ತೇಷು''

ಎನ್ನುವ ವಾಕ್ಯವನ್ನು ಪರಿಶೀಲಿಸಿದಲ್ಲಿ ಇಂತಹ ಭ್ರಮೆಗೆ ಅವಕಾಶವಾಗದು. ವಸ್ತುಗಳಲ್ಲಿ ಭೇದವಿದೆ; ಜೀವ, ಜಡವರ್ಗದಲ್ಲಿ ಅನೇಕ ರೀತಿಯ ಪರಿಭೇದ ವೈವಿಧ್ಯಗಳಿವೆ. ಈ ಅನಂತ ಭೇದಗಳುಳ್ಳ ಪ್ರಪಂಚವನ್ನು ಏಕಸೂತ್ರಿತಗೊಳಿಸುವ ಪರಮಾತ್ಮನು ಒಬ್ಬನೇ. ಜಗತ್ತಿನಲ್ಲಿರುವ ಭಿನ್ನತೆ, ವಿಕಾರಗಳಿಂದ ಅದರೊಳಗೆ ನೆಲೆಸಿರುವ ಭಗವಂತನ ರೂಪಗಳು ಬೇರ್ಪಡುವುದಿಲ್ಲ; ಯಾವ ವಿಕಾರಗಳಿಗೂ ಒಳಪಡುವುದಿಲ್ಲ. ಪ್ರತಿ ಶರೀರದಲ್ಲಿ ಜೀವರು ಬೇರೆಬೇರೆ ಇರಬಹುದು. ಆದರೆ ವಸ್ತುವಸ್ತುಗಳಲ್ಲಿ ಅವುಗಳ ನಿಯಮನ ಮಾಡಲು ನೆಲೆಸಿರುವ ಭಗವಚ್ಚೈತನ್ಯವನ್ನು ವಸ್ತು ವಿಭಾಗದಿಂದ ವಿಭಜಿಸಲಾರೆವು. ಅದು ಅಖಂಡವಾಗಿ ಸರ್ವವ್ಯಾಪಿಯಾಗಿ ಏಕಮೇವಾದ್ವಿತೀಯವಾಗಿ ಪರಿಗಣಿತವಾಗಿದೆ. ಈ ಜ್ಞಾನವನ್ನೇ ಇಲ್ಲಿ ಸಾತ್ತ್ವಿಕವೆಂದು ವರ್ಣಿಸಿರುವುದಾಗಿದೆ. ವಸ್ತುಗಳ ಭೇದ, ವೈವಿಧ್ಯಗಳನ್ನು 'ವಿಭಕ್ತೇಷು' ಎಂದು ಸ್ಪಷ್ಟವಾಗಿ ಹೇಳಿ ಅದರೊಳಗಿರುವ ಪರಮಾತ್ಮನ 'ಅವಿಭಕ್ತ' ರೂಪದ ಜ್ಞಾನವನ್ನು ಇಲ್ಲಿ ಸಾತ್ತ್ವಿಕವೆಂದು ಹೇಳಿದೆ.

ಈ ದೃಶ್ಯಪ್ರಪಂಚವನ್ನು ಮತ್ತು ಅದರ ಭೇದ ವೈಚಿತ್ರ್ಯವನ್ನು ಗ್ರಹಿಸಿದರೂ ಅದರೊಳಗಿನ ಭಗವತ್ತತ್ತ್ವದ ಬಗ್ಗೆ ಮಾತ್ರ ಉದಾಸೀನವೂ ಸಂಶಯಗ್ರಸ್ತವೂ ಆದ ತಿಳುವಳಿಕೆಯೇ ರಾಜಸವಾದ ಜ್ಞಾನವು. ಭೌತಿಕ ವಿಜ್ಞಾನದಿಂದ ಈ ರಾಜಸ ಜ್ಞಾನವೇ ಹೆಚ್ಚಾಗಿ ಬೆಳೆಯುತ್ತದೆ. ಪರಮಾತ್ಮನನ್ನು ಹೊರತು ಉಳಿದ ವಸ್ತುಗಳ ಅಭ್ಯಾಸ, ಸಂಶೋಧನೆಗಳು ತೀವ್ರಗತಿಯಿಂದ ನಡೆದಿರುವುದರಿಂದ

ವಿಶ್ವದಲ್ಲಿಯ ಸತ್ವಗಳ ಅರಿವು ಹೆಚ್ಚುತ್ತಿದ್ದರೂ ಪ್ರಧಾನಸತ್ವನಾದ ಪರಮಾತ್ಮನನ್ನು ಕಡೆಗಣಿಸಿ, ಗೌಣವಸ್ತುಗಳ ಪರಿಜ್ಞಾನಕ್ಕೇ ಹೆಚ್ಚಿನ ಪ್ರಾಶಸ್ತ್ಯವನ್ನು ನೀಡಲಾಗುತ್ತದೆ. ಇದು ರಾಜಸ ವೃತ್ತಿಯೇ ಆಗಿದೆ.

ಇನ್ನು ಕಾರ್ಯವಾದ ಈ ದೃಶ್ಯಪ್ರಪಂಚವನ್ನು ಮಾತ್ರ ಒಪ್ಪಿ ಅದರ ಕಾರಣನಾದ ಪರಮಾತ್ಮನನ್ನು ನಿರಾಕರಿಸುವ ನಾಸ್ತಿಕ್ಯವಿಚಾರವು ತಾಮಸ ಜ್ಞಾನವಾಗಿದೆ.

**ಯತ್ತು ಕೃತ್ಸ್ನವದೇಕಸ್ಮಿನ್**
**ಕಾರ್ಯೇ ಸಕ್ತಮಹೈತುಕಮ್ ।**

ಜಗತ್ತಿನ ಒಂದು ಭಾಗವನ್ನು ಪರಿಪೂರ್ಣವಾದ ಜಗತ್ತೆಂದು ಭಾವಿಸಿ, ಉಳಿದುದನ್ನು ನಿರಾಕರಿಸುವ ಏಕದೇಶಜ್ಞಾನವು ನಮ್ಮನ್ನು ತಪ್ಪುದಾರಿಗೆ ಎಳೆಯುವ ತಾಮಸಜ್ಞಾನವಾಗಿದೆ. ಜೀವನನ್ನು ಮಾತ್ರ ಅಂಗೀಕರಿಸಿ, ಅವನಿಂದ ವ್ಯತಿರಿಕ್ತವಾದ ಬ್ರಹ್ಮವಸ್ತುವನ್ನು ನಿರಾಕರಿಸುವ, ಜಗದೀಶ್ವರನನ್ನು ಅಲ್ಲಗಳೆದು ದೃಶ್ಯಜಗತ್ತು ಮಾತ್ರ ಸತ್ಯವೆನ್ನುವ, ಬ್ರಹ್ಮನನ್ನು ಮಾತ್ರ ಒಪ್ಪಿ ಜಗತ್ತನ್ನು ಮಿಥ್ಯೆ ಎಂದು ಗ್ರಹಿಸುವ ಏಕದೇಶವನ್ನೇ ಸರ್ವಸ್ವವೆಂದು ಭಾವಿಸುವ ಜ್ಞಾನಗಳೆಲ್ಲವೂ ತಾಮಸಜ್ಞಾನದ ಪ್ರಭೇದಗಳೇ.

## ಸುಖ

ಸುಖವೂ ಇದೇ ರೀತಿಯಲ್ಲಿ ಅನೇಕ ಬಗೆಯದಾಗಿದೆ. ಸುಖವನ್ನು ಪಡೆಯಲು ನಾವು ಬಳಸುವ ಸಾಮಗ್ರಿಯನ್ನನುಸರಿಸಿ ಸುಖದ ವಿಭಾಗವನ್ನು ಮಾಡಬೇಕು. ಕಜ್ಜಿಯನ್ನು ತುರಿಸುವಾಗ ದೊರೆಯುವ ಸುಖದಂತೆ ವೈಷಯಿಕ ಪದಾರ್ಥಗಳಿಂದ ತಾತ್ಕಾಲಿಕ ಆನಂದವು ದೊರಕಿದರೂ ಮುಂದೆ ಕ್ಲೇಶದ ಅನುಭವವಾಗುವುದರಿಂದ ವೈಷಯಿಕ ಸುಖವು ರಾಜಸವಾಗಿದೆ. ನಮ್ಮಲ್ಲಿ ಆತ್ಮವಿಸ್ಮೃತಿಯನ್ನು ನಿರ್ಮಿಸಿ ಕತ್ತಲಲ್ಲಿ ಕೆಡಹುವ ವಿಕೃತ ಸುಖವು ಕೊಲೆ, ಸುಲಿಗೆ, ಮದ್ಯಪಾನಗಳಂತಹ ದುಷ್ಟ ವ್ಯವಹಾರಗಳಲ್ಲಿ ದೊರಕುವುದು. ಇವೆಲ್ಲವೂ ತಾಮಸ ಸುಖದ ಸಾಲಿನಲ್ಲಿ ಸೇರುವವು. ಆರಂಭದಲ್ಲಿ ಕ್ಲೇಶ, ಕಷ್ಟಗಳೊದಗಿದರೂ ಚಿರಕಾಲದ ತೃಪ್ತಿ, ಪ್ರಸನ್ನತೆಗಳನ್ನು ನೀಡುವ

ತಾತ್ತ್ವಿಕಸುಖವೇ ನಮ್ಮ ಲಕ್ಷ್ಯವಾಗಿರಬೇಕು. ಇದು ಭಗವಂತನ ಜ್ಞಾನ, ಧ್ಯಾನ, ಪ್ರಸಾದಗಳಿಂದಲೇ ದೊರೆಯುವುದು. ಇಂತಹ ನೈಜವಾದ ಸುಖದ ಬದಲು ವೈಷಯಿಕವಾದ ಕೃತ್ರಿಮಸುಖವೇ ಮಹತ್ತರವೆಂದು ಅದಕ್ಕಾಗಿ ಜನತೆ ಚಡಪಡಿಸುತ್ತದೆ. ನಿಜವಾದ ಹಾಲಿನ ರುಚಿಯನ್ನೇ ತಿಳಿಯದ ಅಶ್ವತ್ಥಾಮನು ತನಗೂ ಹಾಲು ಬೇಕೆಂದು ತಾಯಿಯಲ್ಲಿ ಹಠ ಹಿಡಿಯುವನು. ಆದರೆ ತಮ್ಮ ಬಡತನದಲ್ಲಿ ಅಶ್ವತ್ಥಾಮನಿಗೆ ಹಸುವಿನ ಹಾಲನ್ನು ಅವಳು ಎಲ್ಲಿಂದ ಒದಗಿಸುವಳು? ಹಿಟ್ಟಿನ ನೀರನ್ನೇ ಹಾಲೆಂದು ಅವಳು ನೀಡಿದಾಗ ಅದನ್ನು ಕುಡಿದು ತಾನೂ ಹಾಲನ್ನು ಕುಡಿದೆನೆಂಬ ಸಂತಸದಿಂದ ಅಶ್ವತ್ಥಾಮನು ಕುಣಿದಾಡುವನು. ನಮ್ಮ ಆತ್ಮದಲ್ಲಿಯೇ ಇರುವ ನೈಜಸುಖದ ಸವಿಯನ್ನು ಅರಿತುಕೊಳ್ಳದೆ, ಸಂಸಾರದ ಮೋಹಕವಾದ ಕೃತ್ರಿಮ ಸುಖಕ್ಕಾಗಿ ಬಾಯಿಬಿಡುವ ನಮ್ಮ ಚೇಷ್ಟೆಗಳನ್ನು ನೋಡುವಾಗ ಈ ಅಶ್ವತ್ಥಾಮನ ಕತೆಯು ನೆನಪಾಗುತ್ತದೆ.

ಈ ಲೌಕಿಕವಾದ ಅಲ್ಪ ಸುಖವೇ ಸಂಸಾರದ ಸರ್ವಸ್ವವೆಂದು ಭಾವಿಸುವ ಜನರ ಮೌಢ್ಯ, ಅವಿವೇಕಗಳನ್ನು ಮಹಾಭಾರತದಲ್ಲಿ ಬಹು ಸುಂದರವಾಗಿ ಚಿತ್ರಿಸಿದ್ದಾರೆ. ಕಾಡಿನಲ್ಲಿ ನಡೆಯುತ್ತಿದ್ದ ಒಬ್ಬನು ಓಡಿಬರುತ್ತಿರುವ ಹುಲಿಗೆ ಹೆದರಿ ಧಾವಿಸುವ ಭರದಲ್ಲಿ ಪೊದರುಗಳಿಂದ ತುಂಬಿದ ಒಣಬಾವಿಯಲ್ಲಿ ತಲೆಕೆಳಗಾಗಿ ಬಿದ್ದು ಪೊದರಿನಲ್ಲಿ ಸಿಲುಕಿ ಮಧ್ಯದಲ್ಲಿಯೇ ಜೋತಾಡುತ್ತಿದ್ದಾನೆ. ಕೆಳಗೆ ಬಾವಿಯ ಪ್ರಪಾತ, ಮೇಲೆ ಹುಲಿಯು ಇವನಿಗಾಗಿ ಹೊಂಚುಹಾಕುತ್ತಿದೆ. ಬಾವಿಯಲ್ಲಿಯ ಒಂದು ಹಾವು ಇವನನ್ನು ಕಚ್ಚಲು ಮೇಲೇರಿ ಬರುತ್ತಿದೆ. ಇವನು ಆಧರಿಸಿದ ಪೊದರುಗಳೂ ಶಿಥಿಲವಾಗುತ್ತಿವೆ. ಇವನು ಬೀಳುವ ಭರದಲ್ಲಿ ಅಲ್ಲಿಯೇ ಇದ್ದ ಜೇನುನೊಣಗಳ ಗೂಡು ಒಡೆದು ಆ ನೊಣಗಳೆಲ್ಲ ಈತನನ್ನು ಕಚ್ಚುತ್ತಿವೆ. ಇಂತಹ ಸನ್ನಿವೇಶದಲ್ಲಿ ಜೇನುಗೂಡಿನಿಂದ ಜೇನುತುಪ್ಪದ ತುಂತುರು ಹನಿಗಳು ಇವನ ಬಾಯೊಳಗೆ ಬಿದ್ದಾಗ, ಈ ಗಂಡಾಂತರ ಸ್ಥಿತಿಗಳೆಲ್ಲವನ್ನು ಮರೆತು 'ಜೇನು ಬಹು ರುಚಿಯಾಗಿದೆ' ಎಂದು ಬಾಯಿ ಚಪ್ಪರಿಸುತ್ತಿದ್ದನಂತೆ. ಇದೇ ಮೂಢತನವನ್ನು ಈ ಸಂಸಾರದಲ್ಲಿ ನಾವು ತೋರಿಸುತ್ತಿದ್ದೇವೆ. ಒಂದು ಕಡೆ ಮುಪ್ಪು, ಇನ್ನೊಂದೆಡೆ ಮೃತ್ಯು ಹಾವು-ಹುಲಿಗಳಂತೆ ನಮ್ಮನ್ನು ಆಕ್ರಮಿಸು-ತ್ತಿದ್ದರೂ ಆಯುಷ್ಯದ ಪೊದರು ಕ್ಷೀಣಿಸುತ್ತಿದ್ದರೂ ಸಂಸಾರತಾಪತ್ರಯಗಳು

ಸೋಣಗಳಂತೆ ಸಾವಿರ ಕಡೆಗಳಿಂದ ನಮ್ಮನ್ನು ಕಾಡುತ್ತಿದ್ದರೂ ಮಧುವಿನ ಚಿಕ್ಕ ಹನಿಗಳಂತಿರುವ ಸಂಸಾರದ ಅಲ್ಪ ಸುಖಗಳನ್ನೇ ಮೆಲುಕು ಹಾಕುತ್ತ, ಅದರ ಸವಿಯಲ್ಲಿಯೇ ನಮ್ಮ ಮುಂದಿರುವ ಗಂಡಾಂತರವನ್ನು ಮರೆಯುವ ಅವಿವೇಕವನ್ನು ನಾವು ತೋರುತ್ತಿದ್ದೇವೆ ಎಂದು ಮಹಾಭಾರತವು ನಮ್ಮ ಭೌತಿಕ ಸುಖದ ಲವಲವಿಕೆಯನ್ನು ಮೂದಲಿಸಿದೆ. ಇಂತಹ ರಾಜಸ, ತಾಮಸ ಸುಖಗಳ ಆಕರ್ಷಣೆಗೆ ಒಳಗಾಗದೆ ಧ್ಯಾನ, ಸಾಕ್ಷಾತ್ಕಾರಗಳಿಂದ ಪಡೆಯಬಹುದಾದ ನೈಜ ಸುಖದ ಕಡೆಗೆ ನಮ್ಮ ಗಮನವನ್ನು ಕೇಂದ್ರೀಕರಿಸಬೇಕು.

## ತ್ಯಾಗ ಮತ್ತು ಸಂನ್ಯಾಸ

ನಮ್ಮ ಪ್ರತಿಯೊಂದು ಕ್ರಿಯೆಯಲ್ಲಿಯೂ ಸತ್ತ್ವ, ರಜ, ತಮಗಳ ಈ ಗತಿವಿಧಿಯನ್ನು ಪರಿಶೀಲಿಸಿದಷ್ಟೂ ನಮ್ಮ ಎಲ್ಲ ಕೃತಿಗಳನ್ನೂ ವಿಶ್ಲೇಷಿಸಿ ಆತ್ಮನಿರೀಕ್ಷಣೆ ಮಾಡಲು ಅನುಕೂಲವಾಗುತ್ತದೆ.

**ನ ತದಸ್ತಿ ಪೃಥಿವ್ಯಾಂ ವಾ**
**ದಿವಿ ದೇವೇಷು ವಾ ಪುನಃ ।**

ಜಗತ್ತಿನ ಪ್ರತಿಯೊಬ್ಬರೂ ಈ ಮೂರು ಗುಣಗಳ ಪ್ರಭಾವಕ್ಕೆ ಸಿಲುಕಿದವರೇ. ಈ ತ್ರಿಗುಣಗಳಿಂದಾಗಿ ನಾವು ಮಾಡುತ್ತಿರುವ ಧರ್ಮಾಚಾರಗಳೆಲ್ಲ ಎಂತಹ ವಿಕೃತ ರೂಪವನ್ನು ತಳೆಯುತ್ತವೆ ಎಂಬ ಪರಿವೆಯೂ ಇಲ್ಲದೆ ನಮ್ಮ ವ್ಯವಹಾರಗಳನ್ನು ಸಾಗಿಸುತ್ತಿರುವೆವು. ಧರ್ಮಾಚರಣೆಯಲ್ಲಿ ರಜಸ್ಸು, ತಮಸ್ಸುಗಳಿಂದ ಸಂಭವಿಸಬಹುದಾದ ವಿಕೃತಿಯನ್ನು ಕಂಡಾಗ ಈ ಧರ್ಮಾಚರಣೆಯೇ ಬೇಡವೆಂದು ನಮಗೆ ಅನಿಸಬಹುದು. ಎಷ್ಟು ಜಾಗರೂಕತೆಯಿಂದ ಕರ್ಮಗಳನ್ನು ಆಚರಿಸಿದರೂ ಈ ಪ್ರಕೃತಿ ಗುಣಗಳಿಂದಾಗಿ ಅಲ್ಲಿ ದೋಷಗಳು ನುಸುಳದಿರುವುದಿಲ್ಲ. ಈ ದೋಷಯುಕ್ತವಾದ ಕರ್ಮವನ್ನು ಆಚರಿಸುವುದಕ್ಕಿಂತ ಅದನ್ನು ಸರ್ವಾತ್ಮನಾ ತೊರೆಯುವುದೇ ಲೇಸೆಂಬ ಭಾವನೆಯುಂಟಾಗುವ ಅವಕಾಶವೂ ಇದೆ.

**ತ್ಯಾಜ್ಯಂ ದೋಷವದಿತ್ಯೇಕೇ ಕರ್ಮ ಪ್ರಾಹುರ್ಮನೀಷಿಣಃ।**

ದೋಷಯುಕ್ತವಾದ ಈ ಕರ್ಮವನ್ನು ಬಿಡಬೇಕೆಂದು ಕೆಲ ಮನೀಷಿಗಳು ಹೇಳಿದ್ದರೆ,

**ಯಜ್ಞದಾನತಪಃಕರ್ಮ ನ ತ್ಯಾಜ್ಯಮಿತಿ ಚಾಪರೇ।**

ಜೀವನದ ಪಾವನತೆಗೆ ಸಾಧನಗಳಾದ ಯಜ್ಞ, ದಾನ, ತಪಸ್ಸುಗಳನ್ನು ಸರ್ವಥಾ ತೊರೆಯಬಾರದೆಂಬ ಆದೇಶವನ್ನು ಕೆಲವರು ನೀಡಿರುವರು. ವಿರುದ್ಧವಾದ ಇವೆರಡು ವಿಚಾರಗಳಲ್ಲಿ ನಾವು ಯಾವುದನ್ನು ಆರಿಸಬೇಕೆನ್ನುವುದೇ ನಮ್ಮ ಮುಂದಿರುವ ಪ್ರಶ್ನೆಯಾಗಿದೆ.

**ನ ಹಿ ದೇಹಭೃತಾ ಶಕ್ಯಂ ತ್ಯಕ್ತುಂ ಕರ್ಮಾಣ್ಯಶೇಷತಃ।**

ಆದರೆ ಜೀವಿಗಳಿಗೆ ಕರ್ತವ್ಯವನ್ನು ಪೂರ್ತಿಯಾಗಿ ತೊರೆಯಲು ಸಾಧ್ಯವೆ? ಆಹಾರ, ವ್ಯವಹಾರಾದಿಗಳಿಗೆ ಅವಶ್ಯವೆನಿಸಿದ ಕರ್ಮಗಳನ್ನು ಬಿಟ್ಟಿರಲು ಯಾರಿಂದಲೂ ಸಾಧ್ಯವಿಲ್ಲ. ಕರ್ಮಗಳಲ್ಲಿ ದೋಷವಿದೆ, ಅದನ್ನು ತೊರೆಯಬೇಕೆನ್ನುವ ಆತುರವು ಸ್ನಾನ, ಸಂಧ್ಯಾವಂದನ, ದೇವರಪೂಜೆ, ಸಮಾಜಸೇವೆಯಂತಹ ಲೋಕೋಪಯುಕ್ತ ಕಾರ್ಯಗಳನ್ನು ಪರಿತ್ಯಜಿಸುವುದರಲ್ಲಿಯೇ ಪರ್ಯವಸಾನ ಹೊಂದುವುದು. ಲೌಕಿಕ ಜೀವನೋಪಾಯಿಕ ಕಾರ್ಯಗಳನ್ನಂತೂ ಬಿಡಬೇಕೆಂದರೂ ಬಿಡಲು ಸಾಧ್ಯವೇ ಇಲ್ಲ. ಸುಲಭವಾಗಿ ಪರಿತ್ಯಜಿಸಬಹುದಾದ ಕಾರ್ಯಗಳೆಂದರೆ ಆತ್ಮನ ಉನ್ನತಿಗೆ ಕಾರಣಗಳಾಗುವ ಪುಣ್ಯಕೃತಿಗಳು ಮಾತ್ರ. ಇತರ ಭೋಗಕಾರ್ಯಗಳನ್ನೆಲ್ಲ ಮಾಡಿಕೊಂಡು ಧರ್ಮಾಚರಣೆಯನ್ನು ಮಾತ್ರ ಬಿಡುವುದರಲ್ಲಿ ಏನರ್ಥವಿದೆ? ಹೀಗೆ ನಮ್ಮ ಮನಸ್ಸು ಕರ್ಮದ ಪರಿತ್ಯಾಗ ಹಾಗೂ ಆಚರಣೆಯ ನಡುವೆ ತೂಗುಯ್ಯಾಲೆಯಲ್ಲಿ ಹೊಯ್ದಾಡುತ್ತಿದೆ. ಗೀತೆಯು ಈ ಸಮಸ್ಯೆಯನ್ನು ಸುಲಭವಾಗಿ ಬಗೆಹರಿಸಿದೆ. ಕರ್ಮಾಚರಣೆ ಬೇಡ, ಬೇಕು ಎನ್ನುವ ಎರಡು ವಾದಗಳ ಸಮನ್ವಯವನ್ನು ಗೀತೆಯು ಮಾಡಿದೆ. ಕರ್ಮವನ್ನು ತ್ಯಜಿಸುವುದೆಂದರೆ ಅದರಲ್ಲಿ ದೋಷವು ತಗಲದಂತೆ ಆಸಕ್ತಿ ಮತ್ತು ಫಲಾಪೇಕ್ಷೆಯನ್ನು ತೊರೆಯುವುದೇ ಆಗಿದೆ ಎನ್ನುವ ಆಶಯವನ್ನು ಗೀತೆಯು ವಿವರಿಸಿದೆ. ಸಾಮಾನ್ಯ ಜನರು ಕರ್ಮ ಮತ್ತು ಅದರ ಲೌಕಿಕ ಫಲ ಇವೆರಡರಲ್ಲಿಯೂ

ದೃಷ್ಟಿಯನ್ನಿಟ್ಟಿದ್ದರೆ ಅವುಗಳಲ್ಲಿ ಕರ್ಮವನ್ನು ಮಾತ್ರ ಪರಿಗ್ರಹಿಸಿ ಫಲವನ್ನು ಪರಿತ್ಯಜಿಸುವುದೇ ಕರ್ಮತ್ಯಾಗ ಹಾಗೂ ಕರ್ಮಾನುಷ್ಠಾನ ಇವೆರಡರ ಸಮನ್ವಯವಾಗಿದೆ. ಕರ್ಮಾನುಷ್ಠಾನದಲ್ಲಿ ಈ ತ್ಯಾಗವೃತ್ತಿಯನ್ನಾಗಲಿ ಸಂನ್ಯಾಸವೃತ್ತಿಯನ್ನಾಗಲಿ ಜೋಡಿಸುವುದರಿಂದ ಕರ್ಮಗಳನ್ನು ಆಚರಿಸಿದರೂ ಅದರ ದೋಷ, ಬಂಧನಗಳಿಗೆ ನಾವು ಗುರಿಯಾಗುವುದಿಲ್ಲ.

ತ್ಯಾಗ, ಸಂನ್ಯಾಸಗಳಲ್ಲಿರುವ ಅಂತರವನ್ನೂ ನಾವು ಇಲ್ಲಿ ಪರಿಶೀಲಿಸಬೇಕಾಗಿದೆ. ತನಗಾಗಿ ಲೌಕಿಕ ಫಲವನ್ನು ಬಯಸಿದ್ದರೂ ಪರರ ಲೌಕಿಕ ಸುಖಕ್ಕಾಗಿ ಸ್ವಂತದ ಅಪೇಕ್ಷೆಯಿಲ್ಲದೆ ಮಾಡುವ ಕರ್ತವ್ಯದಲ್ಲಿ ತ್ಯಾಗ ವೃತ್ತಿಯಿದೆ. ತನ್ನಂತೆಯೇ ಪರರಿಗೂ ಲೌಕಿಕ ಸುಖವನ್ನು ಅಪೇಕ್ಷಿಸದೆ ಅವರಿಗೂ ಜ್ಞಾನ, ಭಕ್ತಿ, ಹರಿಪ್ರಸಾದಗಳನ್ನು ಮಾತ್ರ ಬಯಸಿ ಉನ್ನತ ಭಾವನೆಯಿಂದ ಮಾಡುವ ಕರ್ಮದಲ್ಲಿ ಸಂನ್ಯಾಸವೃತ್ತಿಯು ಅಡಕವಾಗಿದೆ. ಈ ತ್ಯಾಗ, ಸಂನ್ಯಾಸಗಳೆರಡರಲ್ಲಿಯೂ ಕರ್ಮಾಚರಣೆಯು ಅನಿವಾರ್ಯವೇ. ಅನ್ಯರ ಸುಖಕ್ಕಾಗಿ ಹಾತೊರೆದು ಅನುಕಂಪಭಾವದಿಂದ ಸ್ವಸುಖನಿರಪೇಕ್ಷವಾಗಿ ಪ್ರವರ್ತಿಸುವ ಕರ್ಮಯೋಗಿಯ ತ್ಯಾಗದಲ್ಲಿ ಹಿರಿತನವಿದ್ದರೂ ತನ್ನಂತೆಯೇ ಅನ್ಯರ ಆಧ್ಯಾತ್ಮಿಕ ಉನ್ನತಿಯನ್ನೇ ಬಯಸುವ ಸಂನ್ಯಾಸಿಯ ಮನೋಭಾವವು ಹೆಚ್ಚು ಉದಾತ್ತವಾದುದು. ಇವರಿಬ್ಬರ ಆಚರಣೆಗಳೂ ಕರ್ಮದ ದೋಷಗಳನ್ನು ದಾಟಿ ನಿಂತಿವೆ. ವೈರಾಗ್ಯ ಭಕ್ತಿಗಳ ಧಾರೆಯಲ್ಲಿ ತೊಳೆದು ಸಿದ್ಧಗೊಳಿಸಿದ ಈ ಕರ್ಮದ ವಕ್ತಾನ್ನದಲ್ಲಿ ಆಸಕ್ತಿಯುಕ್ತ ಕರ್ಮಗಳಲ್ಲಿರುವ ಕಹಿ ದುರ್ಗಂಧಗಳು ಕಾಣಸಿಗವು. ಇಂತಹ ಕರ್ಮವನ್ನು ಸಾತ್ತ್ವಿಕವೆಂದು ಗೀತೆಯು ನಿರ್ದೇಶಿಸಿದೆ.

## ನಿಷ್ಕಾಮ ಸಕಾಮ ಕರ್ಮಗಳಲ್ಲಿರುವ ಅಂತರ

ಫಲಾಪೇಕ್ಷೆಯಿಂದ ಮಾಡುವ ಕರ್ಮವು ದಾದಿಯು ಮಗುವಿಗೆ ಸಲ್ಲಿಸುವ ಸೇವೆಯಂತಿರುತ್ತದೆ. ಕೂಲಿಯನ್ನು ಪಡೆದು ದಾದಿಯು ಸಲ್ಲಿಸುವ ಶುಶ್ರೂಷೆಗೂ ಮಗುವಿನ ಮೇಲಿನ ಪ್ರೇಮದಿಂದ ನಿರಪೇಕ್ಷೆಯಿಂದ ತಾಯಿಯು ನಡೆಸುವ ಸೇವೆಗೂ ಎಷ್ಟು ಅಂತರವಿದೆ! ಬಾಹ್ಯದೃಷ್ಟಿಗೆ ಎರಡೂ ಸಮಾನವೇ ಆಗಿ

ತೋರಬಹುದು. ಆದರೆ ಅವುಗಳ ಅಂತರಂಗದಲ್ಲಿ ಅಂತರ ಇದ್ದೇ ಇದೆ. ತಾಯಿಯು ಮಾಡುವ ಸೇವೆಯಲ್ಲಿರುವ ಆಂತರಿಕ ಸತ್ತ್ವವನ್ನು ದಾದಿಯ ಕೆಲಸದಲ್ಲಿ ನಾವು ಕಾಣಲಾರೆವು. ಮಿಠಾಯಿಗಾರನು ನಾನಾ ರೀತಿಯ ತಿಂಡಿಗಳನ್ನು ಸಿದ್ಧಪಡಿಸುವನು; ಆದರೆ ತಾಯಿಯು ಮನೆಯಲ್ಲಿ ಮಗುವಿಗಾಗಿ ಸಿದ್ಧಪಡಿಸುವ ತಿಂಡಿಯ ಬೆಲೆ ಹಾಗೂ ಪವಿತ್ರತೆಯು ಅಂಗಡಿಯ ಪದಾರ್ಥಗಳಲ್ಲಿ ಬರಲಾರದು. ಅಂಗಡಿಗಾರನು ಅದನ್ನು ತಯಾರಿಸುವುದು ಫಲಾಪೇಕ್ಷೆಯಿಂದ. ಅದನ್ನು ಮಾರಿ ಹೆಚ್ಚು ಹಣ ಗಳಿಸಬೇಕೆನ್ನುವುದೇ ಅವನ ಉದ್ದೇಶ. ಆದರೆ ಮಗುವಿಗಾಗಿ ಆಹಾರವನ್ನು ಸಿದ್ಧಪಡಿಸುವ ತಾಯಿಯ ಉದ್ದೇಶವು ಎಷ್ಟು ಪವಿತ್ರವಿರುತ್ತದೆ! ಅವಳಿಗೆ ತನ್ನ ಸ್ವಾರ್ಥದ ಕಲ್ಪನೆಯೇ ಇರುವುದಿಲ್ಲ. ಅವಳದು ನಿಷ್ಕಾಮ ಸೇವೆ. ನಿಷ್ಕಾಮ ಭಾವನೆಯಿಂದ ಆಚರಿಸಿದ ಕಾರ್ಯವೇ ಪರಿಪೂರ್ಣವೂ ಸಮಾಜಕ್ಕೆ ಹೆಚ್ಚು ಹಿತಕರವೂ ಆಗುತ್ತದೆ. ಹೋಟೆಲ್ ಅಡಿಗೆಗಿಂತ ಮನೆಯ ಅಡಿಗೆಯು ಶುಚಿಯೂ ಪುಷ್ಟಿಕರವೂ ಆರೋಗ್ಯಕರವೂ ಎಂಬುದನ್ನು ಎಲ್ಲರೂ ಒಪ್ಪುವರು. ಲೋಕದಲ್ಲಿಯೂ ಸ್ವಾರ್ಥದೃಷ್ಟಿಯಿಂದ ಕರ್ಮವನ್ನು ಮಾಡುವವನಿಗೆ ಕರ್ಮಕ್ಕಿಂತಲೂ ಅದರ ಫಲದ ಕಡೆಗೆ ಹೆಚ್ಚು ಗಮನವಿರುವುದರಿಂದ ಕರ್ಮದಲ್ಲಿ ಅನೇಕ ಲೋಪದೋಷಗಳೂ ಅದರಿಂದ ಸಮಾಜಕ್ಕೆ ಅನೇಕ ವಿಧದ ಹಾನಿಯೂ ಬರುವ ಸಂಭವವಿದೆ. ಫಲದ ತ್ಯಾಗವನ್ನು ಮಾಡಿದವನಿಗೆ ಕರ್ಮದಲ್ಲಿ ಮಾತ್ರ ದೃಷ್ಟಿ. ಕರ್ಮವು ಸರ್ವಾಂಗಸುಂದರವಾಗುವಂತೆ ಅವನು ನಿಷ್ಠೆಯಿಂದ ಅದನ್ನು ಆಚರಿಸುತ್ತಾನೆ. ಆ ಪರಿಪೂರ್ಣವಾದ ಕರ್ಮವೇ ಲೋಕ ಹಿತಕಾರಿಯಾಗಿರುತ್ತದೆ. ಸಾತ್ತ್ವಿಕ ಕರ್ಮದ ಈ ವಿಧಾನವನ್ನು ಗೀತೆಯು ನಿರೂಪಿಸಿ ಕರ್ಮತ್ಯಾಗ ಹಾಗೂ ಕರ್ಮಾಚರಣೆಯ ಪರಸ್ಪರ ವಿರೋಧ ವಿಚಾರಗಳ ಸುಂದರ ಸಮನ್ವಯವನ್ನು ಸಾಧಿಸಿದೆ.

ನಿಷ್ಕಾಮಕರ್ಮರೂಪವಾದ ಈ ಸಾತ್ತ್ವಿಕ ಕರ್ಮವನ್ನು ಎಲ್ಲರಿಂದಲೂ ಆಚರಿಸಲು ಆಗುವುದಿಲ್ಲ. ಆಸಕ್ತಿ ಮತ್ತು ಅಭಿಮಾನವನ್ನು ತೊರೆದವನಿಗೆ ಮಾತ್ರ ಇದು ಸಾಧ್ಯ. ತಾನೇ ಕರ್ತನೆಂಬ ಅಹಂಭಾವದಿಂದಲೇ ಆಸಕ್ತಿ ಅಭಿಮಾನಗಳು ನಮ್ಮಲ್ಲಿ ಮೂಡುತ್ತವೆ. ಪರಮಾತ್ಮನೇ ಪ್ರತಿಯೊಂದು ವ್ಯಾಪಾರಕ್ಕೂ ಸ್ವತಂತ್ರ

ಕರ್ತಾರನಾಗಿರುವನು. ಅವನ ಈ ಕರ್ತೃತ್ವಶಕ್ತಿಯನ್ನು ನಮ್ಮಲ್ಲಿ ಆರೋಪಿಸಿಕೊಂಡು ಅಹಂಕಾರದಿಂದ ನಾವು ವ್ಯವಹರಿಸುತ್ತಿದ್ದೇವೆ. ದ್ವೈತ ಹಾಗೂ ಭಕ್ತಿಯ ಮಾತುಗಳನ್ನು ಆಡುತ್ತಿದ್ದರೂ ನಮ್ಮ ಕ್ರಿಯೆಗಳೆಲ್ಲವೂ ಅದ್ವೈತದ ಭ್ರಾಂತಿಯಿಂದ ಕೂಡಿವೆ. ಭಗವಂತನನ್ನು ಮರೆತು ತನ್ನ ವ್ಯವಹಾರಗಳಿಗೆಲ್ಲ ತಾನೇ ಸ್ವತಂತ್ರ ಕರ್ತನೆಂದು ಭಾವಿಸಿ ನಡೆಯುವುದೂ ಒಂದು ಅದ್ವೈತಭ್ರಾಂತಿಯೇ. ಪರಮಾತ್ಮನಲ್ಲಿರುವ ಸ್ವತಂತ್ರ ಶಕ್ತಿಯನ್ನು ತನ್ನಲ್ಲಿ ಆರೋಪಿಸಿಕೊಳ್ಳುವುದೂ ಒಂದು ರೀತಿಯ ಅದ್ವೈತಚಿಂತನವೇ. ಈ ಸ್ವಾತಂತ್ರ್ಯದ ದುರಭಿಮಾನದಿಂದಲೇ ನಮ್ಮ ಶರೀರ ಹಾಗೂ ಅದಕ್ಕೆ ಸಂಬಂಧಿಸಿದ ವಸ್ತುಗಳ ಮೇಲೆ ಅಧಿಕಾರ ಹಾಗೂ ಮಮತೆಯ ಬುದ್ಧಿ ಹುಟ್ಟಿ ಆಸಕ್ತಿ, ಅಭಿಮಾನಗಳಿಂದ ಕೆರಳಿದವರಾಗಿ ಆಸೆ- ಲಾಲಸೆಗಳಿಂದ ಕಾರ್ಯಗಳನ್ನು ಕೈಗೊಳ್ಳಲು ಆರಂಭಿಸುತ್ತೇವೆ. ಜಗತ್ತಿನ ಬಗ್ಗೆ ಪರಮಾತ್ಮನಿಗಿರುವ ಸಾರ್ವಭೌಮತೆಯನ್ನೂ ಅವನ ಸರ್ವಸ್ವಾತಂತ್ರ್ಯವನ್ನೂ ಮರೆತು ಜಗತ್ತನ್ನು ತಂತಮ್ಮ ಅಧಿಕಾರದ ಚಿಕ್ಕ ಚಿಕ್ಕ ವಲಯಗಳನ್ನಾಗಿ ವಿಭಜಿಸಿ ಕಬ್ಜಾಡುವ ದುಃಸ್ಥಿತಿಯು ಸ್ವಾತಂತ್ರ್ಯದ ಭ್ರಮೆಯಿಂದ ನಮಗೆ ಉಂಟಾಗಿದೆ. ಜಗತ್ತಿನ ಘರ್ಷಣೆ, ಸ್ವಾರ್ಥಪ್ರವೃತ್ತಿಗಳಿಗೆ ಮೂಲವಾದ ಈ ಸ್ವಾತಂತ್ರ್ಯದ ಭಾವನೆಯನ್ನೇ ನಾವು ಕಿತ್ತೊಗೆಯಬೇಕು.

**ತತ್ರೈವಂ ಸತಿ ಕರ್ತಾರಮಾತ್ಮಾನಂ ಕೇವಲಂ ತು ಯಃ।**

ಒಂದು ಕಾರ್ಯಕ್ಕೆ ಅನೇಕ ಕಾರಣಗಳಿವೆ. ಪ್ರಕೃತಿ, ಜೀವ, ಪರಮಾತ್ಮ ಮುಂತಾದ ಅನೇಕ ಕಾರಣಗಳು ಸೇರಿ ಒಂದು ಕಾರ್ಯದ ನಿಷ್ಪತ್ತಿಯಾಗುವುದು. ನಮ್ಮ ನಿಯಂತ್ರಣಕ್ಕೊಳಪಡದ ಇಂತಹ ಅನೇಕ ವಸ್ತುಗಳ ಬಲದಿಂದ ನಾವು ಕಾರ್ಯಗಳನ್ನು ಮಾಡುತ್ತಿರುವೆವು. ಇದನ್ನು ತಿಳಿಯದೆ ತಾನೊಬ್ಬನೇ ಸ್ವತಂತ್ರಕರ್ತನು, ಒಂದು ಕಾರ್ಯಸೃಷ್ಟಿಗೆ, ತನ್ನ ಒಡೆತನಕ್ಕೆ ಒಳಪಡದ ಯಾವ ವಸ್ತುವಿನ ಸಹಾಯದ ಅಗತ್ಯವೂ ಇಲ್ಲ; ಪ್ರಕೃತಿ, ಶರೀರಗಳಿಗೆಲ್ಲ ತಾನೇ ಒಡೆಯ ನೆಂಬ ಅಹಂಕಾರದಿಂದ ನಾವು ಕಾರ್ಯದಲ್ಲಿ ಪ್ರವರ್ತಿಸುತ್ತೇವೆ. ಜಗತ್ತಿನ ಸೃಷ್ಟಿಕಾರ್ಯದಲ್ಲಿ ಸಹಭಾಗಿಗಳಾದ ಚೇತನ ಮತ್ತು ಅಚೇತನ ವಸ್ತುಗಳನ್ನು

ಅರಿತು, ಇದರಲ್ಲಿ ತನಗಿರುವ ಪಾತ್ರವನ್ನು ಅರ್ಥಮಾಡಿಕೊಂಡರೆ ಇಂತಹ ಅಹಂಕಾರ, ಆಸಕ್ತಿಗಳಿಗೆ ಅವಕಾಶವು ದೊರೆಯಲಾರದು. ಪರಮಾತ್ಮನ ಸ್ವಾತಂತ್ರ್ಯ, ಸರ್ವಶಕ್ತಿಗಳನ್ನೂ ಜೀವನ ಅಲ್ಪಶಕ್ತಿಯನ್ನೂ ಪ್ರಕೃತಿ, ಶರೀರೇಂದ್ರಿಯಗಳ ಕಾರ್ಯವಿಸ್ತಾರವನ್ನೂ ಅರಿತವನು ಅಹಂಕಾರ, ಮಮಕಾರಗಳಿಗೆ ಒಳಗಾಗದೆ ನಿರ್ಲಿಪ್ತತೆಯಿಂದ ನಿಷ್ಕಾಮನೆಯಿಂದ ಸ್ವಕರ್ತವ್ಯವನ್ನು ಮಾಡಬಲ್ಲನು.

**ಯಸ್ಯ ನಾಹಂಕೃತೋ ಭಾವೋ ಬುದ್ಧಿರ್ಯಸ್ಯ ನ ಲಿಪ್ಯತೇ।**

ಈ ನಿರಹಂಕಾರ, ನಿರ್ಲಿಪ್ತತೆಗಳೇ ನಿಷ್ಕಾಮಕರ್ಮದ ಬುನಾದಿ.

**ಈಶ್ವರಃ ಸರ್ವಭೂತಾನಾಂ**
**ಹೃದ್ದೇಶೇಽರ್ಜುನ ತಿಷ್ಠತಿ।**
**ಭ್ರಾಮಯನ್ ಸರ್ವಭೂತಾನಿ**
**ಯಂತ್ರಾರೂಢಾನಿ ಮಾಯಯಾ॥**

ಈಶ್ವರನು ಎಲ್ಲ ಹೃದಯದೊಳಗೂ ನೆಲೆಸಿ ಈ ಜಗತ್ತನ್ನು ಕುಣಿಸುತ್ತಾನೆ. ಯಂತ್ರದ ಕುದುರೆಗಳಲ್ಲಿ ಮಕ್ಕಳನ್ನು ತಿರುಗಿಸಿ ಆಡಿಸುವಂತೆ ಪರಮಾತ್ಮನು ಈ ಜಗಚ್ಚಕ್ರಚಾಲನವನ್ನು ನಡೆಸಿದ್ದಾನೆ. ಸರ್ವಾಂತರ್ಯಾಮಿಯಾದ ಅವನ ಈ ಕಾರ್ಯವೈಭವವನ್ನು ತಿಳಿದವನು ಯಾವ ವಸ್ತುವಿನ ಮೇಲೂ ತನ್ನ ಒಡೆತನ ಮತ್ತು ಅಧಿಕಾರವನ್ನು ಸ್ಥಾಪಿಸಬಯಸುವುದಿಲ್ಲ. ಸರ್ವವೂ ಪರಮಾತ್ಮನ ಸೊತ್ತೆಂದು ಎಲ್ಲ ಕಾರ್ಯಗಳೂ ಅವನ ಶಕ್ತಿಯಿಂದಲೇ ನಡೆಯುವುದೆಂಬ ಅರಿವು ಮೂಡಿದಾಗ ಅಹಂಕಾರ, ಮಮತೆಗಳೆಲ್ಲ ದೂರವಾಗುವವು. ದುರ್ವಿನೀತನಾದ ಶ್ವೇತಕೇತುವು ತಂದೆಯಿಂದ ಪರಮಾತ್ಮನ ಮಹಿಮೆಯ ಬೋಧೆಯನ್ನು ಕೇಳಿ ವಿನಯಶೀಲನಾಗಿ ಪರಿವರ್ತನೆಗೊಂಡನು. ವಿಜಯೋನ್ಮತ್ತರಾದ ದೇವತೆಗಳಿಗೂ ಭಗವಂತನು ಶಕ್ತಿ ಸತ್ತ್ವಗಳನ್ನು ತುಂಬದಿದ್ದರೆ, ತಮ್ಮಿಂದ ಅಲ್ಪಕಾರ್ಯವೂ ನಡೆಯದೆಂಬ ಅನುಭವ ಉಂಟಾದಾಗಲೇ ಅವರಿಗೆ ವಿದ್ಯೆಯ ದರ್ಶನವಾಯಿತು. ಆದುದರಿಂದ ತನ್ನ ಅಸ್ವಾತಂತ್ರ್ಯ ಮತ್ತು ಪರಮಾತ್ಮನ ಸ್ವಾತಂತ್ರ್ಯದ ಪರಿಜ್ಞಾನವು ಕರ್ಮಯೋಗಕ್ಕೆ ಮುಖ್ಯ ಸಹಾಯಕವಾಗಿದೆ.

## ಜೀವನು ಕರ್ತನೆ?

ಪರಮಾತ್ಮನ ಸರ್ವಶಕ್ತಿ ಸ್ವಾತಂತ್ರ್ಯಗಳ ತತ್ತ್ವಜ್ಞಾನವು ಕೆಲವೆಡೆ ಅನಪೇಕ್ಷಿತ ವಿಪರೀತ ಪರಿಣಾಮಗಳನ್ನು ನಿರ್ಮಿಸಿದೆ. ಈ ಜೀವರೆಲ್ಲರೂ ಸೂತ್ರಧಾರನು ಕುಣಿಸುವ ಗೊಂಬೆಗಳಂತೆ ಬರೇ ಪರಮಾತ್ಮನ ಆಟಿಕೆಗಳಾಗಿರುವುದರಿಂದ ನಮಗೆ ಯಾವುದೇ ಜವಾಬ್ದಾರಿಯು ಇರುವುದಿಲ್ಲ. ನಮ್ಮ ಒಳಿತು ಕೆಡುಕುಗಳಿಗೆ ನಾವು ಯಾವ ರೀತಿಯಿಂದಲೂ ಹೊಣೆಗಾರರಲ್ಲ. ಜಗತ್ಪ್ರವರ್ತಕನಾದ ಪರಮಾತ್ಮನಲ್ಲಿಯೇ ಎಲ್ಲ ಹೊಣೆಯೂ ಇದೆ. ಆದುದರಿಂದ ನಾವು ಕರ್ಮದಲ್ಲಿ ಪ್ರವರ್ತಿಸಬೇಕಾಗಿಲ್ಲ. ಎಲ್ಲವೂ ದೇವರ ಇಚ್ಛೆಯಂತೆ ನಡೆಯುವುದರಿಂದ ಎಲ್ಲಿಯೂ ನಮ್ಮ ಹಸ್ತಕ್ಷೇಪದ ಪ್ರಸಕ್ತಿಯೇ ಇಲ್ಲ. ಆದುದರಿಂದ ನಮ್ಮ ಪಾಲಿಗೆ ಕರ್ಮತ್ಯಾಗವೇ ಉಚಿತವಾದುದು ಎನ್ನುವ ಪ್ರವೃತ್ತಿಯು ನಮ್ಮಲ್ಲಿ ಉಂಟಾಗುವ ಸಂಭವವಿದೆ. ಈಶ್ವರವಾದದಿಂದ ಲೋಕದಲ್ಲಿ ಅಕರ್ಮಣ್ಯತೆಯು ಬೆಳೆಯುವುದೆಂದು ಕೆಲವರ ಆಕ್ಷೇಪವೂ ಇದೆ.

ಇದು ಈಶ್ವರನ ಸೃಷ್ಟಿವ್ಯಾಪಾರವನ್ನು ಸರಿಯಾಗಿ ಅರ್ಥಮಾಡಿಕೊಳ್ಳದೆ ಬಂದ ತಿಳುವಳಿಕೆಯಾಗಿದೆ. ಈಶ್ವರನು ಸರ್ವಕರ್ತನಾಗಿದ್ದರೂ ಯಾವ ವಸ್ತುವಿಗೂ ಅವನೊಬ್ಬನೇ ಕರ್ತನಲ್ಲ. ಪರಮಾತ್ಮನ ಜೊತೆಗೆ ಇನ್ನೂ ಅನೇಕ ಕಾರಣಗಳು ಸೇರಿ ಒಂದು ಕಾರ್ಯವಾಗುವುದು. ನಮ್ಮ ಸುಖ ದುಃಖಾದ್ಯನುಭವಗಳಿಗೆಲ್ಲ ಈಶ್ವರನ ಜೊತೆಗೆ ನಾವೂ ಕಾರಣರು. ಪ್ರಾಕೃತಿಕ ಸಾಧನಸಂಪತ್ತು, ಈಶ್ವರನ ಶಕ್ತಿ, ನಮ್ಮ ಇಚ್ಛೆ, ಪ್ರವೃತ್ತಿ ಇವೆಲ್ಲ ಸಮಷ್ಟಿಯ ಒಂದು ಮೊತ್ತವಾಗಿ ಕಾರ್ಯ ಪರಿಣಾಮಗಳನ್ನು ಮಾಡುತ್ತಿವೆ. ನೇಯ್ಗೆಯ ಯಂತ್ರವಿಲ್ಲದೆ ನೇಕಾರನೊಬ್ಬನಿಂದಲೇ ಬಟ್ಟೆಯು ಸಿದ್ಧವಾಗುವುದೆ? ಒಂದು ವಸ್ತುವಿಗೆ ಹಲವು ಕಾರಣಗಳಿರುವಾಗ ಅವೆಲ್ಲವುಗಳ ಸಮಾವೇಶವಾಗದೆಯೇ ಕಾರ್ಯನಿಷ್ಪತ್ತಿಯಾಗಲೆಂದು ನಿರೀಕ್ಷಿಸುವುದು ಸರಿಯಲ್ಲ. ನಮ್ಮ ಒಳಿತು ಕೆಡುಕುಗಳಿಗೆ ಈಶ್ವರನು ಕಾರಣನಾಗಿದ್ದರೂ ಅವನೊಬ್ಬನೇ ಕಾರಣನಲ್ಲ. ನಮ್ಮ ಇಚ್ಛೆ ಪ್ರವೃತ್ತಿಗಳನ್ನು ಆಧರಿಸಿಯೇ ಪರಮಾತ್ಮನಿಂದ ಸೃಷ್ಟಿರಚನೆಗಳು ನಡೆಯುತ್ತಿವೆ. ಹೀಗೆ ನಮ್ಮ ಶುಭಾಶುಭಗಳಿಗೆ ಈಶ್ವರನ ಇಚ್ಛೆ, ಶಕ್ತಿಗಳು

ಕಾರಣವಾಗಿರುವಂತೆ, ನಮ್ಮ ಇಚ್ಛೆ, ಪ್ರವೃತ್ತಿಗಳೂ ಕಾರಣವಾಗಿರುವುದರಿಂದ ದೇವರೊಬ್ಬನೇ ನಮ್ಮ ವ್ಯವಹಾರವೆಲ್ಲವನ್ನೂ ನಡೆಸಲೆಂದು ನಾವು ಉದಾಸೀನರಾಗಿ ಕಾರ್ಯಪ್ರವೃತ್ತರಾಗದಿರುವುದು ಸರಿಯಲ್ಲ.

ನಮ್ಮ ಇಚ್ಛೆ, ಪ್ರವೃತ್ತಿಗಳೂ ಈಶ್ವರನಿಂದಲೇ ಉಂಟಾಗಬೇಕಲ್ಲವೆ? ಎಂದು ಇಲ್ಲಿ ಕೇಳಬಹುದು. ನಮ್ಮ ಇಂದಿನ ಇಚ್ಛೆ, ಪ್ರವೃತ್ತಿಗಳಿಗೆ ನಮ್ಮ ಹಿಂದಿನ ಇಚ್ಛೆ, ಪ್ರವೃತ್ತಿಗಳ ಸರಪಳಿಯೇ ತಳಹದಿಯಾಗಿದೆ. ನಮ್ಮ ವ್ಯಕ್ತಿತ್ವದಲ್ಲಿ ಅಡಕವಾಗಿರುವ ಸಹಜವಾದ ಚೈತನ್ಯ, ಇಚ್ಛಾಶಕ್ತಿಗಳೇ ಕೊನೆಯಲ್ಲಿ ಇವೆಲ್ಲ ವಿವಿಧ ಪ್ರವೃತ್ತಿಗಳಿಗೆ ಮೂಲ ಆಧಾರವಾಗಿರುವುದರಿಂದ ನಮ್ಮ ಶುಭ-ಅಶುಭಗಳ ಅಂತಿಮವಾದ ಹೊಣೆಗಾರಿಕೆಯು ನಮ್ಮ ಮೇಲೆಯೇ ಇದೆ. ದೇವರು ಸರ್ವಕರ್ತನಾದುದರಿಂದ ಅವನೇ ಎಲ್ಲವನ್ನೂ ಮಾಡಿಸಲೆಂದು ತಾನು ಕರ್ತವ್ಯವಿಮುಖನಾಗುವುದೂ ಒಂದು ರೀತಿಯ ತಾಮಸ ಮನೋಭಾವವೇ ಆಗಿದೆ. ಈ ಮನೋಭಾವದವರು ಧರ್ಮಾಚರಣೆ ಲೋಕಸೇವೆಯಂತಹ ಪವಿತ್ರ ಕಾರ್ಯಗಳಲ್ಲಿ ಮಾತ್ರ ಈ ತರ್ಕವನ್ನು ಒಡ್ಡುತ್ತಾರೆ. ತಮ್ಮ ನಿತ್ಯದ ಸುಗ್ರಾಸ ಭೋಜನದಲ್ಲಿ ಈ ತರ್ಕವು ಅವರ ಹತ್ತಿರ ಸುಳಿಯುವುದಿಲ್ಲ. ದೇವರೇ ಮಾಡಿಸಲೆಂದು ತಮ್ಮ ನಿತ್ಯದ ಊಟ, ಉಪಚಾರದ ಶ್ರಮ ಓಡಾಟಗಳಷ್ಟಕ್ಕೆ ಅವರು ಏನೂ ಕಡಿಮೆ ಮಾಡಿಕೊಳ್ಳುವುದಿಲ್ಲ. ದೇವರೇ ಎಲ್ಲವನ್ನು ಮಾಡಿಸುವನೆಂಬ ದೃಢ ಭಾವನೆಯಿಂದ ಜೀವನೋಪಯುಕ್ತವಾದ ಸಕಲ ಕಾರ್ಯಗಳನ್ನೂ ಸ್ಥಗಿತಗೊಳಿಸಿ ಎಲ್ಲ ಭಾರವನ್ನೂ ಪರಮಾತ್ಮನಲ್ಲಿಡುವ ಎದೆಗಾರಿಕೆಯು ಇವರಿಗಿದೆಯೆ? ಕರ್ತವ್ಯದಲ್ಲಿ ತಮಗೆ ಇರುವ ಸೋಮಾರಿತನವನ್ನು ಮುಚ್ಚಲು ವೇದಾಂತದ ಮುಖವಾಡವನ್ನು ಈ ಜನರು ಧರಿಸುತ್ತಾರೆ. ಇವರಿಗೆ ವೇದಾಂತವು ಅನುಕೂಲಸಿಂಧುವಾಗಿ ಪರಿಣಮಿಸಿದೆ. ತಮ್ಮ ಆಧ್ಯಾತ್ಮಿಕ ಕರ್ತವ್ಯಗಳ ವಿಷಯದಲ್ಲಿ ಮಾತ್ರ ದೇವರ ಕಡೆ ಬೊಟ್ಟು ತೋರಿಸಿ ಸುಮ್ಮನಿರುವ ಈ ದ್ವಿಮುಖ ಧೋರಣೆಯನ್ನು ತಾಮಸೀವೃತ್ತಿಯೆಂದು ಶ್ರೀಮಧ್ವಾಚಾರ್ಯರು ಹೇಳಿದ್ದಾರೆ.

> ಈಶ್ವರೋ ಯದಿ ಸರ್ವಸ್ಯ
> ಕಾರಕಃ ಕಾರಯೀತ ಮಾಮ್ ।

ಇತ್ಯೇವಂ ವಾದಿನಂ ಬ್ರೂಯಾತ್
ಸದಾಽಧೋ ಯಾಸ್ಯಸೀತಿ ಹ ॥

-ಗೀತಾಭಾಷ್ಯ

"ಈಶ್ವರನೇ ಸರ್ವಕರ್ತನಾಗಿದ್ದರೆ ಅವನೇ ನಮ್ಮಿಂದ ಎಲ್ಲವನ್ನೂ ಮಾಡಿಸಲೆಂಬ ವಾದವನ್ನು ಹೂಡುವವರು ಯಾವ ರೀತಿಯಿಂದಲೂ ಮುನ್ನಡೆಯನ್ನು ಪಡೆಯದೆ ಸದಾ ಅಧೋಗತಿಗೆ ಈಡಾಗುವರು."

ನಾನೇ ಸರ್ವವನ್ನೂ ಮಾಡುವವನೆ ಕರ್ತೃತ್ವದ ಅಹಂಕಾರವು ಸ್ವೇಚ್ಛಾಚಾರಕ್ಕೆ ಕಾರಣವಾಗಿ ನಮ್ಮ ಪ್ರಗತಿಗೆ ಕುಠಾರಪ್ರಾಯವಾಗಿರುವಂತೆ, ಎಲ್ಲವೂ ಈಶ್ವರನಿಂದಲೇ ನಡೆಯುವುದರಿಂದ ನಾನೇನೂ ಮಾಡಬೇಕಿಲ್ಲವೆನ್ನುವ ದೈವವಾದವೂ ನಮ್ಮ ವಿಕಾಸಕ್ಕೆ ದೊಡ್ಡ ಅಡ್ಡಿಯಾಗಿದೆ. ದೈವ ಮತ್ತು ನಮ್ಮ ಪ್ರಯತ್ನ ಇವೆರಡು ಸೇರಿಯೇ ಒಂದು ಕಾರ್ಯವು ನೆರವೇರುವುದರಿಂದ ಇವುಗಳಲ್ಲಿ ಒಂದನ್ನು ಮಾತ್ರ ಪರಿಗ್ರಹಿಸಿ ಇನ್ನೊಂದನ್ನು ಪರಿತ್ಯಜಿಸುವುದು ಸರಿಯಲ್ಲ. ರಥವು ನಡೆಯಲು ಎರಡು ಚಕ್ರಗಳೂ ಅವಶ್ಯವಿರುವಂತೆ ನಮ್ಮ ಜೀವನರಥಕ್ಕೂ ದೈವ ಪೌರುಷಗಳೆರಡೂ ಅವಶ್ಯವೇ. ಪೌರುಷವಿಲ್ಲದೆ ಬರೇ ದೈವದಿಂದ ಕಾರ್ಯವು ನಡೆಯಲೆನ್ನುವುದು ಎಣ್ಣೆಯಿಲ್ಲದೇ ಬುತ್ತಿ ಉರಿಯಲೆಂದು ಹೇಳಿದಂತಾಗುವುದು ಎಂದು ಮಹಾಭಾರತದಲ್ಲಿ ನಿರೂಪಿಸಿದ್ದಾರೆ. ಸ್ಥಿರವಾದ ಅನುಭಾವ, ಮಹಾ ಪ್ರಯತ್ನ, ಹರಿಯ ಅನುಗ್ರಹ ಇವು ಮೂರರ ಸಮಾಗಮದಿಂದಲೇ ವ್ಯಕ್ತಿಯ ಉನ್ನತಿಯೆಂದು ಶ್ರೀಮಧ್ವಾಚಾರ್ಯರೂ ಅಪ್ಪಣೆ ಕೊಡಿಸಿದ್ದಾರೆ. ಪರಮಾತ್ಮನೇ ಸ್ವತಂತ್ರ ಕರ್ತನಾಗಿದ್ದರೂ ಜೀವನಿಗೂ ಕರ್ತೃತ್ವವನ್ನು ಶಾಸ್ತ್ರವು ಹೇಳಿದೆ:

**ಕರ್ತಾ ಶಾಸ್ತ್ರಾರ್ಥವತ್ತ್ವಾತ್ ।** -ಬ್ರಹ್ಮಸೂತ್ರ

ವೇದವು ವಿಧಿ-ನಿಷೇಧಗಳನ್ನು ಯಾರಿಗಾಗಿ ಮಾಡಿದೆ? ಜಡ ವಸ್ತುಗಳಲ್ಲಿ ವಿಧಿ-ನಿಷೇಧಗಳ ಪ್ರಸಕ್ತಿಯೇ ಇಲ್ಲ. ಪರಿಪೂರ್ಣನಾದ ಭಗವಂತನಿಗೆ ವಿಧಿ ನಿಷೇಧಗಳೇಕೆ? ವೇದದಲ್ಲಿ ಮಾಡಿದ ಆ ನಿರ್ಬಂಧಗಳೆಲ್ಲ ಜೀವನಿಗಾಗಿಯೇ. ಜೀವನಿಗೆ ಕರ್ತೃತ್ವವೇ ಇಲ್ಲದಿದ್ದರೆ ಈ ವಿಧಿ-ನಿಷೇಧಗಳೆಲ್ಲ ಅರ್ಥರಹಿತಗಳಾಗಿ

ವೇದವು ಬರೇ ಬಡಬಡಿಕೆಯಾದೀತು ಎಂದು ಬ್ರಹ್ಮಸೂತ್ರದಲ್ಲಿ ಜೀವನು ಕರ್ತನೆಂಬುದನ್ನು ಸಮರ್ಥಿಸಿದ್ದಾರೆ. ಒಂದು ಕಾರ್ಯಕ್ಕೆ ಇಬ್ಬರು ಕರ್ತರಿರುವರು. ಜೀವನು ತನ್ನ ಇಚ್ಛೆ, ಪ್ರವೃತ್ತಿಗಳನ್ನು ನಿಲ್ಲಿಸಿದರೆ ಅವನಿಗೆ ಸಂಬಂಧಿಸಿದ ಕಾರ್ಯವು ಅಲ್ಲಿ ಸ್ಥಗಿತವಾಗಲೇಬೇಕು. ಒಂದು ಕಾರ್ಯದ ನಿಷ್ಪತ್ತಿಯಾಗಲು ಅದಕ್ಕೆ ಸಂಬಂಧಿಸಿದ ಎಲ್ಲ ಕಾರಣಗಳ ಸಮಾವೇಶವಾಗಲೇ ಬೇಕೆಂಬುದು ಅನಿವಾರ್ಯವಾದ ನಿಯಮ. ಹೀಗಿರುವಾಗ ಈಶ್ವರನ ಸಹಾಯ ವಿಲ್ಲದೆ ತನ್ನೊಬ್ಬನಿಂದಲೇ ಕಾರ್ಯವು ನಡೆಯುವುದೆಂಬ ಅಹಂಭಾವನೆಯಂತೆ ಈಶ್ವರನ ಈ ಸೃಷ್ಟಿ ಕಾರ್ಯದಲ್ಲಿ ತನ್ನದೇನೂ ಕರ್ತವ್ಯವಿಲ್ಲವೆಂದು ದೂರ ಸರಿಯುವ ಉದಾಸೀನ ಪ್ರವೃತ್ತಿಯೂ ಖಂಡನೀಯವೇ.

**ಅಜ್ಞಃ ಪ್ರತ್ಯಕ್ಷಂ ತ್ವಪಹಾಯೈವ ದೈವಂ**
**ಮತ್ವಾ ಕರ್ತೃ ಸ್ವಾತ್ಮಕರ್ಮ ಪ್ರಜಹ್ಯಾತ್ ।**

-ಮಹಾಭಾರತ ತಾತ್ಪರ್ಯನಿರ್ಣಯ

"ಪ್ರತ್ಯಕ್ಷವನ್ನು ಅಲಕ್ಷಿಸಿ ದೈವವೊಂದೇ ಎಲ್ಲವನ್ನೂ ಮಾಡುವುದೆಂದು ಭಾವಿಸಿ ತನ್ನ ಕರ್ತವ್ಯವನ್ನು ತೊರೆಯುವವನು ಅಜ್ಞಾನಿಯು."

**ವಿದ್ವಾನ್ ಜೀವಂ ವಿಷ್ಣುವಶೇ ವಿದಿತ್ವಾ**
**ಕರೋತಿ ಕರ್ತವ್ಯಮಜಸ್ರಮೇವ ॥**

-ಮಹಾಭಾರತ ತಾತ್ಪರ್ಯನಿರ್ಣಯ

"ಜ್ಞಾನಿಯಾದವನು ತನ್ನನ್ನು ಪರಮಾತ್ಮನ ವಶನೆಂದು ಭಾವಿಸಿ ಅದರ ಜೊತೆಗೆ ತನ್ನ ಕರ್ತವ್ಯವನ್ನು ಅರಿತು ಉತ್ಸಾಹ ಮತ್ತು ನಿರಹಂಕಾರ ವೃತ್ತಿಯಿಂದ ಸರ್ವದಾ ಕಾರ್ಯೋನ್ಮುಖನಾಗುತ್ತಾನೆ." ದೈವವಾದದ ಕುತರ್ಕವನ್ನಾಶ್ರಯಿಸದೆ, ಈ ಸೃಷ್ಟಿಯ ಕಾರ್ಯದಲ್ಲಿ ನಮಗಿರುವ ಪಾತ್ರ ಮತ್ತು ಹೊಣೆಯನ್ನು ಅರಿತು, ಪರಮಾತ್ಮನ ಪ್ರಭುತ್ವವನ್ನು ಮರೆಯದೆ, ಅವನ ಆದೇಶ, ನಿಯಮಗಳಿಗೆ ಅನುಸಾರವಾಗಿ, ನಮ್ಮ ಇಚ್ಛೆ, ಪ್ರವೃತ್ತಿಗಳನ್ನು ರೂಪಿಸಿಕೊಂಡು, ಅಹಂಕಾರ, ಮಮತೆಗಳಿಲ್ಲದೆ, ನಾವು ಕಾರ್ಯಪ್ರವೃತ್ತರಾಗಬೇಕೆಂಬುದೇ ವೇದ, ಉಪನಿಷತ್ತು, ಗೀತೆಗಳ ಏಕಾಭಿಪ್ರಾಯದ ಸಂದೇಶವಾಗಿದೆ. ವ್ಯಕ್ತಿಸ್ವಾತಂತ್ರ್ಯ

ಮತ್ತು ದೈವವಾದ ಇವೆರಡರ ಸುವರ್ಣ ಮಾಧ್ಯಮವನ್ನು ಗೀತೆಯು ನಮಗೆ ತೋರಿಸಿದೆ.

## ಶರಣಾಗತಿ

ಈವರೆಗಿನ ವಿಸ್ತೃತ ನಿರೂಪಣೆಯಿಂದ ಅರ್ಜುನನ ಪ್ರಶ್ನೆಗಳಿಗೆಲ್ಲ ಸರಿಯಾದ ಸಮಾಧಾನವು ದೊರೆತಿದೆ. ಆತ್ಮ, ಪರಮಾತ್ಮ ಹಾಗೂ ಪ್ರಾಕೃತ ಜಡಪದಾರ್ಥಗಳ ಪರಸ್ಪರ ಸಂಬಂಧ ಮತ್ತು ಪ್ರಪಂಚದಲ್ಲಿ ಅವುಗಳ ಕಾರ್ಯವಿಭಾಗ ಹಾಗೂ ಶಕ್ತಿಸ್ವಭಾವಗಳ ಸವಿಸ್ತಾರ ವಿವೇಚನೆಯಾಗಿದೆ. ಇದರಿಂದ ಜಗತ್ತಿನಲ್ಲಿ ವ್ಯಕ್ತಿಯ ಪಾತ್ರವನ್ನು ಸರಿಯಾಗಿ ಅರ್ಥ ಮಾಡಿಕೊಳ್ಳಲು ಅವಕಾಶವಾಗಿದೆ. ಪ್ರಕೃತಿಯ ಸಂಬಂಧವು ಅನಾದಿ ಕಾಲದಿಂದಲೂ ಜೀವರಿಗೆ ಇದೆ. ಎಷ್ಟು ಕಾಲದಿಂದ ಜೀವರಿರುವರೋ ಅಷ್ಟು ಕಾಲದಿಂದಲೂ ಪ್ರಕೃತಿಯ ಅವರಣವು ಅವರನ್ನು ನಿರ್ಬಂಧಿಸಿದೆ. ಬೇಡವೆಂದರೂ ಪ್ರಕೃತಿ ಸಂಬಂಧವಿರುವವರೆಗೆ ಅದರ ಕಾರ್ಯಪರಿಣಾಮಗಳಿಗೆ ನಾವು ಒಳಗಾಗಲೇಬೇಕು. ಈ ಪ್ರಕೃತಿಯಿಂದ ಅತೀತರಾಗುವುದೇ ನಮ್ಮ ಗುರಿಯಾಗಿದ್ದರೂ ಈ ಪ್ರಾಕೃತ ಜಗತ್ತಿನಲ್ಲಿ ಇರುವವರೆಗೆ ನಮ್ಮಲ್ಲಿರುವ ಸಾಧನಸಾಮಗ್ರಿಯನ್ನೂ ಪ್ರಕೃತಿಯ ಶಕ್ತಿಯನ್ನೂ ಯೋಗ್ಯ ರೀತಿಯಿಂದ ಬಳಸಿಕೊಂಡು ನಮ್ಮ ಗುರಿಯನ್ನು ಮುಟ್ಟುವ ದಾರಿಯಲ್ಲಿ ನಡೆಯಬೇಕು. ಪ್ರಕೃತಿಯ ಸಂಬಂಧದಿಂದ ಮಾನವನಿಗೆ ಈ ಸಂಸಾರದ ಕ್ಲೇಶ ತಾಪಗಳೊದಗಿವೆ ಎಂದು ಅದರ ಮೇಲಿನ ದ್ವೇಷದಿಂದ ಈ ಜಗತ್ತಿನ ಯಾವ ವ್ಯವಹಾರಗಳೂ ಬೇಡವೆಂದು ನಿಷ್ಕ್ರಿಯರಾಗಿ ಕುಳಿತುಕೊಳ್ಳುವುದರಿಂದ ನಾವು ಏನನ್ನೂ ಸಾಧಿಸಿದಂತಾಗುವುದಿಲ್ಲ. ಪ್ರಕೃತಿಯ ಬಂಧನದಲ್ಲಿ ನಾವಿರುವೆವೆಂಬ ವಸ್ತುಸ್ಥಿತಿಯನ್ನು ಅರಿತು ಶಿಸ್ತು, ಸಂಯಮಗಳಿಂದ ಇಲ್ಲಿ ವರ್ತಿಸಿ ಈ ಕಾರಾಗೃಹದಿಂದ ಬಿಡುಗಡೆಯಾಗಬೇಕೆಂಬುದನ್ನು ನಾವು ತಿಳಿದಿರಬೇಕು. ಪ್ರಕೃತಿಯನ್ನು ದ್ವೇಷಿಸಿ ಜಗತ್ತಿನ ಕರ್ತವ್ಯಗಳಲ್ಲಿ ಪಾಲುಗೊಳ್ಳದಿರುವುದರಿಂದ ನಮ್ಮ ಪ್ರಕೃತಿಗೇ ನಾವು ತಡೆಯನ್ನುಂಟುಮಾಡಿಕೊಂಡಂತಾಗುವುದು. ಈ ಪ್ರಕೃತಿಯ ಸಾಗರವನ್ನು ದಾಟಬೇಕೆನ್ನುವುದು ನಮ್ಮ ಅದಮ್ಯ ಆಕಾಂಕ್ಷೆಯಾಗಿದ್ದರೆ ನಾವು ಪ್ರಕೃತಿಯ ಈಚೆಯ ದಡದಲ್ಲಿಯೇ ಕುಳಿತು ಸಾಗರದಲ್ಲಿ ಇಳಿಯಬೇಕೇ ಬೇಡವೇ ಎಂದು

ಡೋಲಾಯಮಾನ ಚಿತ್ತದಿಂದ ಸಂಶಯಾಸ್ಕಂದಿತ ಮನಸ್ಕರಾಗಿ ಕಾಲಹರಣಮಾಡುವುದರಿಂದ ಏನು ಸಾಧಿಸಿದಂತಾಗುವುದು? ಧೈರ್ಯದಿಂದ ಈ ಸಂಸಾರಸಾಗರದಲ್ಲಿ ನಾವು ಧುಮುಕಲೇಬೇಕು.

**ಈಸಬೇಕು ಇದ್ದು ಜೈಸಬೇಕು ।** -ಶ್ರೀ ಪುರಂದರದಾಸರು

ಈ ಪ್ರವಾಹದಲ್ಲಿ ಇಳಿದರೂ ಅದರಲ್ಲಿ ಮುಳಗದೆ 'ಈಸಿ ಜೈಸುವ' ಕಲೆಯನ್ನು ಗೀತೆಯು ನಮಗೆ ಹೇಳಿದೆ. ಆಸಕ್ತಿ ಮೋಹಗಳ ಪಾಶವನ್ನು ಬಿಗಿದುಕೊಂಡು ಈ ಜಗತ್ತಿನಲ್ಲಿ ಇಳಿದರೆ ನಾವು ಇದರಿಂದ ಪಾರಾಗುವ ಸಂಭವವೇ ಇಲ್ಲ. ಅನಾಸಕ್ತಿಯಿಂದ ವಿಹಿತ ಕರ್ತವ್ಯಗಳನ್ನು ಆಚರಿಸಿಕೊಂಡಿದ್ದರೆ ಜಗತ್ತಿನ ಈ ಕರ್ಮಪ್ರವಾಹದಲ್ಲಿದ್ದರೂ ಅದರ ಯಾವ ಸೆಳೆತ, ಸುಳಿಯೊಳಗೆ ಸಿಲುಕದೆ ಸಾಗಲು ನಮಗೆ ಸಾಧ್ಯವಾಗುವುದು.

ಜಗತ್ತಿನಲ್ಲಿದ್ದರೂ ಅದರ ಬಂಧವು ಬಿಗಿಯಾಗದಂತೆ ಅದರ ಸೆಳೆತದಲ್ಲಿ ಕೊಚ್ಚಿಹೋಗದಂತೆ ನಾವು ಎಷ್ಟು ಎಚ್ಚರ ವಹಿಸಿದರೂ ಸಾಲದು. ಈ ಬಂಧನದಿಂದ ಪೂರ್ಣವಾಗಿ ಬಿಡುಗಡೆ ಹೊಂದುವ ಬಗೆಯನ್ನು ಆಲೋಚಿಸಬೇಕು. ಅನಾದಿಯಾದ ಈ ಪ್ರಕೃತಿಬಂಧದ ವಿಮೋಚನೆಯು ನಮ್ಮ ಶಕ್ತಿಗೆ ಮೀರಿದುದಾಗಿದೆ. ಇದು ನಮ್ಮ ಶಕ್ತಿಗೆ ಒಳಪಡುತ್ತಿದ್ದರೆ, ಇದನ್ನು ಅಡಗಿಸುವ ತೇಜಸ್ಸು ನಮ್ಮಲ್ಲಿ ಸ್ವಯಂಸಿದ್ಧವಾಗಿದ್ದರೆ, ಈ ಕ್ಲೇಶ-ವಿಪ್ಲವಗಳಿಗೆ ನಾವು ಈಡಾಗುತ್ತಿರಲಿಲ್ಲ. ಇದಕ್ಕಾಗಿ ಪ್ರಕೃತಿ, ಜೀವರನ್ನೆಲ್ಲ ಮೀರಿಸುವ ವಿಶ್ವದ ಮಹಾಶಕ್ತಿಯ ಆಸರೆಯನ್ನು ಪಡೆಯಬೇಕು.

**ತಮೇವ ಶರಣಂ ಗಚ್ಛ ಸರ್ವಭಾವೇನ ಭಾರತ ।**

ಅವನಲ್ಲಿ ಶರಣಾಗತರಾಗದೆ, ಅವನಲ್ಲಿ ಅನನ್ಯಭಕ್ತಿಯಿಂದ ನಡೆಯದೆ ಇದ್ದರೆ, ನಮ್ಮ ಜೀವನದ ಈ ಮಹಾ ಲಕ್ಷ್ಯವನ್ನು ಮುಟ್ಟಲಾರೆವು. ಮಗುವಿನ ಕೈಯಲ್ಲಿ ಮೂಸಂಬಿಯನ್ನು ಇತ್ತಂತೆ ನಮ್ಮ ಸ್ವರೂಪಾನಂದದ ನಿಧಿಯು ನಮ್ಮ ಕೈಯಲ್ಲೇನೋ ಇದೆ. ಮೂಸಂಬಿಯ ಹೊರ ಸಿಪ್ಪೆಯನ್ನು ತೆಗೆಯಲು ಮಗುವಿಗೆ ಸಾಧ್ಯವಾಗುವುದೆ? ತಾಯಿಯೇ ಅದನ್ನು ಮಗುವಿಗೆ ಸುಲಿದು ನೀಡಬೇಕು. ಅದರಂತೆ ನಮ್ಮ ಸ್ವರೂಪಾನಂದದ ಹೊರಗಿನ ಪ್ರಕೃತಿಯ ಆವರಣವನ್ನು

ಕಿತ್ತೊಗೆಯಲು ಸಾಧ್ಯವಾಗದೆ ನಮಗೆ ಈ ಆನಂದದ ನಿಧಿಯು ಇದ್ದರೂ ಇಲ್ಲದಂತೆ. ಭಗವಂತನೇ ತಾಯಿಯ ಮಮತೆಯಿಂದ ಈ ಹೊರ ಆವರಣವನ್ನು ಬಿಡಿಸಬೇಕು.

**ಅಜ್ಞಾನಾಂ ಜ್ಞಾನದೋ ವಿಷ್ಣುಃ**
**ಜ್ಞಾನಿನಾಂ ಮೋಕ್ಷದಶ್ಚ ಸಃ ।**

- ಅನುವ್ಯಾಖ್ಯಾನ

ನಮಗೆ ಜ್ಞಾನ, ಬಂಧನಿವೃತ್ತಿ ಮುಂತಾದ ಎಲ್ಲ ವಿಕಾಸ, ಬೆಳವಣಿಗೆಗಳು ಪರಮಾತ್ಮನಿಂದಲೇ ಆಗಬೇಕು. ನಮ್ಮ ಜೀವನದ ಎಲ್ಲ ಆಗುಹೋಗುಗಳಿಗೂ ಅವನು ಕಾರಣನು. ಅವನ ಶಕ್ತಿ, ಅನುಗ್ರಹಗಳಿಲ್ಲದೆ ನಮ್ಮಿಂದ ಏನೂ ನಡೆಯದೆಂಬುದನ್ನು ಅರಿತು ಸರ್ವಾತ್ಮನಾ ಭಗವಂತನನ್ನು ಆಶ್ರಯಿಸಿಕೊಂಡು ಭಕ್ತಿಪೂರ್ಣ ಮನೋಭಾವದಿಂದ ನಮ್ಮ ಕರ್ತವ್ಯವನ್ನು ಆಚರಿಸಬೇಕು. ಭಕ್ತಿಯೇ ಕರ್ಮದ ಅಂತಃಸತ್ತ್ವವು. ಆ ಸತ್ತ್ವವು ಇಲ್ಲದ ಕರ್ಮಗಳು ರಾಶಿರಾಶಿಯಾಗಿದ್ದರೂ ಅವೆಲ್ಲವೂ ನಿರ್ಜೀವ ಹಾಗೂ ನಿಷ್ಪ್ರಯೋಜನವೇ.

**ಸರ್ವಧರ್ಮಾನ್ ಪರಿತ್ಯಜ್ಯ ಮಾಮೇಕಂ ಶರಣಂ ವ್ರಜ ।**

ದೈವೀ ಭಾವನೆಯಿಲ್ಲದ, ಪರಮಾತ್ಮನ ಕಡೆಗೆ ನಮ್ಮನ್ನು ಒಯ್ಯದ, ಕರ್ಮಗಳೆಲ್ಲವೂ ವ್ಯರ್ಥವಾಗಿವೆ. ಅವೆಲ್ಲವನ್ನೂ ನಾವು ಮಾಡಬೇಕು. ಸರ್ವಧರ್ಮಗಳ ತ್ಯಾಗವೆನ್ನುವುದರ ಭಾವವು ಇದೇ ಆಗಿದೆ. ಅಥವಾ ಫಲಾಪೇಕ್ಷೆಯನ್ನು ತ್ಯಜಿಸುವುದೇ ಸರ್ವಧರ್ಮಗಳ ತ್ಯಾಗವೆಂದೂ ನಾವು ಭಾವಿಸಬಹುದು.

**ಯಸ್ತು ಕರ್ಮಫಲತ್ಯಾಗೀ ಸ ತ್ಯಾಗೀತ್ಯಭಿಧೀಯತೇ ।**

ಎಂಬುದಾಗಿ ಫಲವನ್ನು ತೊರೆಯುವುದೇ ಕರ್ಮದ ನಿಜವಾದ ತ್ಯಾಗವೆಂದು ಗೀತೆಯಲ್ಲಿಯೇ ಹಿಂದೆ ಹೇಳಿದೆ.

ಕೆಲವರಂತೂ

**ಸರ್ವಧರ್ಮಾನ್ ಪರಿತ್ಯಜ್ಯ ಮಾಮೇಕಂ ಶರಣಂ ವ್ರಜ।**

ಎನ್ನುವ ಪದ್ಯವನ್ನು ತಮ್ಮ ಮತೀಯ ವಿಚಾರದ ಕಡೆಗೆ ಬಲಾತ್ಕಾರದಿಂದ ಎಳೆದು ವಿಚಿತ್ರವಾದ ಅರ್ಥವನ್ನು ಮಾಡುವರು. ಈವರೆಗೆ ಕರ್ಮಾಚರಣೆ ಹಾಗೂ ಭಕ್ತಿಯ ಬಗ್ಗೆ ಹೆಚ್ಚಿನ ಪ್ರಾಧಾನ್ಯವನ್ನು ಕೊಟ್ಟು ನೀಡಿದ ಉಪದೇಶಕ್ಕೆ ಸಂಪೂರ್ಣವಾಗಿ ವ್ಯತಿರಿಕ್ತವಾದ ಮಾತನ್ನು ಅವರು ಪರಮಾತ್ಮನಿಂದ ಹೊರಡಿಸುತ್ತಾರೆ. ಸರ್ವಕರ್ಮಗಳನ್ನು ಪೂರ್ಣವಾಗಿ ಪರಿತ್ಯಜಿಸಿ, ತಾನೇ ಪರಮಾತ್ಮನೆಂಬ ಅದ್ವೈತಭಾವದಿಂದ ನಡೆಯಬೇಕೆನ್ನುವುದು ಅವರ ದೃಷ್ಟಿಯಲ್ಲಿ ಈ ಶ್ಲೋಕದ ಅರ್ಥವಾಗಿದೆ. ಅದ್ವೈತಭಾವ ಮತ್ತು ಶರಣಾಗತಿ ಇವೆರಡೂ ಪರಸ್ಪರ ವಿರೋಧಿ ವಿಚಾರಗಳಾಗಿವೆ. ಇದರ ಹಿಂದಿನ ಶ್ಲೋಕದಲ್ಲಿಯೇ ಶ್ರೀಕೃಷ್ಣನು ಅರ್ಜುನನನ್ನು ತನಗೆ ಪರಮ ಇಷ್ಟನೆಂದು ಕರೆದು ಅವನಿಗಾಗಿ ಅತ್ಯಂತ ಪ್ರಧಾನವಾದ ಸಂದೇಶವನ್ನು ಕೊಡುವುದಾಗಿ ಘೋಷಿಸಿ,

ಮನ್ಮನಾ ಭವ ಮದ್ಭಕ್ತೋ ಮದ್ಯಾಜೀ ಮಾಂ ನಮಸ್ಕುರು ।

ಎಂಬುದಾಗಿ ಪರಮಾತ್ಮನ ಪ್ರೀತಿಯ ಉದ್ದೇಶದಿಂದ ಮಾಡುವ ಯಜ್ಞ ರೂಪವಾದ ಕರ್ಮ, ಭಕ್ತಿ, ನಮಸ್ಕಾರಗಳನ್ನು ಆಚರಿಸಬೇಕೆಂದೂ ಇವು ಪರಮಶ್ರೇಯಸ್ಸಿಗೆ ಸಾಧನವೆಂದೂ ಹೇಳಿ ಮುಂದಿನ ಶ್ಲೋಕದಲ್ಲಿಯೇ ಅವುಗಳಿಗೆ ಪೂರ್ಣ ವಿರೋಧಿ ಮಾತುಗಳನ್ನು ಕೃಷ್ಣನಿಂದ ನುಡಿಸುವುದು ವಿಸಂಗತಿಯ ಪರಮಾವಧಿಯಾಗುವುದು. 'ಅದ್ವೈತಸಿದ್ಧಿ'ಕಾರರಾದ ಮಧುಸೂದನ ಸರಸ್ವತಿಯವರು ಇದು ಕ್ಲಿಷ್ಟಕಲ್ಪನೆಯೆಂದು ಈ ಅರ್ಥದ ಅಸ್ವಾರಸ್ಯವನ್ನು ತೋರಿಸಿರುವರು. ಇಲ್ಲಿ ಶ್ರೀಕೃಷ್ಣನು ಭಕ್ತಿಯ ಪರಮೋಚ್ಚಾಭ್ಯುದಯದಶೆಯಾದ ಶರಣಾಗತಿಯನ್ನು ಉಪದೇಶಿಸಿರುವನು. ಸರ್ವಭಾವದಿಂದ ಪರಮಾತ್ಮನನ್ನು ಆಶ್ರಯಿಸಿ ಪರಮಭಕ್ತಿಯಿಂದ ಕರ್ತವ್ಯಗಳನ್ನು ಆಚರಿಸುವುದೊಂದೇ ನಮ್ಮ ಈ ಅನರ್ಥ ವಿಪ್ಲವಗಳ ಏಕಮಾತ್ರ ಪರಿಹಾರೋಪಾಯವಾಗಿದೆ. ಈ ಶರಣಾಗತಿಯ ಭಾವವು ನಮ್ಮ ಪ್ರತಿಯೊಂದು ಕೃತಿಯಲ್ಲಿ ಅನುಸ್ಯೂತವಾಗಿರಬೇಕು.

ಕುರು ಭುಂಕ್ಷ್ವ ಚ ಕರ್ಮ ನಿಜಂ ನಿಯತಂ
ಹರಿಪಾದವಿನಮ್ರಧಿಯಾ ಸತತಮ್ । -ದ್ವಾದಶಸ್ತೋತ್ರ

ಕರ್ಮವನ್ನು ಆಚರಿಸುವಾಗಲೂ ಅದರ ಫಲವನ್ನು ಭೋಗಿಸುವಾಗಲೂ ಹರಿಯ ಸ್ಮರಣೆಯು ನಿರಂತರವಾಗಿರಬೇಕು. ನಮ್ಮ ಶರೀರದ ಅಂಗಾಂಗಗಳಲ್ಲಿ ಚೇತನವು ಹರಿಯುವುದು ಅವಶ್ಯವಿರುವಂತೆ ನಮ್ಮ ಪ್ರತಿಯೊಂದು ಕರ್ಮದಲ್ಲಿ ನಿರಂತರವಾಗಿ ಹರಿಭಕ್ತಿಯು ಹರಿಯಬೇಕು. ಗೀತೆಯಲ್ಲಿ ಸರ್ವಪ್ರಧಾನವೆಂದು ಉಲ್ಲೇಖಿಸಿ, ಅಂತಿಮವಾಗಿ ಬಂದಿರುವ ಈ ಉಪದೇಶವೇ ಗೀತೆಯ ಸಾರ ಸಂದೇಶವಾಗಿದೆ.

## ಉಪಸಂಹಾರ

**ಸ್ವವಿಹಿತವೃತ್ತ್ಯಾ ಭಕ್ತ್ಯಾ**
**ಭಗವದಾರಾಧನಮೇವ ಪರಮೋ ಧರ್ಮಃ ।**

-ಗೀತಾ ಭಾಷ್ಯ

ಎಂದು ಒಂದು ಮಾತಿನಲ್ಲಿ ಶ್ರೀಮಧ್ವಾಚಾರ್ಯರು ಗೀತೆಯ ಉಪದೇಶದ ಸಾರವನ್ನು ಅರುಹಿದ್ದಾರೆ. ''ವಿಹಿತ ವೃತ್ತಿಯಿಂದ ಭಕ್ತಿಯಿಂದ ಭಗವಂತನನ್ನು ಆರಾಧಿಸುವುದೇ ಮಾನವರ ಪರಮಧರ್ಮವಾಗಿದೆ.'' ಸಂಸಾರ ಪಾಶದಲ್ಲಿ ಸಿಲುಕದಿರಲು ಮತ್ತು ಪ್ರಕೃತಿಬಂಧನದಿಂದ ಪೂರ್ಣ ವಿಮೋಚನೆ ಪಡೆಯಲು ಇದೇ ಜೀವನಿಗಿರುವ ಏಕಮಾತ್ರ ಉಪಾಯವಾಗಿದೆ. ಪ್ರಕೃತಿಗೆ ಹೆದರಿಯಾಗಲಿ ಉದಾಸೀನತೆಯಿಂದಾಗಲಿ ಕರ್ತವ್ಯವನ್ನು ತ್ಯಜಿಸುವುದರಿಂದ ನಾವು ಯಾವ ಪುರುಷಾರ್ಥವನ್ನೂ ಪಡೆಯಲಾರೆವು. ಅದರಂತೆ ಲೌಕಿಕ ಸುಖದ ಬಯಕೆಯಿಂದ ಸ್ವಾರ್ಥಪರಾಯಣರಾಗಿ ಕಾಮ್ಯ ಕೃತಿಗಳನ್ನೇ ನಡೆಸಿ ಪ್ರಾಕೃತ ಸುಖವನ್ನು ಸವಿಯುತ್ತಿದ್ದರೆ ಆ ಪ್ರಕೃತಿಯೇ ನಮ್ಮನ್ನು ಕಬಳಿಸಬಹುದು.

**ಸ್ವಕರ್ಮಣಾ ತಮಭ್ಯರ್ಚ್ಯ**
**ಸಿದ್ಧಿಂ ವಿಂದತಿ ಮಾನವಃ ।**

ನಮ್ಮ ಕರ್ತವ್ಯಗಳನ್ನು ಹರಿಪೂಜೆಯೆಂದು ಭಾವಿಸಿ, ನಿಷ್ಕಾಮನೆಯಿಂದ ಅದನ್ನು ಆಚರಿಸಬೇಕು. ವಿಷಯಸುಖದ ಮೇಲಿನ ವಿರಕ್ತಿಯಿಂದ ಈ ನಿಷ್ಕಾಮನೆಯನ್ನು ನಾವು ಅಳವಡಿಸಿಕೊಳ್ಳಬಹುದು. ಹರಿಭಕ್ತಿ ಮತ್ತು ವಿಷಯ-ವಿರಕ್ತಿ ಇವೆರಡು ನಮ್ಮ ಪ್ರತಿಯೊಂದು ಕರ್ತವ್ಯದಲ್ಲಿಯೂ ಅಡಕವಾಗಿದ್ದಲ್ಲಿ

ನಾವು ನಿರ್ಭೀತಿಯಿಂದ ಯಾವ ವಿಪ್ಲವಕ್ಕೂ ಗುರಿಯಾಗದಂತೆ ಜಗತ್ತಿನಲ್ಲಿ ನಡೆಯಲು ಸಾಧ್ಯವಾಗುವುದು. ಸಂಸಾರವನ್ನು ಈಸಿ ಅದನ್ನು ಜಯಿಸಲು ನಮಗೆ ಏನೂ ಪ್ರಯಾಸವಾಗಲಾರದು. ಪ್ರಾಪಂಚಿಕ ಜೀವನದಿಂದ ನಾವು ವಿಮುಖರೂ ಆಗಬಾರದು; ಪ್ರಪಂಚದಲ್ಲಿಯೇ ತಲ್ಲೀನರೂ ಆಗಬಾರದು. ಇಂದು ಈ ಎರಡು ವಿಧದ ಪ್ರವೃತ್ತಿಗಳನ್ನು ಎಲ್ಲೆಡೆಗಳಲ್ಲಿಯೂ ನೋಡುತ್ತಿರುವೆವು. ಆಲಸ್ಯ ಕರ್ತವ್ಯ ಭ್ರಷ್ಟತೆಗಳು ಒಂದೆಡೆ ವ್ಯಾಪಿಸಿದ್ದರೆ, ಸಂಪತ್ತು ಅಧಿಕಾರಗಳ ಮೇಲಿನ ಮೋಹದಿಂದ ಸ್ವಾರ್ಥಪ್ರವೃತ್ತಿಗಳಲ್ಲಿ ಪೂರ್ಣವಾಗಿ ಮಗ್ನವಾಗಿರುವ ಜನ ಇನ್ನೊಂದೆಡೆ. ಜಗತ್ತು ಮಾಯೆಯೆಂದಾಗಲಿ ಬಂಧನವೆಂದಾಗಲಿ ಭಾವಿಸಿ, ಕರ್ತವ್ಯವನ್ನು ತೊರೆಯುವುದು ಮತ್ತು ಈಶ್ವರನನ್ನು ಮರೆತು ಅಥವಾ ಅಲಕ್ಷಿಸಿ ರಾಗದ್ವೇಷಪೂರ್ಣ ಕೃತಿಗಳಲ್ಲಿಯೇ ಆಸಕ್ತರಾಗಿರುವುದು, ಈ ಎರಡು ತರಹದ ಜೀವನ ರೀತಿಗಳು ನಮ್ಮ ಮುಂದಿದ್ದು, ಇವೆರಡೂ ನಮ್ಮ ಪ್ರಗತಿಗೆ ಪ್ರತಿರೋಧಗಳಾಗಿವೆ. ನಮಗೆ ಜೀವನದಿಂದ ವಿಮುಖವಾದ ಧರ್ಮವೂ ಬೇಡ; ಧರ್ಮದಿಂದ ವಿಮುಖವಾದ ಜೀವನವೂ ಸಲ್ಲದು. ಧರ್ಮ, ಭಕ್ತಿಗಳನ್ನು ಅಳವಡಿಸಿಕೊಂಡ ಉದಾತ್ತ ಜೀವನರೀತಿಯನ್ನು ನಾವಿಂದು ರೂಪಿಸಿಕೊಳ್ಳ ಬೇಕು. ತಾಮಸ, ರಾಜಸ ಪ್ರವೃತ್ತಿಗಳಿಗೆ ತಲೆಬಾಗದೆ ನಮ್ಮ ಪಾಲಿಗೆ ಬಂದ ಕರ್ತವ್ಯವನ್ನು ಪರಮಾತ್ಮನ ಭಕ್ತಿಯ ಹಿನ್ನೆಲೆಯಲ್ಲಿ ಆಚರಿಸುವುದರಿಂದಲೇ ಜೀವನದ ಮಹೋನ್ನತ ಶ್ರೇಯಸ್ಸನ್ನು ನಾವು ಪಡೆಯಬಲ್ಲೆವು. ಗೀತೆಯು ಮಾನವ ಜಗತ್ತಿಗೆ ಸಾರಿದ ಮಂಗಲಮಯ ಸಂದೇಶವೇ ಇದಾಗಿದೆ.

ಪರಮಾತ್ಮನ ಮುಖದಿಂದ ಹೊರಟ ಉಪದೇಶದ ಅಮೃತಧಾರೆಯಿಂದ ಅರ್ಜುನನ ಅಂತಃಕರಣಪಟಲದಲ್ಲಿ ಅಂಟಿದ್ದ ಮೋಹಮಲಗಳೆಲ್ಲ ಪೂರ್ತಿಯಾಗಿ ಕೊಚ್ಚಿಹೋದವು. ಅವನ ಹೃದಯದಲ್ಲಿ ಸುಪ್ತವಾಗಿದ್ದ ಜ್ಞಾನದ ದಿವ್ಯಾಂಕುರವು ಚಿಗುರಿ ವಿಕಸಿತವಾಯಿತು.

ನಷ್ಟೋ ಮೋಹಃ ಸ್ಮೃತಿರ್ಲಬ್ಧಾ
ತ್ವತ್ ಪ್ರಸಾದಾನ್ಮಯಾಚ್ಯುತ ।
ಸ್ಥಿತೋಽಸ್ಮಿ ಗತಸಂದೇಹಃ
ಕರಿಷ್ಯೇ ವಚನಂ ತವ ॥

"ನನ್ನ ಮೋಹದ ನಿರಸನವಾಗಿದೆ. ಮೋಹದಿಂದ ಉಂಟಾದ ಅಭಿಭವದಿಂದ ಕಳೆದುಹೋದಂತಿರುವ ಜ್ಞಾನದ ನಿಧಿಯನ್ನು ನಿನ್ನ ಅನುಗ್ರಹದಿಂದ ತಿರುಗಿ ಪಡೆದೆ. ನನ್ನ ಸಂದೇಹ ಸಮಸ್ಯೆಗಳ ನಿವಾರಣೆಯಾಗಿದೆ. ನಿನ್ನ ಆಜ್ಞೆಯಂತೆ ಕರ್ತವ್ಯರಂಗಕ್ಕೆ ಧುಮುಕುವೆ" ಎಂದು ಅರ್ಜುನನು ಪ್ರಸನ್ನ ಹೃದಯದಿಂದ ಭಕ್ತಿ ಉತ್ಸಾಹಗಳಿಂದ ಪರಮಾತ್ಮನಲ್ಲಿ ನಿವೇದಿಸುತ್ತಾನೆ. ಅರ್ಜುನನಿಗೆ ಬಂದಿರುವ ಸಂದರ್ಭ ಸನ್ನಿವೇಶಗಳು ನಮ್ಮೆಲ್ಲರ ಜೀವನದಲ್ಲಿ ಅನುದಿನವೂ ಸಂಭವಿಸುತ್ತವೆ. ಗೀತೆಯ ಸಂದೇಶವು ಅರ್ಜುನನಿಗೆ ಮಾತ್ರ ಪರಿಸೀಮಿತವಲ್ಲ. ಜಗತ್ತಿನ ಮಾನವರೆಲ್ಲರ ಜೀವನದ ಗೊಂದಲ ವಿಪ್ಲವಗಳನ್ನು ಪರಿಹರಿಸಿ, ಉದಾತ್ತ ರೀತಿಯ ಕರ್ತವ್ಯದ ಸ್ಫೂರ್ತಿಯನ್ನು ಗೀತೆಯು ನಮಗೆ ನೀಡುತ್ತಿದೆ. ಭಾರತದ ಮಹಾ ಯುದ್ಧದಲ್ಲಿ ಒಂದೇ ರಥದಲ್ಲಿ ಅರ್ಜುನನ ಜೊತೆಗೆ ಶ್ರೀಕೃಷ್ಣನು ಸಾರಥಿಯಾಗಿದ್ದು, ಹೆಜ್ಜೆ ಹೆಜ್ಜೆಗೂ ಸ್ಫೂರ್ತಿದಾತನಾಗಿ ಅವನನ್ನು ಮುನ್ನಡೆಸಿದ್ದಾನೆ. ಅರ್ಜುನನು ನರನಾಗಿದ್ದರೆ ಶ್ರೀಕೃಷ್ಣನು ನಾರಾಯಣನಾಗಿದ್ದಾನೆ. ಈ ನರ-ನಾರಾಯಣರ ಜೊತೆಯಿಂದಲೇ ಅಲ್ಲಿ ವಿಜಯ-ಭೂತಿ-ನೀತಿಗಳ ಸಮಾವೇಶವಾಗಿದೆ.

**ಯತ್ರ ಯೋಗೇಶ್ವರಃ ಕೃಷ್ಣೋ**
**ಯತ್ರ ಪಾರ್ಥೋ ಧನುರ್ಧರಃ ।**
**ತತ್ರ ಶ್ರೀರ್ವಿಜಯೋ ಭೂತಿಃ**
**ಧ್ರುವಾ ನೀತಿರ್ಮತಿರ್ಮಮ ॥**

ನಮ್ಮ ಜೀವನದ ಯುದ್ಧರಂಗದಲ್ಲಿಯೂ ಈ ನರರಿಗೆ ನಾರಾಯಣನೇ ಸಾರಥಿಯಾಗಿರಬೇಕು. ನರರಿಗೆ ತಮ್ಮ ಜೀವನದಲ್ಲಿ ನಾರಾಯಣನ ವಿಯೋಗವಾದುದರಿಂದಲೇ ಇಂದು ಎಲ್ಲೆಡೆಗಳಲ್ಲಿಯೂ ಅನೀತಿ ಮತ್ತು ಆರ್ಥಿಕ ಸಂಕಟದ ದುಃಖದ ದೃಶ್ಯವನ್ನು ನಾವು ನೋಡುತ್ತಿರುವೆವು. ನಮ್ಮ ಜೀವನದಲ್ಲಿ ನರ-ನಾರಾಯಣರ ಸಮಾಗಮವಾಗಬೇಕು. ಭಗವಂತನನ್ನು ನಾವು ನಮ್ಮ ಸಾರಥಿ, ಸ್ಫೂರ್ತಿದಾತ ಹಾಗೂ ಮಾರ್ಗದರ್ಶಕನನ್ನಾಗಿ ಆರಿಸಬೇಕು. ಆಗಲೇ ನಮ್ಮ ಜೀವನವು ದೈವೀಸಂಪತ್ತಿನ ಆಗರವಾಗುವುದು.

⌘ ⌘ ⌘

# ಟಿಪ್ಪಣಿಗಳು

ಪು. 3 **ದೋಹನ :** ಹಾಲು ಕರೆಯುವದು. ಉಪನಿಷತ್ತುಗಳ ಸಾರದ ಬೋಧನೆಗೆ ಇಲ್ಲಿ 'ದೋಹನ'ವೆಂಬ ಸಂಕೇತವನ್ನು ಕೊಡಲಾಗಿದೆ.

ಪು. 3 **ಜ್ಞಾನಮುದ್ರೆ :** ಹೆಬ್ಬೆರಳು ಮತ್ತು ತೋರುಬೆರಳನ್ನು ಒಂದು ವಿಶೇಷ ರೀತಿಯಲ್ಲಿ ಜೋಡಿಸಿದಾಗ ಅದು ಜ್ಞಾನಮುದ್ರೆಯಾಗುವದು. ಉಪದೇಶಕಾಲದಲ್ಲಿ ಈ ಮುದ್ರೆ ಇರುವದು. ಹಸು ಕರೆಯುವಾಗಲೂ ಬೆರಳುಗಳಲ್ಲಿ ಇದೇ ಆಕಾರವಿರುತ್ತದೆ.

ಪು. 10. **ಪ್ರಜ್ಞಾವಾದ :** ಶಾಸ್ತ್ರೀಯ ವಿಚಾರವನ್ನು ಮಾಡದೆ ಕೇವಲ ತನ್ನ ಬುದ್ಧಿಯ ಆಧಾರದಿಂದ ವ್ಯಕ್ತಪಡಿಸಿದ ಅಭಿಪ್ರಾಯ.

ಪು. 12. **ಅವಭೃಥ :** ಯಜ್ಞದ ಮುಕ್ತಾಯದಲ್ಲಿ ಮಾಡುವ ಪವಿತ್ರ ಸ್ನಾನ.

ಪು. 17. **ಉಪಾಧಿ :** ಪ್ರತಿಬಿಂಬಕ್ಕೆ ಹಿನ್ನೆಲೆಯಾದ ವಸ್ತು. ಮುಖದ ಪ್ರತಿಬಿಂಬವು ಕನ್ನಡಿಯಲ್ಲಿ ತೋರುವದರಿಂದ ಕನ್ನಡಿಯು ಉಪಾಧಿಯಾಗಿದೆ.

ಪು. 17. **ಜೀವನು ಪರಮಾತ್ಮನ ಪ್ರತಿಬಿಂಬ :** ಜೀವನು ಪರಮಾತ್ಮನಂತೆ ಜ್ಞಾನಾನಂದಮಯನಾಗಿದ್ದರೂ ಪ್ರತಿಬಿಂಬದಂತೆ ಸರ್ವಾತ್ಮನಾ ಪರಮಾತ್ಮನನ್ನಾಶ್ರಯಿಸಿದವನೆಂಬ ಅಭಿಪ್ರಾಯದಿಂದಲೇ ಜೀವನು ಪರಮಾತ್ಮನ ಪ್ರತಿಬಿಂಬನೆನ್ನಲಾಗಿದೆ. ಪ್ರತಿಬಿಂಬವು ಅನೇಕ ಧರ್ಮಗಳಲ್ಲಿ ಬಿಂಬಕ್ಕೆ ಸದೃಶವಾಗಿರುತ್ತದೆ. ಅದರಂತೆ ಪ್ರತಿಬಿಂಬದ ಪ್ರತಿಯೊಂದು ಕ್ರಿಯೆಗೂ ಬಿಂಬದ ಕ್ರಿಯೆಯೇ ಕಾರಣ. ಜೀವ ಈಶ್ವರರಿಗೆ ಇದೇ ರೀತಿಯ ಸಂಬಂಧವಿದೆ.

ಪು. 17. **ಸ್ವರೂಪಭೂತವಾದ ಚಿದಾನಂದಮಯರೂಪ :** ಆತ್ಮನು ಸ್ವಯಂಪ್ರಕಾಶನು. ಅವನು ಸ್ವತಃ ಜ್ಞಾನರೂಪಿಯಾದುದರಿಂದ ಇಂದ್ರಿಯಗಳ ಸಹಾಯವಿಲ್ಲದೆ ಸ್ವತಃ ತನ್ನನ್ನು ಸದಾ ಅರಿತುಕೊಳ್ಳುವನು. ಜಡವಸ್ತುಗಳಿಗೆ ಈ ಶಕ್ತಿಯಿಲ್ಲ. ಈ ಚೈತನ್ಯ ಶಕ್ತಿ ಇರುವದರಿಂದಲೇ ಆತ್ಮನು ಚಿನ್ಮಯನಾಗಿರುವನು. ವಿಷಯ ಪದಾರ್ಥಗಳಿಂದ ಉಂಟಾಗುವ ಸುಖಕ್ಕಿಂತ ವ್ಯತಿರಿಕ್ತವಾದ ಶಾಶ್ವತ ಆನಂದವು ಆತ್ಮನಲ್ಲಿ ಅಡಕವಾಗಿದೆ.

ಬೆಳಕು ದೀಪದಿಂದ ಬೇರೆಯಲ್ಲ. ಸಿಹಿಯು ಸಕ್ಕರೆಯಿಂದ ಪ್ರತ್ಯೇಕವಿಲ್ಲ. ಅದರಂತೆ ಈ ಚೈತನ್ಯ ಮತ್ತು ಆನಂದಗಳನ್ನು ಆತ್ಮನಿಂದ ಬೇರ್ಪಡಿಸಲಾರೆವು. ಆದುದರಿಂದ ಆತ್ಮನ ನಿಜಸ್ವರೂಪವು ಚಿದಾನಂದಮಯವಾಗಿದೆ.

**ಪು. 28. ತ್ರೈಗುಣ್ಯ ವಿಷಯ :** ಸತ್ವ ರಜಸ್ಸು ತಮಸ್ಸುಗಳು ಪ್ರಕೃತಿಯ ಮೂರು ಗುಣಗಳು. ಈ ಸಂಸಾರದಲ್ಲಿಯೂ ಸ್ವರ್ಗದಲ್ಲಿಯೂ ಸಿಗುವ ಸುಖವೆಲ್ಲವೂ ಪ್ರಕೃತಿಯ ಈ ಗುಣಗಳಿಂದಲೇ ಹುಟ್ಟುವವು. ಮುಕ್ತಿಸುಖವೊಂದೇ ಶಾಶ್ವತವಾಗಿದ್ದು ಪ್ರಕೃತಿಯಿಂದ ಜನ್ಯವಾದುದಲ್ಲ. ಪ್ರಕೃತಿಯಿಂದ ಹುಟ್ಟುವ ಸ್ವರ್ಗ ಹಾಗೂ ಸಾಂಸಾರಿಕ ಸುಖವೆಲ್ಲವೂ ತ್ರೈಗುಣ್ಯವಾಗಿದ್ದು ಅಂತಹ ಸುಖವನ್ನು ಕೊಡುವ ಕಾಮ್ಯಕರ್ಮಗಳೂ ತ್ರೈಗುಣ್ಯಗಳಾಗಿವೆ. ವೇದದ ಅರ್ಥವನ್ನು ಸರಿಯಾಗಿ ತಿಳಿಯದೆ ಮೇಲಿಂದ ಮೇಲೆ ನೋಡುವಾಗ ವೇದದಿಂದ ಇಂತಹ ಕಾಮ್ಯಕರ್ಮಗಳ ಬೋಧೆಯಾಗುವದರಿಂದ ವೇದಗಳು ತ್ರೈಗುಣ್ಯ ವಿಷಯಗಳೆಂದು ಗೀತೆಯಲ್ಲಿ ಹೇಳಿದೆ.

**ಪು. 92. ತ್ರೈವಿದ್ಯರು :** ಮೂರು ವೇದಗಳ ಆಪಾತ ಅರ್ಥವನ್ನು ಮಾತ್ರ ಗ್ರಹಿಸಿ ಅದರ ನಿಜಾರ್ಥವನ್ನು ತಿಳಿಯದೆ ವಿವಿಧ ದೇವತೆಗಳನ್ನು ಆರಾಧಿಸುವವರು.

**ಪು. 119. ಕುಮಾರಿಲಭಟ್ಟರು :** ಆದಿಶಂಕರಾಚಾರ್ಯರ ಸಮಕಾಲೀನರಾದ ಪ್ರಸಿದ್ಧ ಮೀಮಾಂಸಕರು. ಬೌದ್ಧಮತವನ್ನು ನಿರ್ನಾಮಗೊಳಿಸುವ ಉದ್ದೇಶದಿಂದ ವೇಷ ಪಲ್ಲಟಿಸಿಕೊಂಡು ಆಗಿನ ನಾಲಂದದ ವಿಶ್ವವಿದ್ಯಾಲಯದಲ್ಲಿ ಬೌದ್ಧಗ್ರಂಥಗಳ ರಹಸ್ಯವನ್ನು ಅಧ್ಯಯನ ಮಾಡುತ್ತಿದ್ದರು. ಬೌದ್ಧ ಗುರುಗಳು ನಿಷ್ಕಾರಣವಾಗಿ ವೇದನಿಂದೆ ಮಾಡುವದನ್ನು ಕೇಳಿ ಭಟ್ಟರ ಕಣ್ಣುಗಳಲ್ಲಿ ನೀರೂರಿತು. ಅವರ ನಿಜಸ್ವರೂಪ ಬಯಲಾಯಿತು. ಬೌದ್ಧಶಿಷ್ಯರೆಲ್ಲ ಸೇರಿ ಅವರನ್ನು ಮಹಡಿಯಿಂದ ಕೆಳಗೆ ಕೆಡವಿದರು. ಈ ಭಟ್ಟರೇ ಮುಂದೆ ಬೌದ್ಧಮತವನ್ನು ಖಂಡಿಸಿ ಭಟ್ಟ ಮತವನ್ನು ಸ್ಥಾಪಿಸಿದ ಆಚಾರ್ಯರು.

**ಪು. 147. ಅಪರೋಕ್ಷಜ್ಞಾನ:** ಪ್ರತ್ಯಕ್ಷ ಅರ್ಥಾತ್ ಇಂದ್ರಿಯಗಳಿಂದ ಬರುವ ಜ್ಞಾನ.

**ಪು. 148. ಪರೋಕ್ಷಜ್ಞಾನ:** ಶಾಸ್ತ್ರಗಳ ಅಥವಾ ಬಲ್ಲವರ ವಾಕ್ಯ ಹಾಗೂ ಅನುಮಾನದಿಂದ ಬರುವ, ಇಂದ್ರಿಯಜನ್ಯವಲ್ಲದ ಜ್ಞಾನ.

**ಪು. 164. ಔಪಾಧಿಕರೂಪ:** ಚೈತನ್ಯ ಆನಂದಗಳು ಜೀವನ ಸ್ವಾಭಾವಿಕ ರೂಪ. ಪ್ರಕೃತಿ ರೂಪ ಉಪಾಧಿಯಿಂದ ಜೀವನಲ್ಲಿ ಉಂಟಾಗುವ ಅಸ್ವಾಭಾವಿಕವಾದ ರೂಪ ಆಕಾರಗಳೇ ಔಪಾಧಿಕ. ಶರೀರ, ಅಂತಃಕರಣ, ರಾಗ, ದ್ವೇಷ, ಅಜ್ಞಾನ ಇವೆಲ್ಲ ಔಪಾಧಿಕ ರೂಪಗಳು.

**ಪು. 166. ಪರಮಾತ್ಮ ಸದೃಶವಾದ ವ್ಯಕ್ತಿತ್ವ:** ಜೀವ ಪರಮಾತ್ಮರಿಗೆ ಭಿನ್ನತೆ ಇದ್ದರೂ ಪರಮಾತ್ಮನಂತೆ ಜೀವನೂ ಜ್ಞಾನಾನಂದ ರೂಪನೇ ಆಗಿರುವನು.

**ಪು. 176. ಪ್ರಾಕೃತ:** ಪ್ರಕೃತಿಯಿಂದ ಹುಟ್ಟಿದುದು. ಉದಾ: ಶರೀರ, ಅಂತಃಕರಣ ಇತ್ಯಾದಿ.

**ಪು. 176. ಅಪ್ರಾಕೃತ:** ಪ್ರಕೃತಿಜನ್ಯವಲ್ಲದುದು. ಉದಾ: ಜೀವ ಪರಮಾತ್ಮರ ಸ್ವಾಭಾವಿಕ ಗುಣಧರ್ಮಗಳು.

**ಪು. 201. ಚಿತ್‌ಪ್ರಕೃತಿ:** ಜಡವಾದ ಒಂದು ಮೂಲವಸ್ತುವಿನ ಪರಿಣಾಮವಾಗಿಯೇ ಈ ಜಗತ್ತು ಇಷ್ಟು ವಿಸ್ತಾರವಾಗಿ ಬೆಳೆದಿದೆ. ಆ ಮೂಲವಸ್ತುವೇ ಜಡ ಪ್ರಕೃತಿಯು. ಇದರ ಒಳಗೆ ಅಧಿಷ್ಠಾತೃವಾದ ದೇವತೆಯೇ ಚಿತ್‌ಪ್ರಕೃತಿ. ಪರಮಾತ್ಮನ ಅಧೀನವಾಗಿ ಈ ದೇವತೆಯು ಜಡಪ್ರಕೃತಿಯ ಒಳಗಿದ್ದು ಅದರಿಂದ ಕಾರ್ಯವನ್ನು ಮಾಡಿಸುತ್ತದೆ. ಈ ಚಿತ್‌ಪ್ರಕೃತಿಯನ್ನೇ ಶ್ರೀತತ್ತ್ವವೆಂದೂ ಲಕ್ಷ್ಮೀದೇವಿಯೆಂದೂ ಕರೆಯುತ್ತಾರೆ. ಇವಳೇ ಜಗತ್ತಿನ ಮಾತೆಯೂ ಅಹುದು.

**ಪು. 202. ವ್ಯಕ್ತ, ಅವ್ಯಕ್ತ:** ದೃಶ್ಯವಾದ ಕಾರ್ಯಪ್ರಪಂಚವೆಲ್ಲ ವ್ಯಕ್ತ. ಇದರ ಕಾರಣವಾದ ಪ್ರಕೃತಿಯನ್ನು ಅವ್ಯಕ್ತವೆಂದು ಹೇಳಲಾಗಿದೆ. ಪ್ರಕೃತಿಯ ಅಧಿಷ್ಠಾತ್ರಿಯಾದ ಶ್ರೀತತ್ತ್ವವನ್ನೂ ಅವ್ಯಕ್ತವೆಂದು ಕರೆಯಬಹುದು. ಅದೇ ಪ್ರಕಾರ, ನಿರ್ಗುಣ ಬ್ರಹ್ಮವನ್ನು ಅವ್ಯಕ್ತವೆಂದೂ ಸಗುಣವನ್ನು ವ್ಯಕ್ತವೆಂದೂ ಕರೆಯಲಾಗುವದು.

**ಪು. 203. ಸಗುಣ, ನಿರ್ಗುಣ:** ಪರಮಾತ್ಮನು ಸಗುಣನೆನ್ನುವಾಗ ಜ್ಞಾನಾನಂದಾದಿ ಸದ್ಗುಣಗಳಿಂದ ಯುಕ್ತನೆಂದರ್ಥ. ನಿರ್ಗುಣನೆಂದಾಗ ಪ್ರಕೃತಿಯ ಮೂರು

ಗುಣಗಳೆಂದು ಪ್ರಸಿದ್ಧವಾದ ಸತ್ವ, ರಜಸ್ಸು, ತಮಸ್ಸುಗಳಿಂದ ಅತೀತನೆಂದರ್ಥ.

**ಪು. 203. ಸ್ವರೂಪಾನಂದ:** ಆತ್ಮನ ಸ್ವರೂಪದಲ್ಲಿ ಸ್ವಾಭಾವಿಕವಾಗಿ ಅಡಕವಾಗಿರುವ ಶಾಶ್ವತವಾದ ಆನಂದ.

**ಪು. 212. ಕ್ಷೇತ್ರ:** ಪ್ರಪಂಚ.

**ಪು. 212. ಕ್ಷೇತ್ರಜ್ಞ:** ಪ್ರಪಂಚವನ್ನು ಪೂರ್ಣ ತಿಳಿದ ಪರಮಾತ್ಮ.

**ಪು. 213. ಜ್ಞೇಯ:** ತಿಳಿಯಬೇಕಾದ ವಸ್ತು.

**ಪು. 213. ಜಿಜ್ಞಾಸು:** ತಿಳಿಯಬಯಸುವವನು.

**ಪು. 215. ಆರ್ಜವ:** ಪ್ರಾಮಾಣಿಕತನ.

**ಪು. 218. ಪಂಚಬೇಧಗಳು :** ಐದು ಭೇದಗಳು (1) ಜೀವ ಪರಮಾತ್ಮರ ಭೇದ (2) ಜೀವರಿಗಿರುವ ಅನ್ಯೋನ್ಯ ಭೇದ (3) ಜಡ ಮತ್ತು ಜೀವರ ಭೇದ (4) ಜಡಪದಾರ್ಥಗಳಿಗಿರುವ ಪರಸ್ಪರ ಭೇದ (5) ಜಡ ಮತ್ತು ಪರಮಾತ್ಮರ ಭೇದ.

**ಪು. 223. ವ್ಯಷ್ಟಿರೂಪದಿಂದ:** ಒಂದೊಂದಾಗಿ.

**ಪು. 223. ಸಮಷ್ಟಿರೂಪದಲ್ಲಿ:** ಒಟ್ಟಾಗಿ.

**ಪು. 224. ಉಪಾದಾನವಸ್ತು:** ಮೂಲವಸ್ತು, ಉದಾ: ಮಡಿಕೆಗೆ ಮಣ್ಣು.

**ಪು. 228. ಕ್ಷರಪುರುಷರು:** ದೇಹನಾಶವುಳ್ಳ ಜೀವರು.

**ಪು. 228. ಅಕ್ಷರಪುರುಷರು:** ಪ್ರಕೃತಿಜನ್ಯವಲ್ಲದ ನಿತ್ಯದೇಹವುಳ್ಳ ಲಕ್ಷ್ಮೀದೇವಿಯು.

ಗೀತೆ ಜೀವನ ಶಾಸ್ತ್ರ -

ಕರ್ಮವು ಆತ್ಮದ ಬಾಗಿಲನ್ನು ತೆರೆಯುವ
ಬೀಗದ ಕೈ. ಬೀಗದ ಕೈಯಿಂದ ಬಾಗಿಲನ್ನು
ತೆರೆಯುವಂತೆ ಮುಚ್ಚಲೂಬಹುದು.
ಸ್ವಾರ್ಥಪೂರ್ಣವಾದ ಕರ್ಮವು ಆತ್ಮದ
ಬಾಗಿಲ ಬಂಧನವನ್ನು ಬಿಗಿಗೊಳಿಸಿದರೆ
ನಿಷ್ಕಾಮವೂ ಭಕ್ತಿ ಭರಿತವೂ ಆದ ಕರ್ಮವು
ಆ ಆನಂದವನ್ನು ತೆರೆದು ಅಲ್ಲಿಯ ಅಮೂಲ್ಯ
ನಿಧಿಯನ್ನು ಪ್ರಕಟಗೊಳಿಸುವುದು.